[illegible] ಪ್ರಕಟಣೆ:—

# ಕ್ರಾಂತಿ ಪಥದಲ್ಲಿ

## ಜಯಪ್ರಕಾಶ ನಾರಾಯಣ

ಸಂಪಾದಕರು:

ಯುಸುಫ್ ಮೆಹರ್ ಅಲ್ಲಿ

ಕನ್ನಡಿಸಿದವರು:

ಶ್ರೀ. ನೆಗಳೂರು ಶ್ರೀನಿವಾಸರಾಯರು ಎಂ. ಎ. ಬಿ. ಟಿ.
ಶ್ರೀ. ಮ. ಗ. ಸೆಟ್ಟಿ

ಸಾಹಿತ್ಯ ಭಾಂಡಾರ
ಹುಬ್ಬಳ್ಳಿ

ಪ್ರಕಾಶಕರು:
ಶ್ರೀ. ರಂ. ರಾ. ದಿವಾಕರ
ಕರ್ನಾಟಕ ಶಿಕ್ಷಣ ಸಮಿತಿಯ ಕಾರ್ಯದರ್ಶಿಗಳು
ಹುಬ್ಬಳ್ಳಿ
(ಸಮಾಜವಾದೀ ಪಕ್ಷದ ಕರ್ನಾಟಕ ಶಾಖೆಯ ಪರವಾಗಿ)

೧೯೪೭

ಬೆಲೆ ೩—೮—೦

ಮುದ್ರಕರು:
೧-೧೨೦ ಪುಟಗಳ ವರೆಗೆ ವಿ. ರಾಮಕೃಷ್ಣ
ಅಂಡ್ ಕೋ, ಬೆಂಗಳೂರು ನಗರ
ಉಳಿದುದೆಲ್ಲ ಎಚ್. ಬಿ. ನವಲೂರು
ಹಿಂದಮಾತಾ ಮುದ್ರಣಾಲಯ
ಧಾರವಾಡ

# ಪ್ರಕಾಶಕರ ಮಾತು



ಜಗತ್ತಿನಲ್ಲಿ ಸಾಮ್ರಾಜ್ಯವಾದ, ನಾಜೀವಾದ, ಫಾಸೀವಾದ, ಮುಂತಾದ ಎಷ್ಟೋ 'ವಾದ'ಗಳಿವೆ. ಪ್ರತಿಯೊಂದು 'ವಾದ'ವೂ ಜಗತ್ತಿನ ಕಲ್ಯಾಣ ತನ್ನ ತತ್ವಗಳ ಅನುಷ್ಠಾನದಿಂದಲೇ ಸಾಧ್ಯವೆಂಬುದನ್ನು ದೃಢವಾಗಿ ನಂಬಿದೆ. ಇಂಥ ಹಲವು 'ವಾದ'ಗಳಲ್ಲಿ ಸಾಮ್ಯವಾದವೂ ಒಂದು. ಸಾಮ್ಯವಾದವು ಇಂದು ಒಳ್ಳೆಯ ಬೆಳೆವಣಿಗೆಯ ಸ್ಥಿತಿಯಲ್ಲಿದೆ. ಯಾವ ರಾಷ್ಟ್ರವೂ ಅದರ ತತ್ವಗಳನ್ನು, ಆದರ್ಶಗಳನ್ನು, ರೀತಿ ನೀತಿಗಳನ್ನು ಅಲಕ್ಷಿಸಿ ನಡೆಯುವಂತಿಲ್ಲ. ಹಿಂದುಸ್ಥಾನದಲ್ಲಿಯೂ ಸಾಮ್ಯವಾದದ ಪ್ರಚಾರ ತಕ್ಕಷ್ಟು ಪ್ರಮಾಣದಿಂದ ಆಗುತ್ತಲಿದೆ. ಹಲವು ಶುದ್ಧ ಸಾಮ್ಯವಾದೀ ಮುಂದಾಳುಗಳೂ ನಮ್ಮಲ್ಲಿದ್ದಾರೆ. ಈ ಗ್ರಂಥ, ಇಂತಹ ಅಚ್ಚ ಸಾಮ್ಯವಾದಿಗಳಲ್ಲಿ ಒಬ್ಬರಾದ ಶ್ರೀ. ಜಯಪ್ರಕಾಶ ನಾರಾಯಣರ ಹಲವು ವಿಚಾರಗಳನ್ನು ಪ್ರತಿಪಾದಿಸುತ್ತದೆ.

ಹಲವು ರಾಷ್ಟ್ರಗಳಂತೆ, ಜಗತ್ತಿಗೆ ಭಾರತವೂ ಒಂದು 'ವಾದ'ವನ್ನು ಕಾಣಿಕೆಯಾಗಿ ಕೊಟ್ಟದೆ. ಅದು ಗಾಂಧೀವಾದ. ಹಿಂದುಸ್ಥಾನವು ಗಾಂಧೀವಾದವನ್ನು—ನಿಜ ಭಕ್ತಿಯಿಂದಲ್ಲದಿದ್ದರೂ—ಅನುಷ್ಠಿಸಿ ತಕ್ಕಷ್ಟು ಪ್ರಗತಿ ಹೊಂದಿದೆ. ಇಲ್ಲಿ ಸಾಮ್ರಾಜ್ಯವಾದಕ್ಕೂ ಪ್ರಜಾವಾದಕ್ಕೂ ನಡೆದ ಹೋರಾಟದಲ್ಲಿ ಪ್ರಜಾವಾದವು ಸಾಮ್ರಾಜ್ಯವಾದವನ್ನು ಮಣ್ಣು ಮುಕ್ಕಿಸಿದ್ದು ಐತಿಹಾಸಿಕ ಸಂಗತಿ. ಈ ಗೆಲುವಿಗೆ ಕಾರಣವಾದುದು ಗಾಂಧೀವಾದವೆಂಬಲ್ಲಿ ಸಂದೇಹವಿಲ್ಲ. ಇದರ ಪರಿಣಾಮದಿಂದ ಹಿಂದುಸ್ಥಾನದಲ್ಲಿ ಗಾಂಧೀವಾದವನ್ನು ಕುರಿತು ಒಂದು ಬಗೆಯ ವಿಶ್ವಾಸವು ಬೇರೂರುತ್ತಲಿದೆ. ಆದರೆ ಬಿಸಿ ನೆತ್ತರಿನ ತರುಣರ ಮನಸ್ಸು ಸಾಮ್ಯವಾದದತ್ತ ಒಲೆಯುತ್ತಿರುವುದೂ ಸುಳ್ಳಲ್ಲ. ಜನಸಾಮಾನ್ಯರಲ್ಲಿ ಮಾತ್ರ ಈ ಎರಡೂ ವಾದಗಳನ್ನು ಕುರಿತು ತಕ್ಕಷ್ಟು ಸ್ಪಷ್ಟ ಜ್ಞಾನವಿಲ್ಲ. ಒಂದು ತರದ ಮೂಢ ನಂಬಿಗೆಯೇ ಪಸರಿಸಿದೆ. ಆದುದರಿಂದ ಗಾಂಧೀ ಸಾಹಿತ್ಯವನ್ನು ಕುರಿತು ಹಲವು ಗ್ರಂಥಗಳನ್ನು ಓದಿದ ಕನ್ನಡ ಜನಕ್ಕೆ ಜಯ

ಪ್ರಕಾಶರಂಥ ಒಬ್ಬ ಚೊಕ್ಕ ಸಾಮ್ಯವಾದಿಯ ವಿಚಾರಸರಣಿ ತಿಳಿಯುವುದು ಅಗತ್ಯವೆಂದು ನಮಗೆ ತೋರಿತು. ಈ ಉದ್ದೇಶವೇ ನಮ್ಮನ್ನು ಈ ಗ್ರಂಥ ಪ್ರಕಾಶನ ಕಾರ್ಯದಲ್ಲಿ ತೊಡಗಿಸಿತು.

ಈ ಪುಸ್ತಕವನ್ನು ಆದಷ್ಟು ಬೇಗ ಪ್ರಕಟಿಸಬೇಕೆಂಬ ಅವಸರದಲ್ಲಿ ಭಾಷಾಂತರಕಾರರಾದ ಇಬ್ಬರಿಗೂ ಇದನ್ನು ಮತ್ತೊಮ್ಮೆ ಓದಲು ಸಾಧ್ಯವಾಗಲಿಲ್ಲ. ಹೀಗಾಗಿ ಅಲ್ಲಲ್ಲಿ ಕೆಲವು ತಪ್ಪುಗಳು ಉಳಿದುವು. ಆದ್ದರಿಂದ ಮೂಲ ಪುಸ್ತಕವನ್ನು ಎದುರಿಗೆ ಇಟ್ಟುಕೊಂಡು ಅಲ್ಲಲ್ಲಿ ಸಾಧ್ಯವಿದ್ದಷ್ಟು ತಿದ್ದಿದವರು ಶ್ರೀ. ಮ. ಗೋವಿಂದರಾಯರು. ಅವರಿಗೂ, ಇದನ್ನು ಕನ್ನಡಿಸಿದ ಶ್ರೀ. ನೆಗಳೂರು ಮತ್ತು ಶ್ರೀ. ಮ. ಗ. ಸೆಟ್ಟಿಯವರಿಗೂ, ಇದರ ಪ್ರಕಟನೆಗೆ ಅವಕಾಶವನ್ನೊದಗಿಸಿದ ಕರ್ನಾಟಕ ಪ್ರಾಂತೀಯ ಸಮಾಜವಾದೀ ಪಕ್ಷಕ್ಕೂ ನಾವು ಋಣಿಗಳು.

---

# ಸಂಪಾದಕರ ಮಾತು

ಜಯಪ್ರಕಾಶರು ಇಂದಿನ ಭಾರತದಲ್ಲಿ ಒಬ್ಬ ಅತ್ಯಂತ ಜನಪ್ರಿಯ, ಶ್ರೇಷ್ಠ, ವಿಶಿಷ್ಟ ವ್ಯಕ್ತಿ. ಆದುದರಿಂದ ಅವರ ವಿಚಾರಗಳನ್ನೂ ಕಾರ್ಯಕ್ರಮದ ರೂಪರೇಷೆಗಳನ್ನೂ ಅರಿತುಕೊಳ್ಳಬೇಕೆಂಬ ಲವಲವಿಕೆ ಜನತೆಯಲ್ಲಿ ಉಂಟಾಗುವುದು ಸಹಜ. ಈ ಒತ್ತಾಯದ ಬೇಡಿಕೆಯನ್ನು ಪೂರೈಸುವುದೇ ಈ ಪುಸ್ತಕದ ಉದ್ದೇಶ.

ಅವರ ಪ್ರಕಟನೆ, ಭಾಷಣ ಮತ್ತು ಲೇಖನಗಳ ಸಂಗ್ರಹದ ಪ್ರಥಮ ಪ್ರಯತ್ನವಿದು. ಜಯಪ್ರಕಾಶರು ಈಗ ನಮ್ಮೊಡನೆ ಇದ್ದಾರೆಂಬುದು ಸಂತೋಷದ ಮಾತಾದರೂ ಈ ಕೆಲಸವನ್ನು ಕೈಕೊಂಡಾಗ ಇನ್ನೂ ಸೆರೆಯಲ್ಲಿದ್ದರು. ಈ ಸಂಕಲನದಲ್ಲಿ ಸೇರಿದ ಬರಹಗಳ ಆಯ್ಕೆ ಮತ್ತು ಪದ್ಧತಿಯ ಹೊಣೆ ನನ್ನದೇ ಹೊರತು ಜಯಪ್ರಕಾಶರದಲ್ಲವೆಂಬುದನ್ನು ಹೇಳುವ ಅಗತ್ಯವಿಲ್ಲ. ಇದರಲ್ಲಿ ಪ್ರಕಟಿಸಿದ ಅವರ ವ್ಯಕ್ತಿಚಿತ್ರವನ್ನು 'ಭಾರತದ ಮುಂದಾಳುಗಳು' ಎಂಬ ಗ್ರಂಥದ ಪ್ರಥಮ ಸಂಪುಟದಿಂದ ಆಯ್ದುಕೊಂಡಿದೆ.

ಈ ಪುಸ್ತಕ ಪ್ರಕಟವಾಗುತ್ತಿರುವುದು ಆಗಸ್ಟ ೯ರಲ್ಲಿ—೧೯೪೬ರ 'ಭಾರತದಿಂದ ತೊಲಗಿರಿ' ಬಂಡಾಯದ ನಾಲ್ಕನೇ ಸಾಂವತ್ಸರಿಕೋತ್ಸವದ ದಿನ. ಜಯಪ್ರಕಾಶರು ಆ ಕಾಲದಲ್ಲಿ ಸೆರೆಯಲ್ಲಿದ್ದರು. ಆ ಬಳಿಕ ಸ್ವಲ್ಪ ದಿನಗಳಲ್ಲಿ ಅವರು ಹಜಾರಿಬಾಗ್ ಕೇಂದ್ರ ಸೆರೆಮನೆಯಿಂದ ಧೈರ್ಯದಿಂದ, ವಿಚಿತ್ರವಾಗಿ ನುಸುಳಿಬಿಟ್ಟ ರೀತಿಯೂ ಸರಕಾರವನ್ನು ಪ್ರತಿಭಟಿಸುವ ಶಕ್ತಿಯನ್ನು ಚೇತರಿಸಿ ಸುವ್ಯವಸ್ಥಿತಗೊಳಿಸಿದ ಅದ್ಭುತ ಸಾಹಸವೂ ಈಗ ಇತಿಹಾಸದ ಸಂಗತಿಗಳಾಗಿವೆ. ಈ ಪುಸ್ತಕವು ನಮ್ಮ ರಾಜಕೀಯ ಸಾಹಿತ್ಯದಲ್ಲಿ ಬಹುದಿನಗಳಿಂದ ಕಂಡುಬರುವ ಒಂದು ಕೊರತೆಯನ್ನು ನೀಗಿಸದೆ ಇರಲಾರದು.

ಮುಂಬಯಿ
೧೯೪೬ನೆ ಆಗಸ್ಟ್ ೧

**ಯುಸುಫ್ ಮೆಹರಲ್ಲಿ**

# ಪರಿವಿಡಿ



# ಜಯಪ್ರಕಾಶ್

ಬರೆದವರು:— **ಶ್ರೀ. ಯುಸುಫ್ ಮೊಹರಲ್ಲಿ**

೧೯೪೬ರಲ್ಲಿ ಒಂದು ದಿನ ತನ್ನ ಶಿಕ್ಷೆಯ ಅವಧಿಯನ್ನು ಮುಗಿಸಿದ, ಎತ್ತರವಾಗಿ ಎದ್ದು ಕಾಣುವ ವ್ಯಕ್ತಿಯೋರ್ವನ ಬಿಡುಗಡೆಗಾಗಿ ನಾಶಿಕ ಕೇಂದ್ರ ಸೆರೆಮನೆಯ ಬಾಗಿಲು ತೆರೆಯಿತು. ಇಂದಿನ ಘಟನೆಗಳನ್ನು ಬರೆಯುವ ಮುಂದಿನ ಇತಿಹಾಸಕಾರನು ಇದು ೧೯೩೩ನೇ ವರುಷದ ಮಹತ್ವದ ಘಟನೆ ಯೆಂದು ಹೇಳದೆ ಇರಲಾರ. ಏಕೆಂದರೆ ಈ ಬಿಡುಗಡೆಯಿಂದ ಭಾರತದ ರಾಜಕೀಯದಲ್ಲಿ ಹೊಸದೊಂದು ಶಕ್ತಿಯ ಪ್ರವೇಶವಾಯಿತು. ಜಯಪ್ರಕಾಶ ನಾರಾಯಣರು ಸೆರೆಮನೆಯಿಂದ ಒಂದು ವಿಚಾರವನ್ನು, ಒಂದು ಉದ್ದೇಶ ವನ್ನು, ಒಂದು ದೃಷ್ಟಿಯನ್ನು ಒಡಮೂಡಿಸಿಕೊಂಡೇ ಹೊರಗೆ ಬಂದಿದ್ದರು. ಕಾಂಗ್ರೆಸ್ ಸಾಮ್ಯವಾದೀ ಪಕ್ಷದ ಉದಯಕ್ಕೆ ಇದೇ ಕಾರಣವಾಯಿತು.

ಇಂದಿನ ಭಾರತದ ಜನಪ್ರಿಯ, ಮಾನ್ಯ ಮುಂದಾಳುಗಳಲ್ಲಿ ಜಯ ಪ್ರಕಾಶರು ಒಬ್ಬರು. ಆದರೆ ಜಯಪ್ರಕಾಶರ ವ್ಯಕ್ತಿತ್ವ ಎಂತಹ ದೊಡ್ಡದೆಂಬು ದನ್ನು ಕೆಲವು ಜನರು ಮಾತ್ರ ಬಲ್ಲರು. ಇಂತಹ ಆಕರ್ಷಕ ವ್ಯಕ್ತಿಯ ನಿರ್ಮಾಣಕ್ಕೆ ವಿಶಾಲ ಅನುಭವವೂ ಅತುಲ ಸಾಹಸವೂ ಕಾರಣವಾಯಿತೆಂಬು ದನ್ನು ಬಲ್ಲವರು ತೀರ ವಿರಳ.

ಅವರಿಗೆ ಜೀವನದ ಪ್ರಥಮಾನುಭವವಿದೆ. ಅವರ ತಿಳಿಯಾದ ವಿಚಾರ ಗಳಿಗೆ ಅದೇ ಕಾರಣವಿದ್ದರೂ ಇರಬಹುದು. ಅವರು ತಮ್ಮ ಶಿಕ್ಷಣವನ್ನು ಮುಂದುವರಿಸುವುದಕ್ಕಾಗಿ ಅಮೇರಿಕೆಗೆ ತೆರಳಿ ಪಾಠವನ್ನಾರಂಭಿಸಿದ್ದು ಶಾಲೆ ಯಲ್ಲಲ್ಲ, ಹೊಲದಲ್ಲಿ.

೧೯೨೨ನೇ ಅಕ್ಟೋಬರಿನಲ್ಲಿ ಕೆಲಿಫೋರ್ನಿಯಾವನ್ನು ಸೇರಿದಾಗ ವಿಶ್ವ ವಿದ್ಯಾಲಯ ಆರಂಭವಾಗಲು ಇನ್ನೂ ಮೂರು ತಿಂಗಳು ಇದೆ ಎಂಬುದು ಅವ

ರಿಗೆ ತಿಳಿಯಿತು. ಆಗ ಅವರು, ತನ್ನ ವಿದ್ಯಾಭ್ಯಾಸವನ್ನು ಮನೆಯ ಉತ್ಪನ್ನ ದಿಂದ ಸಾಗಿಸುವಷ್ಟು ಅನುಕೂಲವಿಲ್ಲದ್ದರಿಂದ ಹಣ್ಣಿನ ತೋಟವೊಂದರಲ್ಲಿ ಕೆಲಸಕ್ಕೆ ಸೇರಿದರು. ಅಲ್ಲಿ ಅನೇಕ ಭಾರತೀಯರಿದ್ದಾರೆ. ಅವರಲ್ಲಿ ಸಿಕ್ ಮತ್ತು ಪಠಾಣರ ಸಂಖ್ಯೆ ಹೆಚ್ಚಿನದು. ಜಯಪ್ರಕಾಶರು ಒಂದು ಪಠಾಣ ಕೆಲಸಗಾರ ಗುಂಪನ್ನು ಸೇರಿದರು. ಆ ಗುಂಪಿನ ಮುಖ್ಯರಾದ ಶೇರ್‌ಖಾನರು ಬಹಳ ಸುಸ್ವರೂಪಿ. ಖಾನ್ ಅಬ್ದುಲ್ ಗಫುರ್ ಖಾನರ ಇಮ್ಮಡಿ ಅವರ ದೇಹ-ದಾರ್ಢ್ಯ. ಅಸಹಕಾರ ಆಂದೋಲನ ಜಗತ್ತಿನ ಭಾರತೀಯರನ್ನೆಲ್ಲ ಚಕಿತಗೊಳಿಸಿದ್ದುದರಿಂದ ಭಾರತದಿಂದ ಯಾರು ಬಂದರೂ ಅವರಿಗೆ ಉತ್ಸಾಹವೇರುತ್ತಿದ್ದಿತು. ಜಯಪ್ರಕಾಶರು ಅಸಹಕಾರದ ಕರೆಗೆ ಓಗೊಟ್ಟು ಕಾಲೇಜಿಗೆ ಶರಣು ಹೊಡೆದವರೆಂದೂ ತಮ್ಮ ವಿದ್ಯಾರ್ಥಿವೇತನವನ್ನು ತ್ಯಜಿಸಿದವರೆಂದೂ ಗೊತ್ತಾದ ಕೂಡಲೇ ಅವರಿಗೆ ಕೆಲಸ ದೊರೆಯಲು ವಿಲಂಬವಾಗಲಿಲ್ಲ.

ಹಣ್ಣಿನ ಮಾಗಿ ಕೊನೆಗೊಳ್ಳುತ್ತಲಿದ್ದಿತು ಜಯಪ್ರಕಾಶರು ದ್ರಾಕ್ಷೆ, ಬಾದ್ಾಮಿ, ಸೇಬುಹಣ್ಣುಗಳ ಮಧ್ಯದಲ್ಲಿ ಬೆಳಗಿನಿಂದ ನಟ್ಟಿರುಳ ವರೆಗೆ ಅವಿರತವಾಗಿ ದುಡಿಯುತ್ತಿದ್ದರು. ಈ ಹಣ್ಣುಗಳನ್ನು ಹೆಕ್ಕಿ ತೆಗೆದು, ವಿಂಗಡಿಸಿ, ಸುಣ್ಣದಲ್ಲಿ ಅದ್ದಿ, ಗಂಧಕವನ್ನು ಸವರಬೇಕಾಗುತಿದ್ದಿತು. ಆ ಮೇಲೆ ಅವನ್ನು ಒಣಗಿಸಿ, ಚೊಕ್ಕಟಿಸುವುದಕ್ಕಾಗಿ ಕಾರಖಾನೆಗೆ ಕಳಿಸುವುದಿದ್ದಿತು. ಜಯಪ್ರಕಾಶರ ಕೆಲಸ ಬುಟ್ಟಿಯಿಂದ ಬುಟ್ಟಿಗೆ ಅಲೆದು ಕೊಳೆತ ಹಣ್ಣುಗಳನ್ನು ತೆಗೆದೊಗೆಯುವುದಿದ್ದಿತು. ಅವರು ಇಂದಿಗೂ ಮಾಡುತ್ತಿರುವ ಕೆಲಸ ಅದೇ ಎಂದು ತೋರುತ್ತದೆ— ಕಾಂಗ್ರೆಸ್ ಬುಟ್ಟಿಯಿಂದ ಕೊಳೆತ ಹಣ್ಣುಗಳನ್ನು ತೆಗೆದುಹಾಕುವ ಕೆಲಸ.

ಹೀಗೆ ಅವರು ದಿನಕ್ಕೆ ೧೦ ಗಂಟೆಯಂತೆ ವಾರದ ಏಳೂ ದಿನ—ಆದಿತ್ಯವಾರ, ಬಿಡುವಿನ ದಿನ, ಯಾವದೂ ಇಲ್ಲದೆ— ದುಡಿಯುತ್ತಿದ್ದರು. ಆದರೆ ಸಂಬಳವಾದರೋ ಆಕರ್ಷಣೀಯವಾಗಿದ್ದಿತು— ಗಂಟೆಗೆ ೪ ಸೆಂಟು, ಎಂದರೆ ದಿನಕ್ಕೆ ೪ ಡಾಲರು, ಆಗಿನ ವಿನಿಮಯ ದರದ ಮೇರೆಗೆ ದಿನಕ್ಕೆ ೧೪ ರೂಪಾಯಿ. ಈ ಮೊತ್ತ ತರುಣ ಜಯಪ್ರಕಾಶರಿಗೆ ಅಗಣಿತ ಧನವಾಗಿ ಕಂಡಿತು. ಅಂತೂ ಒಂದು ತಿಂಗಳಲ್ಲಿ ಅವರು ಎಂಬತ್ತು ಡಾಲರು ಉಳಿಸಿದರು. ಹಣ್ಣಿನ ಈ ಕ್ಕೊಯಲುಗಾಲವನ್ನು ಮುಗಿಸಿ, ವಿಶ್ವವಿದ್ಯಾಲಯಕ

ಆರಂಭವನ್ನು ಎದುರುನೋಡುವುದಕ್ಕಾಗಿ ಈ ಹಣದ ಬೆಂಬಲದಿಂದ ಅವರು ಬಾರ್ಕಲಿಗೆ ಮರಳಿದರು. ಅಲ್ಲಿ ಬಾಡಿಗೆಯ ಒಂದು ಕೋಣೆಯಲ್ಲಿ ತಮ್ಮ ಅಡಿಗೆ ತಾವೇ ಮಾಡಿಕೊಳ್ಳತೊಡಗಿದರು.

ಕೆಲಿಫೋರ್ನಿಯದಲ್ಲಿ ಒಂದು ಟರ್ಮು ಮುಗಿಯುವಷ್ಟರಲ್ಲಿ ಅವರ ಕೈ ಮತ್ತೆ ಬರಿದಾಯಿತು! ಆದುದರಿಂದ, ಕೆಲಿಫೋರ್ನಿಯಾದ ಕಾಲುಭಾಗ ವಿದ್ಯಾಶುಲ್ಕವಿದ್ದ ಅಯೋವಾ ವಿಶ್ವವಿದ್ಯಾಲಯಕ್ಕೆ ತೆರಳಿದರು. ಈ ಶುಲ್ಕ ತೆರಿಗೆಯ ಸಂಪಾದನೆಗೂ ಅವರು ಒಂದು ಸೇಬಿನ ತೋಟದಲ್ಲಿ ದುಡಿಯ ಬೇಕಾಯಿತು.

ಅಯೋವಾದಿಂದ ವಿಸ್‌ಕೋನ್‌ಸಿನ್ ವಿಶ್ವವಿದ್ಯಾಲಯಕ್ಕೆ ಹೋದರು. ಅಲ್ಲಿ ಅವರ ಜೀವನವು ಒಂದು ಹೊಸದಾರಿಯನ್ನು – ಜೀವನದ ಗೊತ್ತು ಗುರಿಗಳನ್ನು ಸಂಪೂರ್ಣವಾಗಿ ಮಾರ್ಪಡಿಸುವ ಹೊಸದಾರಿಯನ್ನು–ಹಿಡಿಯಿತು.

ಜಯಪ್ರಕಾಶರ ಅವಿಶ್ರಾಂತವಾದ ಮನಸ್ಸು, ಹಾತೊರೆಯುತ್ತಿದ್ದ ಬೆಳಕನ್ನು ಇಲ್ಲಿಯೇ ಕಂಡಿತು. ಸುಸಂಧಿಗಳ ತವರೂರಾದ ಅಮೇರಿಕೆಯಲ್ಲಿ ಕೂಡ ವಿಪುಲ ಐಶ್ವರ್ಯದ ಜೊತೆಗೇ ಉಗ್ರ ಬಡತನವೂ ಬೇರುಬಿಟ್ಟದ್ದನ್ನು ಕಂಡು ಅವರ ಮನಸ್ಸು ಗಾಬರಿಗೊಂಡಿತ್ತು. ಈ ಒಗಟನ್ನು ಬಿಡಿಸುವ ಬಗೆ ಯಾವುದು? ಜನತೆಯ ಬಹುಭಾಗವು ನಿರಂತರ ಬಡತನದ, ಕಷ್ಟದ ಕೊಳಚೆಯಲ್ಲಿ ಬಿದ್ದು ಗಾಸಿಯಾಗುತ್ತಿರುವಾಗ ಎಲ್ಲ ಸುವಸ್ತುಗಳೂ ಕೆಲವರಿಗೆ ಮಾತ್ರ ಮೀಸಲಾಗಿರುವುದೇಕೆ? ಈ ವಿದ್ಯಾಲಯದ ಉತ್ಸಾಹೀ ಸಾಮ್ಯ ವಾದೀ ಪ್ರಾಧ್ಯಾಪಕರೊಬ್ಬರು, ಬಂಡವಲುವಾದಿ ಪದ್ಧತಿಯ ಅಸ್ತಿತ್ವವಿರುವ ವರೆಗೆ ಬಡತನದ ನಿವಾರಣೆ ಸಾಧ್ಯವಿಲ್ಲೆಂದು ಘೋಷಿಸಿದ್ದರು. ಜಯ ಪ್ರಕಾಶರು ಈ ಪ್ರಾಧ್ಯಾಪಕರ ಕಡೆಗೆ ಒಲೆದರು — ಅವರಿಬ್ಬರಲ್ಲಿ ಗಾಢ ಸ್ನೇಹ ವುಂಟಾಯಿತು. ಜಯಪ್ರಕಾಶರು ಮಾರ್ಕ್ಸ್‌ವಾದವನ್ನು ಕುರಿತ ಗ್ರಂಥ ಗಳನ್ನೆಲ್ಲ ಕಬಳಿಸಿ, ತೀವ್ರ ಮಾನಸಿಕ ಹೊಯ್ದಾಟದ ನಂತರ ಬಹು ಬೇಗನೆ ಒಬ್ಬ ಉಗ್ರ ಸಾಮ್ಯವಾದಿಗಳಾದರು. ಅವರ ಜೀವನ ಒಂದು ಹೊಸ ಗುರಿಯ ಕಡೆಗೆ ಸಾಗಿತು. ಅವರು ವಿಜ್ಞಾನಕ್ಕೆ ಶರಣುಹೊಡೆದು ಅರ್ಥ ಶಾಸ್ತ್ರದ ಅಭ್ಯಾಸವನ್ನು ಕೈಕೊಂಡರು. ಎಂ. ಎ. ಪದವಿಗಾಗಿ ಬರೆದ ಅವರ ಪ್ರಬಂಧ ಒಳ್ಳೇ ಮೆಚ್ಚುಗೆ ಪಡೆಯಿತು— ಅವರು ಆ ವಿಶ್ವವಿದ್ಯಾಲಯದ ಅತಿ

ನಿಪುಣ ವಿದ್ಯಾರ್ಥಿಗಳಲ್ಲಿ ಒಬ್ಬರೆಂದು ಹೆಸರಾದರು. ಇಲ್ಲಿಂದ ಮುಂದೆ ನ್ಯೂಯಾರ್ಕಿಗೆ ಹೋದರು. ಅಲ್ಲಿ ಉಗ್ರವಾಗಿ ಬೇನೆ ಬಿದ್ದು ಹಲವು ತಿಂಗಳು ಚಿಕಿತ್ಸಾಲಯದಲ್ಲಿಯೇ ಉಳಿಯಬೇಕಾಯಿತು.

ಅಮೇರಿಕೆಯಲ್ಲಿ ಅವರು ಸುಮಾರು ಎಂಟು ವರುಷಗಳ ವರೆಗೆ ಇದ್ದು ಐದು ಬೇರೆ ಬೇರೆ ವಿಶ್ವವಿದ್ಯಾಲಯಗಳಲ್ಲಿ ಅಧ್ಯಯನ ಮಾಡಿದರು. ಆರಂಭದಲ್ಲಿ ಅವರು ಗಣಿತ, ಭೌತಶಾಸ್ತ್ರ, ಮತ್ತು ರಸಾಯನಶಾಸ್ತ್ರದ ವಿದ್ಯಾರ್ಥಿಯಾಗಿದ್ದರೂ ಆ ಮೇಲೆ ಜೀವಶಾಸ್ತ್ರ, ಮಾನಸಶಾಸ್ತ್ರ, ಅರ್ಥಶಾಸ್ತ್ರ, ಮತ್ತು ಸಮಾಜಶಾಸ್ತ್ರದ ಆಳವಾದ ಅಧ್ಯಯನದಲ್ಲಿ ಹಲವು ವರುಷ ಕಳೆದರು. ವಿದ್ಯಾಲಯದ ಒಂದು ವರುಷದ, ಅರ್ಧ ವರುಷದ ಶುಲ್ಕವನ್ನು ದೊರಕಿಸುವುದಕ್ಕಾಗಿ ಜಯಪ್ರಕಾಶರು ನಡುನಡುವೆ ವಿದ್ಯಾಭ್ಯಾಸವನ್ನು ನಿಲ್ಲಿಸಿದ್ದೂ ಉಂಟು. ಅವರು ಹೊಲಗೂಲಿಯಾಗಿ ದಿನಕ್ಕೆ ಹತ್ತು ಘಂಟೆಯಂತೆ ದುಡಿದಿದ್ದಾರೆ. ಲೇಹ್ಯಗಳ ಕಾರಖಾನೆಯಲ್ಲಿ ಪೊಟ್ಟಣ ಕಟ್ಟುವ ಕೆಲಸ ಮಾಡಿದ್ದಾರೆ. ಕಬ್ಬಿಣದ ಕಾರಖಾನೆಯಲ್ಲಿ ಯಾಂತ್ರಿಕನಾಗಿ, ಉಪಾಹಾರಗೃಹದಲ್ಲಿ ಪರಿಚಾರಕನಾಗಿ ದುಡಿದಿದ್ದಾರೆ. ಸರಕುಗಳ ಮಾರಾಟಗಾರರಾಗಿಯೂ ನೋಡಿದ್ದಾರೆ. ಅಂತೆಯೇ, ೧೯೨೯ರಲ್ಲಿ ಭಾರತಕ್ಕೆ ಮರಳಿಬಂದಾಗ ಅವರು, ಸುಖಜೀವನವನ್ನು ಸಾಗಿಸಬಯಸುವ ಅನುಭವಿಕ ತರುಣನಂತಿರದೆ ಜೀವನವನ್ನು ಬಹಳ ಸೂಕ್ಷ್ಮವಾಗಿ ಅವಲೋಕಿಸಿದ, ದೇಶಸೇವೆಗಾಗಿ ಜೀವನವನ್ನು ಮೀಸಲಿಡಲು ಸಂಕಲ್ಪಿಸಿದ ಒಬ್ಬ ದೃಢ ನಿರ್ಧಾರಿಯು ಹಾಗಿದ್ದರು.

ಭಾರತಕ್ಕೆ ಬಂದೊಡನೆಯೇ ಜವಾಹರಲಾಲರು ಅವರಿಗೆ ಕಾಂಗ್ರೆಸ್ಸಿನ ಕೂಲಿಕಾರ ಸಂಶೋಧನ ಸಮಿತಿಯ ಆಡಳಿತವನ್ನೊಪ್ಪಿಸಿದರು. ಕೆಲವು ತಿಂಗಳ ಬಳಿಕ, ೧೯೩೦ರ ಆಂದೋಲನದಲ್ಲಿ ಜಯಪ್ರಕಾಶಕರು ಕಾಂಗ್ರೆಸ್ಸಿನ ತಾತ್ಪೂರ್ತಿಕ ಕಾರ್ಯದರ್ಶಿಗಳಾದರು.

ನಾಸಿಕ ಸೆರೆಮನೆಯಲ್ಲಿ ಅವರು ಕಳೆದ ದಿನಗಳನ್ನು ಇತಿಹಾಸವು ಎಂದಿಗೂ ಮರೆಯಲಾರದು. ಅವರ ಜೊತೆಗೆ ಅನೇಕ ಪ್ರಮುಖ ಕಾಂಗ್ರೆಸ್ ಕೆಲಸಗಾರರಿದ್ದರು — ಮಸಾನಿ, ಅಚ್ಯುತ ಪಟವರ್ಧನ್, ಅಶೋಕ ಮೆಹತಾ, ಎನ್. ಜಿ. ಗೋರೆ, ಎನ್. ಎಮ್ ಜೋಷಿ, ಮತ್ತು ಪ್ರೊ. ಎಂ. ಎಲ್. ದಂತವಾಲಾ.

ಕಾಂಗ್ರೆಸ್ ಸಾಮ್ಯವಾದಿ ಪಕ್ಷದ ಕರಡು ಯೋಜನೆಯನ್ನು ಸಿದ್ಧ ಗೊಳಿಸಿದವರು ಈ ಎಲ್ಲ ಸಂಗಡಿಗರು, ಮತ್ತು ಇನ್ನೂ ಕೆಲವು ಸ್ನೇಹಿತರು. ಅದರಂತೆ ಬೇರೆ ಸೆರೆಮನೆಗಳಲ್ಲಿಯೂ, ಕಾಂಗ್ರೆಸ್ಸಿನ ಈ ಒಂದು ದಶಕದ ರಾಜ ನೀತಿಗಾಗಿ ಬೇಸರಗೊಂಡ ಕಿರಿಯ ಕಾಂಗ್ರೆಸ್ ಕೆಲಸಗಾರರು ಕಾಂಗ್ರೆಸ್ಸಿನ ಧ್ಯೇಯ ಧೋರಣೆಗಳಲ್ಲಿಯೂ ಕಾರ್ಯಕ್ರಮದಲ್ಲಿಯೂ ತೀವ್ರ ಬದಲಾವಣೆ ಯನ್ನು ಬಯಸಿ, ಕೊನೆಗೆ ಸಾಮ್ಯವಾದೀ ತತ್ವಗಳನ್ನೇ ಮೆಚ್ಚಿದ್ದರು.

ಜಯಪ್ರಕಾಶರು ತಮ್ಮ ಬಿಡುಗಡೆಯಾದ ಕೂಡಲೇ, ಪಾಟ್ನಾದಲ್ಲಿ ಆಚಾರ್ಯ ನರೇಂದ್ರ ದೇವರ ಅಧ್ಯಕ್ಷತೆಯಲ್ಲಿ ಅಖಿಲ ಭಾರತೀಯ ಸಾಮ್ಯ ವಾದಿ ಪರಿಷತ್ತೊಂದನ್ನು ಕೂಡಿಸಿದರು. ಕಾಯಿದೆ ಭಂಗದ ಆಂದೋಲನ ವನ್ನು ನಿಲ್ಲಿಸಿ ಘಟನಾತ್ಮಕ ಧೋರಣೆಯನ್ನು ಕೈಕೊಳ್ಳುವುದಕ್ಕಾಗಿ ಅಲ್ಲಿ ಅದೇ ಕಾಲದಲ್ಲಿ ಅಖಿಲ ಭಾರತ ಕಾಂಗ್ರೆಸ್ ಸಮಿತಿ ಸೇರುವುದಿದ್ದುದರಿಂದ ಅದು ಒಂದು ಒಳ್ಳೆಯ ಸಂದರ್ಭವಾಗಿದ್ದಿತು. ಬಲಪಕ್ಷದ ಈ ಗೊತ್ತು ಗುರಿ ಇಲ್ಲದ ಓಟವನ್ನು ತಡೆಯುವುದಕ್ಕಾಗಿ ಎಡಪಕ್ಷದ ಸಂಘಟನೆ ಆವಶ್ಯಕ ವಾಗಿದ್ದಿತು. ಜಯಪ್ರಕಾಶರೇ ಸಂಘಟಕ ಕಾರ್ಯದರ್ಶಿಯಾದರು. ಆ ಮೇಲಿನ ಕೆಲವು ತಿಂಗಳು ಅವರು ಪ್ರಾಂತದಿಂದ ಪ್ರಾಂತಕ್ಕೆ ತಿರುಗುತ್ತ ಪ್ರಗ ತಿಪರ ಶಕ್ತಿಗಳನ್ನು ಒಟ್ಟುಗೂಡಿಸಲು, ಸಾಮ್ಯವಾದಿ ಗುಂಪುಗಳನ್ನು ಕಟ್ಟಲು ಅವಿಶ್ರಾಂತವಾಗಿ ದುಡಿದರು. ಕೆಲವು ತಿಂಗಳ ನಂತರ ಮುಂಬೈಯಲ್ಲಿ ಅಖಿಲ ಭಾರತ ಕಾಂಗ್ರೆಸ್ ಸಾಮ್ಯವಾದಿ ಪಕ್ಷವು ಉದಯುಹೊಂದಿತು. ಆ ಮೇಲೆಯೂ—ಕಾಂಗ್ರೆಸ್ ಕಾರ್ಯಕಾರೀ ಸಮಿತಿಯ ಸದಸ್ಯರಾಗಿ ಆಯ್ಕೆ ಯಾಗುವ ವರೆಗೆ—ಜಯಪ್ರಕಾಶರೇ ಕಾರ್ಯದರ್ಶಿಯಾಗಿ ಉಳಿದರು. ಕೆಲವು ತಿಂಗಳ ಬಳಿಕ, ಸಾಮ್ಯವಾದೀ ಪಕ್ಷದ ಕಾರ್ಯದರ್ಶಿತ್ವವನ್ನು ವಹಿಸಿ ಕೊಳ್ಳುವದಕ್ಕಾಗಿ ಕಾಂಗ್ರೆಸ್ ಕಾರ್ಯಕಾರೀ ಸಮಿತಿಯ ಸದಸ್ಯತ್ವಕ್ಕೆ ರಾಜೀ ನಾಮೆ ಕೊಟ್ಟರು.

ರಾಮಗಡ ಕಾಂಗ್ರೆಸ್ಸಿಗಿಂತ ಸ್ವಲ್ಪ ಮುಂಚೆ, ಜಮ್‌ಶೇಟಪುರದ 'ರಾಜ ದ್ರೋಹಾತ್ಮಕ' ಭಾಷಣಕ್ಕಾಗಿ ಅವರ ಬಂಧನವಾಯಿತು. ಅವರು ತನ್ನ • ತಪ್ಪ 'ನ್ನು ಅಭಿಮಾನಪೂರ್ವಕವಾಗಿ ಸಮರ್ಥಿಸಿಕೊಂಡರು. ಅಂತೂ ಅವರಿಗೆ ಒಂದು ವರುಷದ ಸಶ್ರಮ ಶಿಕ್ಷೆಯಾಯಿತು. ಶಿಕ್ಷಾವಧಿಯ ನಂತರ,

ಬಿಡುಗಡೆ ಆಗುತ್ತಿರುವಾಗಲೇ ಸೆರೆಮನೆಯ ಅಂಗಳದಲ್ಲಿ ಅವರನ್ನು ಮರಳಿ ಬಂಧಿಸಿದರು.

ಕೆಲವು ದಿನಗಳ ಬಳಿಕ, ಅವರನ್ನು ತಮ್ಮ ಪ್ರಾಂತದಿಂದ ಸುಮಾರು ಸಾವಿರ ಮೈಲು ದೂರವಿರುವ ದೇವ್ಲೋಲಿ ಸ್ಥಾನಬದ್ಧತೆಯ ಶಿಬಿರದಲ್ಲಿಟ್ಟರು. ವಾರಗಳೂ ತಿಂಗಳುಗಳೂ ಗತಿಸಿ ವರುಷಗಳಾದುವು. ಕೊನೆಗೆ ಶಿಬಿರದ ಸ್ಥಿತಿ ಅಸಹನೀಯವಾಗಲು ಸ್ಥಾನಬದ್ಧ ಸೆರೆಯಾಳುಗಳೆಲ್ಲ ತಮ್ಮ ಕಷ್ಟಗಳನ್ನು ನೀಗಿಸಿಕೊಳ್ಳಲು ಆಮರಣ ಉಪವಾಸವನ್ನೇ ಕೈಕೊಂಡರು. ಜಯಪ್ರಕಾಶರ ಮುಂದಾಳುತನದಲ್ಲಿ ಮೊದಲಾದ ಈ ಚಿರಸ್ಮರಣೀಯ ಉಪವಾಸ ದೇಶವನ್ನೇ ಕೆರಳಿಸಿಬಿಟ್ಟಿತು. ಇತ್ತ ಉಪವಾಸಿಗರ ಸ್ಥಿತಿ ದಿನದಿನಕ್ಕೂ ಕೆಡುತ್ತಿರುವಾಗ ಅತ್ತ ಇಡಿಯ ದೇಶದಲ್ಲಿ ಉದ್ವೇಗದ ಬಿರುಗಾಳಿ ಬೀಸತೊಡಗಿತು. ಈ ಎಲ್ಲ ಸೆರೆಯಾಳುಗಳು ಮರಣಾಸನ್ನರಾದುದನ್ನು ಕಂಡು, ೩೧ ದಿನಗಳ ಬಳಿಕ, ಪರಕೀಯ ಪ್ರಭುತ್ವಕ್ಕೆ ಶರಣಾಗತಿಯ ಹೊರತು ಬೇರೆ ದಾರಿ ಉಳಿಯಲಿಲ್ಲ.

ಈ ಉಪವಾಸದಿಂದ ಅನೇಕ ವೀರರ ಆರೋಗ್ಯ ಹಾಳಾಗಿ ಹೋಗಿದ್ದಿತು. ಸರಕಾರವು, ಜಯಪ್ರಕಾಶರಿಂದ ತುಡುಕಿದ್ದೆಂಬ ಒಂದು ಕಾಗದವನ್ನು ಪ್ರಕಟಿಸಿ ಅವರನ್ನು ಪತ್ತುಗೇಡಿಗಳನ್ನಾಗಿಸಬೇಕೆಂದು ಯತ್ನಿಸಿತು. ಈ ವಿಷಯದಲ್ಲಿ ಕಟ್ಟಳೆಗೆ ಗುರಿಯಾದ ಜಯಪ್ರಕಾಶರು ವಿಚಾರಣೆಯಲ್ಲಿ ನಿರ್ದೋಷಿಯಾದರು. ಈ ಕಾಗದವನ್ನು ಕುರಿತು ಗಾಂಧೀಜಿ ಸರಕಾರಕ್ಕೆ ಬರೆದ ಕಾಗದ ಚಿರಸ್ಮರಣೀಯವಾಗುವುದರಲ್ಲಿ ಸಂದೇಹವಿಲ್ಲ.

‘ತೊಲಗಿರಿ’ ಆಂದೋಲನ ಅವರನ್ನು ಮರಳಿ ಸೆರೆಮನೆಗೆ ಅಟ್ಟಿತು. ಅವರನ್ನು ದೆವ್ಲೋಲಿಯಿಂದ ಬಿಹಾರಿನ ಹಜಾರಿಬಾಗ್ ಕೇಂದ್ರ ಸೆರೆಮನೆಗೆ ಸಾಗಿಸಿದರು. ಹೊರಗೆ ಕ್ರಾಂತಿಯು ತಾಂಡವವಾಡುತ್ತಿರುವಾಗ ಅವರಿಗೆ ಸೆರೆಮನೆ ಒಗ್ಗೀತೆ? ಒಂದು ನಸುಕಿನಲ್ಲಿ, ಜಯಪ್ರಕಾಶರು ನಾಲ್ವರು ಸಂಗಡಿಗರೊಡನೆ ಸೆರೆಮನೆಯಿಂದ ಕಡೆದೇರಿರುವರೆಂದು ಪತ್ರಿಕೆಗಳು ದೇಶದಾದ್ಯಂತವೂ ಸಾರಿದುವು. ೧೯೪೨ರ ಕ್ರಾಂತಿಯ ಅತಿ ಮಹತ್ವದ ಕೌತುಕಗಳಲ್ಲಿ ಇದೊಂದು. ಜಯಪ್ರಕಾಶರ ಈ ಅದ್ಭುತ ಸಾಹಸ ಬ್ರಿಟಿಷರನ್ನು ದಿಕ್ಕುಗೆಡಿಸಿತು. ಅವರನ್ನು ಹಿಡಿದು ತಂದವರಿಗೆ ೫೦೦೦ ರೂಪಾಯಿ ಬಹುಮಾನ

ಕೊಡುವುದಾಗಿ ಸರಕಾರ ಸಾರಿತು. ಈ ಬಹುಮಾನ ಮುಂದೆ ೧೦೦೦೦ದ ವರೆಗೂ ಏರಿತು.

ಕೆಲವು ದಿನಗಳಲ್ಲಿ, ನೇಪಾಳಿನಲ್ಲಿ ರಾಮಮನೋಹರ ಲೋಹಿಯಾ ಮತ್ತು ಜಯಪ್ರಕಾಶರ ಬಂಧನವಾಯಿತೆಂಬ ಸುದ್ದಿಯ ಜೊತೆಗೇ ಗೋರಿಲ್ಲಾ ದಳಗಳಿಂದ ಅವರ ಬಿಡುಗಡೆಯೂ ಆಯಿತೆಂದು ಪ್ರಕಟವಾದ ಸುದ್ದಿ ಇನ್ನೂ ಕೌತುಕಕ್ಕೆ ಕಾರಣವಾಯಿತು. ಸರಕಾರದ ಕೀರ್ತಿಗೆ ಇದು ಒಂದು ದೊಡ್ಡ ಪೆಟ್ಟಾಯಿತು. ಜಯಪ್ರಕಾಶ ಮತ್ತು ಲೋಹಿಯಾರವರು ಜನತೆಗೆ ಪವಾಡ ಪುರುಷರಾದರು.

ಅವಿರತ ಶ್ರಮ, ತಲೆಮರೆಸಿಕೊಂಡು ಬಾಳಬೇಕಾದ ಜೀವನ, ನಿದ್ದೆ ಇಲ್ಲದ ರಾತ್ರಿ, ಇವೆಲ್ಲವುಗಳ ಪರಿಣಾಮದಿಂದ ಜಯಪ್ರಕಾಶರಿಗೆ ಪ್ರಯಾಸ ಹೆಚ್ಚುತ್ತಲಿದ್ದಿತು. ಅವರ ಆರೋಗ್ಯ ಸಂಪೂರ್ಣ ಕೆಟ್ಟಿತು. ಇಂಥ ಸಂದರ್ಭದಲ್ಲಿ ಪಂಜಾಬಿನಲ್ಲಿ ಅವರು ಪುನಃ ಸೆರೆಸಿಕ್ಕರು. ಸರಕಾರವು, ಅವರ ಬಗೆಗೆ ದೀರ್ಘಕಾಲದ ವರೆಗೆ ಜನತೆಗೆ ಏನೂ ಸುದ್ದಿ ಗೊತ್ತಾಗದಂತೆ ಬಹಳ ಗುಟ್ಟಿನಿಂದ ನಡೆಯುತ್ತಲಿದ್ದಿತು. ಸರಕಾರದ ಪರವಾಗಿ ಚಿತ್ರಹಿಂಸೆಯ, ನೀಚವರ್ತನೆಯ ಕತೆಗಳು ಜನರನ್ನು ವ್ಯಗ್ರಗೊಳಿಸಿದುವು. ನಿಜಸ್ಥಿತಿಯನ್ನು ತಿಳಿದುಕೊಳ್ಳುವುದಕ್ಕಾಗಿ, ಜಯಪ್ರಕಾಶರನ್ನು ಸರಕಾರವು ಕಟ್ಟಳೆಗೆ ಗುರಿಪಡಿಸಬೇಕೆಂದು ಶ್ರೀಮತಿ ಪೂರ್ಣಿಮಾ ಬ್ಯಾನರ್ಜಿಯವರು ಲಾಹೋರ್ ಹೈಕೋರ್ಟಿನಲ್ಲಿ ಅರ್ಜಿ ಹಾಕಿದರು. ಈ ಯತ್ನವನ್ನು ವಿಫಲಗೊಳಿಸುವುದಕ್ಕಾಗಿ, ಜಯಪ್ರಕಾಶರು ರಾಜಕೈದಿಗಳೆಂದೂ ೧೮೧೮ರ ೩ನೇ ನಿಯಮದಂತೆ ಹೈಕೋರ್ಟಿನ ನ್ಯಾಯಕ್ಷೇತ್ರ ( Jurisdiction ) ಕ್ಕೆ ಒಳಪಡದವರೆಂದೂ ಸರಕಾರವು ಸಾರಿತು! ಕೋರ್ಟು ಸರಕಾರದ ಪ್ರಕಟನೆಗೆ ಬೆಂಬಲಕೊಟ್ಟು ಶ್ರೀಮತಿ ಪೂರ್ಣಿಮಾರವರ ಅರ್ಜಿಯನ್ನು ತಳ್ಳಿಹಾಕಿದ್ದೇ ತಡ, ಸರಕಾರವು ಇವರನ್ನು ಪುನಃ ಸ್ಥಾನಬದ್ಧ ಸೆರೆಯಾಳನ್ನಾಗಿ ಮಾಡಿತು! ಈ ದೇಶದ ಕಾಯಿದೆ ಸುವ್ಯವಸ್ಥೆಗಳು ಈ ರೀತಿಯವು!

ಇಂಗ್ಲಂಡಿನಲ್ಲಿ ಕೂಲಿಕಾರ ಸರಕಾರವು ಚುನಾವಣೆಯಲ್ಲಿ ಜಯಶೀಲವಾಗಿದ್ದರೂ ಹಿಂದುಸ್ಥಾನದ ಆಡಳಿತದ ಭದ್ರಮುಷ್ಟಿ ಸಡಿಲಾಗಲಿಲ್ಲವೆಂಬುದು ಸ್ಪಷ್ಟ. ಇಂಗ್ಲಂಡಿನಲ್ಲಿ ಅಧಿಕಾರಾರೂಢವಾಗಿರುವ ಸಾಮ್ಯವಾದಿ ಸರಕಾರ

ಭಾರತದ ಕಾಂಗ್ರೆಸ್ ಸಾಮ್ಯವಾದಿ ಪಕ್ಷವನ್ನು ಕಟ್ಟಳೆಗೇಡಿ ಸಂಸ್ಥೆಯನ್ನಾಗಿ ಮಾಡಿ, ಅದರ ಕಾರ್ಯದರ್ಶಿಯನ್ನೂ ಉಳಿದ ಮಾರ್ಗದರ್ಶಿಗಳನ್ನೂ ವಿಚಾರಣೆ ಇಲ್ಲದೆ ಸೆರೆಯಲ್ಲಿಟ್ಟದ್ದು ಸಾಮಾನ್ಯ ಪರಾವರ್ತನೆಯಲ್ಲ! ಎಲ್ಲರ ಮನಸ್ಸಿನಲ್ಲಿಯೂ ಇದ್ದ ಮುಖ್ಯ ವಿಚಾರ ಇದೇ.

ಲಾರ್ಡ್ ಫೆಥಿಕ್ ಲಾರೆನ್ಸ್, ಸರ್ ಸ್ಟ್ಯಾಫರ್ಡ್‌ಕ್ರಿಪ್ಸ್, ಮತ್ತು ಅಲೆಕ್ಸಾಂಡರ್ ಅವರಿಂದೊಡಗೂಡಿದ ಕ್ಯಾಬಿನೆಟ್ ಮಿಶನ್ನು ರಾಜಕೀಯ ಪರಿಸ್ಥಿತಿಯ ಅವಲೋಕನೆಗಾಗಿ ಭಾರತಕ್ಕೆ ಬಂದುದರಿಂದ ಹೊಸ ಆಸೆ ಮೂಡಿತು. ಅನೇಕ ರಾಜಕೀಯ ಸೆರೆಯಾಳುಗಳ ಮತ್ತು ಸ್ಥಾನಬದ್ಧರ ಬಿಡುಗಡೆಯಾಯಿತು. ಆದರೆ ಜಯಪ್ರಕಾಶ ಮತ್ತು ಲೋಹಿಯಾರವರನ್ನು ಬಿಡಲಿಲ್ಲ. ಪತ್ರಿಕೆಗಳ ಸುದ್ದಿಯ ಮೇರೆಗೆ ಸರಕಾರದ ಗೃಹಮಂತ್ರಿ ಸರ್ ಜಾನ್ ಥಾರ್ನರು ಆಗ್ರಾ ಕೇಂದ್ರ ಸೆರೆಮನೆಯಲ್ಲಿ ಅವರಿಬ್ಬರನ್ನೂ ಎರಡು ಸಲ ಸಂದರ್ಶಿಸಿದರು. ಆದರೆ ಅವರನ್ನು ಬಿಡುಗಡೆ ಮಾಡಬಾರದೆಂಬ ದೃಢಸಂಕಲ್ಪದಿಂದಲೇ ಅಲ್ಲಿಂದ ಹಿಂದಿರುಗಿದರು.

ಈ ನಡುವೆ, ಅವರ ಬಿಡುಗಡೆಗಾಗಿ ಹಿಂದುಸ್ಥಾನದ ಮೂಲೆ ಮೂಲೆಗಳಿಂದ ಒತ್ತಾಯದ ಬೇಡಿಕೆಗಳು ಬರತೊಡಗಿದುವು. ಹಲವಾರು ಕಡೆಗಳಲ್ಲಿ ಜಯಪ್ರಕಾಶ ಲೋಹಿಯಾರ ದಿನಾಚರಣೆಯಾಯಿತು. ಸಭೆ, ಮತಪ್ರದರ್ಶನಗಳ ಮೂಲಕ ಜನತೆ ಅವರಲ್ಲಿ ತನಗಿರುವ ಆದರವನ್ನು ತೋರಿಸಿತು. ಅಂತೂ ಕೊನೆಗೆ ೧೯೪೬ನೇ ಎಪ್ರಿಲ್ ೨೨ರಲ್ಲಿ ಅವರ ಬಿಡುಗಡೆಯಾಯಿತು.

ದೇಶದಲ್ಲಿ ಅದೆಂತಹ ಹಿಗ್ಗು! ಎಲ್ಲೆಲ್ಲಿಯೂ ಜನವೇ ಜನ. ದಾರಿಯ ಚಿಕ್ಕ ಪುಟ್ಟ ಹಳ್ಳಿಗಳಿಂದ ಮೊದಲಿಸಿ ದೊಡ್ಡ ದೊಡ್ಡ ಕೇಂದ್ರಸ್ಥಳಗಳ ವರೆಗೆ ಪ್ರತಿಯೊಂದು ಕಡೆಯೂ ಉತ್ಸಾಹವೇ ಉತ್ಸಾಹ. ತಮ್ಮ ಬಿಡುಗಡೆಯ ಸ್ವಲ್ಪ ದಿನಗಳ ಬಳಿಕ ಜಯಪ್ರಕಾಶರು ಬಿಹಾರಿನ ತಮ್ಮ ಜನ್ಮ ಪ್ರಾಂತಕ್ಕೆ ಹೋದಾಗ ಅಲ್ಲಿ ಅವರಿಗೆ ದೊರೆತ ಸ್ವಾಗತ ಅಪೂರ್ವವಾದುದು.

ಜಯಪ್ರಕಾಶರು ತಮ್ಮ ಸಿದ್ಧಾಂತಗಳ ಮೂಲಕ ಕಾಂಗ್ರೆಸ್ ಸಾಮ್ಯವಾದಿ ಪಕ್ಷದ ಮುಂದಾಳು ಕಾರ್ಯಕರ್ತರಲ್ಲೆಲ್ಲ ಅತಿ ಹೆಸರಾಗಿದ್ದಾರೆ. ಆದರೆ ಅವರು ತನ್ನ ಕುದುರೆಗೆ ಮೂರೇ ಕಾಲು ಎಂಬ ಹಟವಾದಿಯಲ್ಲ. ಅವರು ಜನತೆಯ ನಾಡಿಯನ್ನು ಚೆನ್ನಾಗಿ ಬಲ್ಲರು. ಸಂಕುಚಿತ ಪಕ್ಷಾಂಧ

ತೆಯ ಬಗೆಗಿರುವಷ್ಟು ದ್ವೇಷ ಅವರಿಗೆ ಇನ್ನಾವುದರ ಬಗೆಗೂ ಇಲ್ಲ. ಕಾಂಗ್ರೆಸ್ ಸಾಮ್ಯವಾದೀ ಪಕ್ಷವು ಇಂದು ಬರಿಯ ಒಂದು ರಾಜಕೀಯ ಪಕ್ಷವಲ್ಲ—ವಿಚಾರವಂತ ಪ್ರಾಗತಿಕರೆಲ್ಲರಿಗೆ ಆಶ್ರಯಸ್ಥಾನವಾದ ಒಂದು ಮಹಾ ಪ್ರೇರೇಪಕ ಶಕ್ತಿ. ಇವರ ಯಶಸ್ಸಿನಲ್ಲಿ ಜಯಪ್ರಕಾಶರ ಪಾಲು ಅಲ್ಪಭಾಗವೇನಲ್ಲ

ಜಯಪ್ರಕಾಶರು ಸುಲಭವಾದ, ಸ್ಪಷ್ಟವಾದ ಶೈಲಿಯಲ್ಲಿ ಬರೆಯಬಲ್ಲ ಲೇಖಕರು. ಅವರ ಕೃತಿ—'ಸಾಮ್ಯವಾದವೇ ಏಕೆ ?' ತುಂಬ ಜನಪ್ರಿಯವಾಗಿದೆ. ಅವರು ಹೆಸರಾದ ವಾಗ್ಮಿಯಲ್ಲದಿದ್ದರೂ ತಮ್ಮ ತ್ರಿಕರಣ ಶುದ್ಧಿಯ ಬಲದ ಮೂಲಕವೂ ವಿಷಯ ಗ್ರಹಣದ ಪ್ರಾಜ್ಞತೆಯ ಮೂಲಕವೂ ಅನೇಕ ವಾಗ್ಮಿಗಳಿಗಿಂತ ಹೆಚ್ಚು ಪರಿಣಾಮಕಾರಿಯಾಗಿ ಮಾತನಾಡುತ್ತಾರೆ.

ನನಗೆ ಗೊತ್ತಿದ್ದ ಮಟ್ಟಿಗೆ ಅವರಲ್ಲಿ ಎರಡು ದುರ್ಗುಣಗಳಿವೆ. ಮೊದಲನೆಯದು, ಅವರಲ್ಲಿರುವ ಸರ್ವೋತ್ಕೃಷ್ಟ ಕ್ಷೌರ ಸಾಹಿತ್ಯವನ್ನು ಕುರಿತದ್ದು. ಅವರು ನಗು—ನಗುತ್ತ, ತಮ್ಮ ಊರಿನಲ್ಲಿಯೆ ಇದು ಉತ್ತಮವಾದುದೆಂದು ಹೇಳುತ್ತಾರೆ. ಹೋಗಲಿ, ಜಯಪ್ರಕಾಶರಂಥ ಚೆಲುವಾದ ಮೋರೆಯವರಿಗೆ ಇದು ಕ್ಷಮ್ಯವೇ ಸರಿ !

ಎರಡನೆಯ ದುರ್ಗುಣವನ್ನು ಹೇಗೆ ಬಣ್ಣಿಸಬೇಕೆಂಬುದೇ ನನಗೆ ತಿಳಿಯದು. ಅದನ್ನು ಅಸಾಮಯಿಕತೆ (unpunctuality) ಎನ್ನೋಣವೆ ? ನೀರಸ ಬಣ್ಣನೆಯಾಗುತ್ತದೆ. ಆದ್ದರಿಂದ ಕಾಲಮಹತ್ವವಿಲ್ಲದಿರುವಿಕೆ ಎನ್ನುವುದೇ ಸರಿ. ವಸ್ತುಸ್ಥಿತಿ ಹೀಗಿದೆಃ ಜಯಪ್ರಕಾಶರಿಗೆ ಚರ್ಚೆಯಲ್ಲಿ ಪ್ರೀತಿ ಹೆಚ್ಚು—ಬುದ್ಧಿವಂತ ಇದಿರಾಳು ದೊರಕಿದರಂತೂ ಇನ್ನೂ ಸಂತೋಷ. ಇದರಿಂದ ಅವರು ಮೊದಲೇ ಗೊತ್ತಾದ ಹತ್ತಾರು ಕಾರ್ಯಕ್ರಮಗಳನ್ನು ಕಳೆದುಕೊಳ್ಳುತ್ತಾರೆ. ಹಾಗೆ ತಡಮಾಡಿ ಬಂದಾಗ ಮಾತ್ರ, ಇವರ ಅಜಾಗರೂಕತೆಯಿಂದ ನಮಗಿಂತ ಇವರಿಗೇ ಹೆಚ್ಚು ವೇದನೆಯಾಗಿದೆಯೆಂಬುದನ್ನು ಇವರ ಮುಖ ಹೇಳುತ್ತಿರುತ್ತದೆ !

ಅವರು ವಯಸ್ಸಿನಿಂದ ಚಿಕ್ಕವರಾದರೂ ಅವರಿಗಿರುವ ಜ್ಞಾನ ಈ ನಾಡಿನಲ್ಲಿ ಬಹಳ ಜನ ಹಿರಿಯರಿಗೂ ಇಲ್ಲ. ಅವರು ಸೌಮ್ಯರಿದ್ದಷ್ಟೇ ದೃಢಬುದ್ಧಿಯವರೆಂಬುದನ್ನು ಅವರ ಮಹಾಕೃತಿಗಳೇ ತೋರಿಸುತ್ತವೆ. ಇದಲ್ಲದೆ ತನ್ನ ಹತ್ತಿರ ಬಂದವರನ್ನೆಲ್ಲ ತನ್ನ ಪ್ರಭಾವಕ್ಕೊಳಪಡಿಸುವ ಉಚ್ಚ ಮಾನವ

ಸ್ವಭಾವ ಅವರಲ್ಲಿರುವುದು ಹೆಚ್ಚಿನದು. ಹೀಗೆ ಜಯಪ್ರಕಾಶರೆಂದರೆ ನಿಗರ್ವಿ, ಕ್ಷಮಾಗುಣಿ, ಹಗಲಿನಂತೆ ನಿಷ್ಕಪಟಿ, ಮತ್ತು ಇಂದಿನ ಸಲಕರಣೆಗಳಿಂದ ಮುಂದಿನ ಭವ್ಯ ಭವಿಷತ್ತಿನ ನಿರ್ಮಾಣಕ್ಕೆ ಯತ್ನಿಸುವವರು. ಬಿಹಾರಿನ ಸಾರಣ ಜಿಲ್ಲೆಯ ಸೀತ ಬಿದ್ರಾ ಹಳ್ಳಿಯಲ್ಲಿ ಹುಟ್ಟಿದ ಈ ಬಡ ಬೇಸಾಯಗಾರ ಹುಡುಗ ತನ್ನ ೧೯ನೆಯ ವರುಷದ ವರೆಗೂ ಟ್ರಾಮು ನೋಡಿರಲಿಲ್ಲ. ಆದರೆ ಇಂದೋ, ದೇಶದ ಜಟಿಲ ಸಮಸ್ಯೆಗಳನ್ನು ಬಿಡಿಸುವ ಒಬ್ಬ ಸಮರ್ಥ ಮಾರ್ಗ ದರ್ಶಿಯಾಗಿದ್ದಾನೆ.

---

# ೧

# ೧೯೪೨ರ ಕ್ರಾಂತಿ

೧ ಎಲ್ಲ ಸ್ವಾತಂತ್ರ್ಯಯೋಧರಿಗೆ—ಒಂದನೆಯ ಓಲೆ

೨ ಎಲ್ಲ ಸ್ವಾತಂತ್ರ್ಯಯೋಧರಿಗೆ —ಎರಡನೆಯ ಓಲೆ

೩ ಭಾರತದಲ್ಲಿರುವ ಅಮೇರಿಕೆಯ ಅಧಿಕಾರಿಗಳಿಗೆ ಮತ್ತು ಸೈನಿಕರಿಗೆ

# ಕ್ರಾಂತಿಪಥದಲ್ಲಿ

## ೧೯೪೨ ರ ಕ್ರಾಂತಿ

### ೧

### ಎಲ್ಲ ಸ್ವಾತಂತ್ರ್ಯ ಯೋಧರಿಗೆ

#### ಒಂದನೆಯ ಓಲೆ

[೧೯೪೨ನೇ ಅಕ್ಟೋಬರಿನಲ್ಲಿ ಜಯಪ್ರಕಾಶರು ಹಜಾರಿಬಾಗ್ ಕೇಂದ್ರ ಸೆರೆಮನೆಯಿಂದ ತಪ್ಪಿಸಿಕೊಂಡು ಹೋದ ಬಳಿಕ ದೇಶವನ್ನೆಲ್ಲ ಸುತ್ತಾಡಿದರು. ಮತ್ತು ಆಗಿನ ಪರಿಸ್ಥಿತಿಯನ್ನೆಲ್ಲ ಅವಲೋಕಿಸಿ, ೧೯೪೩ರ ಆರಂಭದಲ್ಲಿ, ಸ್ವಾತಂತ್ರ್ಯ ಸಮರದಲ್ಲಿ ಹೋರಾಡುವವರಿಗಾಗಿ ಒಂದು ಮಹತ್ವದ ಪ್ರಕಟನೆಯನ್ನು ಪ್ರಕಟಿಸಿದರು. ಸಂಪಾದಕ.]

ಕ್ರಾಂತಿಕಾರಕ ಸ್ವಾಗತ,
ಜೊತೆಗಾರರೆ,

ಯುದ್ಧಕಾಲದ ಕೈದಿಗಳಾಗಿದ್ದ ನಿಮಗೂ ನಿಮ್ಮ ಜೊತೆಗಾರರಿಗೂ ಶತ್ರುವಿನೊಡನೆ ಪರಾಕ್ರಮದಿಂದ ಹೋರಾಡಿದ್ದಕ್ಕಾಗಿ ನನ್ನ ಹೃತ್ಪೂರ್ವಕ ಅಭಿನಂದನೆಗಳನ್ನು ಮೊದಲು ಸಲ್ಲಿಸುತ್ತೇನೆ. ಬಹುಕಾಲದಿಂದ ಹಿಂಸೆ ಒತ್ತಾಯಗಳಿಗೆ ಒಳಗಾದ ಈ ನಮ್ಮ ದೇಶದಲ್ಲಿ ಈ ಬಗೆಯ ಘಟನೆಗಳೆಂದೂ ಜರುಗಿರಲಿಲ್ಲ, ಜರುಗಬಹುದಾಗಿಯೂ ತೋರಿರಲಿಲ್ಲ. ನಮ್ಮ ಅಪ್ರತಿಮ ಮುಂದಾಳುಗಳಾದ ಮಹಾತ್ಮಾ ಗಾಂಧಿಯವರು ಕಂಡುಕೊಂಡಂತೆ ಅದು ಖಂಡಿತವಾಗಿಯೂ 'ಬಹಿರಂಗ ಕ್ರಾಂತಿ'ಯಾಗಿತ್ತು.

ಈಗ ಕ್ರಾಂತಿಯನ್ನು ತಾತ್ಪೂರ್ತಿಕವಾಗಿ ಸದೆಬಡೆದ ಹಾಗೆ ತೋರುತ್ತದೆ. ಆದರೆ ಅದು ತಾತ್ಪೂರ್ತಿಕವಾಗಿಯೇ ಸದೆಬಡೆಯಲ್ಪಟ್ಟಿದೆಯೆಂದು ನನ್ನ ಭಾವನೆ. ನಿಮ್ಮ ಅಭಿಪ್ರಾಯವಾದರೂ ಹಾಗೆಯೇ ಎಂದು ನನ್ನ ತಿಳಿವಳಿಕೆ. ನಮಗೆ ಇದರಿಂದ ಏನೂ ವಿಸ್ಮಯವಾಗಲಾರದು. ನಮ್ಮ ಈ ಮೊಟ್ಟಮೊಧಲಿನ ಕ್ರಾಂತಿಯೇ ಯಶಸ್ವಿಯಾಗಿದ್ದರೆ, ಅದು ಸಾಮ್ರಾಜ್ಯವಾದವನ್ನು ಸಂಪೂರ್ಣವಾಗಿ ಬದಲು ಮಾಡಿಬಿಟ್ಟಿದ್ದರೆ, ನಮಗೆ ಖಂಡಿತ

ವಾಗಿಯೂ ಅಚ್ಚರಿಯದಾಗಿ ತೋರಬಹುದಾಗಿದ್ದಿತು. ಈ ಕ್ರಾಂತಿಯು ತನ್ನ ಶಕ್ತಿಯನ್ನೆಲ್ಲ ಸಮೂಲ ನಾಶಮಾಡುವಷ್ಟು ಬಲಿಷ್ಠವಾಗಿತ್ತೆಂದು ಶತ್ರುವು ತಾನೇ ಒಪ್ಪಿಕೊಂಡಿರುವ ಮಾತಿನಿಂದ, ನಮ್ಮ ರಾಷ್ಟ್ರೀಯ ಕ್ರಾಂತಿಯ ಈ ಮೊದಲ ಹೆಜ್ಜೆ ಎಷ್ಟು ಯಶಸ್ವಿಯಾಗಿತ್ತೆಂಬುದು ತಿಳಿದು ಬರುವಂತಿದೆ.

ಈ ಮೊದಲ ಹೆಜ್ಜೆಯನ್ನು ನಾವು ಇಡುತ್ತಿರುವಾಗಲೇ ಅವರು ನಮ್ಮನ್ನು ಸದೆಬಡೆದುದೆಂತು ? ಇದಕ್ಕೆ ಶತ್ರುವಿನ ಸೈನ್ಯಬಲವು ಕಾರಣವೊ ? ಶತ್ರುವು ಪುಂಡರ ನಿರಂಕುಶವಾದ ಹಾವಳಿ, ಸುಲಿಗೆ, ಕೊಳ್ಳೆ ಮುಂತಾದುವು ಗಳ ಮೂಲಕ ನಮ್ಮನ್ನು ಹಣ್ಣುಮಾಡಿದನೋ ? ಇಲ್ಲ. "ಕ್ರಾಂತಿಯನ್ನು ಸದೆಬಡೆಯಲಾಗಿದೆ" ಎಂದು ತಿಳಿಯುವುದು ತಪ್ಪು. ಕ್ರಾಂತಿಯೆಂದರೆ ಒಂದು ಘಟನೆಯಲ್ಲ—ಅದೊಂದು ಸ್ಥಿತಿ, ಒಂದು ಸಾಮಾಜಿಕ ಕ್ರಮ— ಎಂಬ ಮಾತು ಕ್ರಾಂತಿಗಳ ಇತಿಹಾಸದಿಂದ ಗೊತ್ತಾಗುತ್ತದೆ. ಒಂದು ಕ್ರಾಂತಿಯ ಉತ್ಕ್ರಾಂತಿಯ ಕಾಲದಲ್ಲಿ ಏರಿಳಿತಗಳಿರುವುದು ಸ್ವಾಭಾವಿಕ. ಇಷ್ಟರಲ್ಲಿಯೇ ಉನ್ನತ ಶಿಖರಕ್ಕೇರಿ ಜಯಭೇರಿಯನ್ನು ಮೊಳಗಿಸುವ ಬದಲು, ನಮ್ಮ ಕ್ರಾಂತಿ ತುಸು ಇಳಿಮುಖವಾಗಿದೆ. ಸಾಮ್ರಾಜ್ಯವಾದೀ ಶತ್ರುವಿನ ಅಧಿಕ ತೋಳ್ಬಲ ಇದಕ್ಕೆ ಕಾರಣವಲ್ಲ. ಇದಕ್ಕೆ ಬೇರೆ ಎರಡು ಮಹತ್ವದ ಕಾರಣಗಳಿವೆ.

ಮೊದಲನೆಯದಾಗಿ ಪ್ರಚಂಡ ಸಾಮರ್ಥ್ಯವನ್ನು ಪ್ರದರ್ಶಿಸುವಂತಹ ಜನತೆಗೆ, ಒಳ್ಳೇ ಮಾರ್ಗದರ್ಶಿಯಾಗಬಹುದಾದ ರಾಷ್ಟ್ರೀಯ ಕ್ರಾಂತಿ ಕಾರಕ ಸಂಘಟನೆಯೊಂದು ಇರಲಿಲ್ಲ. ಕಾಂಗ್ರೆಸ್ಸು ಬಹುದೊಡ್ಡ ಸಂಸ್ಥೆ ಯಾಗಿದ್ದರೂ ಕ್ರಾಂತಿಗೆ ಅವಶ್ಯವಾದ ಮೇಲ್ಮಟ್ಟದ ಕಾರ್ಯಕ್ರಮಗಳನ್ನು ಅದು ಇನ್ನೂ ಕೈಕೊಂಡಿರಲಿಲ್ಲ. ಸಂಘಟನೆಯ ಕೊರತೆಯ ಮೂಲಕ ಕಾಂಗ್ರೆಸ್ಸಿನ ದೊಡ್ಡ ದೊಡ್ಡ ಮುಂದಾಳುಗಳಿಗೂ ಕ್ರಾಂತಿಯ ಪ್ರಗತಿಯ ಅರಿವು ಆಗಲಿಲ್ಲ. ಈ ಕ್ರಾಂತಿಯ ರೀತಿ ಕಾಂಗ್ರೆಸ್ಸಿನ ಕಾರ್ಯಕ್ರಮಕ್ಕೆ ಅನುಗುಣವಾದುದೆ ?—ಎಂಬುದು ಮೊನ್ನೆ ಮೊನ್ನೆಯ ವರೆಗೆ ಚರ್ಚಿಸ ಲ್ಪಡುತ್ತಲಿದ್ದಿತು. ಮತ್ತೊಂದು ಶೋಚನೀಯವಾದ ಸಂಗತಿಯೆಂದರೆ ಎಷ್ಟೋ ಪ್ರತಿಭಾಸಂಪನ್ನರಾದ ಕಾಂಗ್ರೆಸ್ಸಿಗರು ಈ 'ಸ್ವಾತಂತ್ರ್ಯದ

ಕೊನೆಯ ಸಂಗ್ರಾಮ'ಕ್ಕೆ ಹೊಂದುವ ಮನೋವೃತ್ತಿಯನ್ನು ತೋರ್ಪಡಿಸ ಲಿಲ್ಲ. ಗಾಂಧೀಜಿ, ಡಾ. ರಾಜೇಂದ್ರಪ್ರಸಾದ್, ಸರದಾರ್ ಪಟೇಲ್ ವಲ್ಲಭಭಾಯಿ ಮುಂತಾದವರಲ್ಲಿ ತೋರಿದ ಆತುರತೆ, ಅವಸರ, ನಿರ್ಧಾರ ಗಳು ಎಲ್ಲ ಕಾಂಗ್ರೆಸ್ ಮುಂದಾಳುಗಳಲ್ಲಿ ಕಂಡುಬರಲಿಲ್ಲ.

ಎರಡನೆಯದಾಗಿ, ಆಂದೋಲನದ ಮೊದಲನೆಯ ಕಾರ್ಯಕ್ರಮವು ಕೊನೆಗೊಂಡಾಗ ಜನತೆಗೆ ಮುಂದೆ ಯಾವ ಕಾರ್ಯಕ್ರಮವೂ ಸೂಚಿತ ವಾಗಿರಲಿಲ್ಲ. ತಮ್ಮತಮ್ಮ ಪ್ರದೇಶದ ಬ್ರಿಟಿಷ್ ಆಡಳಿತವನ್ನು ಕೊನೆ ಗೊಳಿಸಿದ ಬಳಿಕ, ತಮ್ಮ ಕೆಲಸವು ಮುಗಿಯಿತೆಂದು ಭಾವಿಸಿ, ಮುಂದಿನ ಕೆಲಸವೇನೆಂಬುದನ್ನು ಅರಿಯದಿದ್ದುದರ ಮೂಲಕ ಜನರು ತಮ್ಮ ತಮ್ಮ ಮನೆಗೆ ತೆರಳಿದರು. ಅದು ಅವರ ತಪ್ಪಲ್ಲ—ನಮ್ಮದು. ಮುಂದಿನ ಕಾರ್ಯರಂಗದ ರೂಪರೇಷೆಗಳನ್ನು ನಾವು ಸೂಚಿಸಬೇಕಾಗಿತ್ತು. ಇದನ್ನು ಮಾಡದಿದ್ದುದರಿಂದ ಕ್ರಾಂತಿಯು ನಿಂತುಬಿಟ್ಟು ಹಿನ್ನಡೆಯು ಮೊದಲಾ ಯಿತು. ಇನ್ನೂ ಅನೇಕ ಬ್ರಿಟಿಷ್ ಸೈನಿಕರು ಬರುವುದರೊಳಗಾಗಿಯೇ ಈ ಸ್ಥಿತಿ ಉಂಟಾಯಿತು. ಅವರು ಇಲ್ಲಿಗೆ ಬಂದೊಡನೆ, ಮೊದಲೇ ಹಿಂದೆ ಸರಿಯುತ್ತಲಿದ್ದ ಕ್ರಾಂತಿಕಾರಕ ಚಟುವಟಿಕೆಗಳನ್ನು ಮತ್ತಿಷ್ಟು ಹಿಂದೂಡಿ ದರು. ಕ್ರಾಂತಿಯ ಎರಡನೆಯ ಅಂಕವೆಂದು ಜನತೆಯು ಮುಂದಿರಿಸ ಬೇಕಾಗಿದ್ದ ಕಾರ್ಯಕ್ರಮವು ಯಾವುದು? ಈ ಪ್ರಶ್ನೆಗೆ ಕ್ರಾಂತಿಯ ರೀತಿ ಯನ್ನರಿತು ಉತ್ತರಕೊಡಬೇಕಾಗುವುದು. ಕ್ರಾಂತಿಯೆಂದರೆ ಬರಿಯ ವಿನಾಶಾತ್ಮಕವಾದುದಲ್ಲ; ರಚನಾತ್ಮಕವಾದುದೂ ಅಹುದು. ಬರಿಯ ವಿಧ್ವಂಸಕ ಕಾರ್ಯದಿಂದ ಯಾವ ಕ್ರಾಂತಿಯೂ ಜಯಹೊಂದಲಾರದು. ಕ್ರಾಂತಿಯು ಉಳಿಯಬೇಕಾದರೆ ಅದು ವಿನಾಶಗೊಳಿಸಿದ ಆಡಳಿತದ ಬದಲು ಬೇರೊಂದು ಆಡಳಿತಪದ್ಧತಿಯನ್ನು ನಿರ್ಮಿಸಬೇಕಾಗುವುದು. ನಮ್ಮ ಕ್ರಾಂತಿಯೂ ಅಷ್ಟೇ—ವಿನಾಶಕಾರಕ ಕಾರ್ಯಕ್ರಮವನ್ನು ಮುಗಿಸಿ ರಚ ನಾತ್ಮಕ ಕಾರ್ಯವನ್ನು ಕೈಕೊಳ್ಳಬೇಕಾಗಿದ್ದಿತು. ಪರಕೀಯರ ಆಡಳಿತ ವನ್ನು ಸಮೂಲನಾಶಗೊಳಿಸಿದ ಬಳಿಕ, ಜನರು ಅದರ ಸ್ಥಳದಲ್ಲಿ ಕ್ರಾಂತಿ ಕಾರಕ ಸರಕಾರದ ಆಡಳಿತವನ್ನೂ ತಮ್ಮ ಸೈನ್ಯವನ್ನೂ ಪೋಲೀಸರನ್ನೂ ಕೆಲಸಕ್ಕೆ ನಿಯೋಜಿಸಬೇಕಾಗಿದ್ದಿತು. ಹೀಗೆ ಮಾಡಿದ್ದರೆ ಜನತೆಯಲ್ಲಿ

ಅಪಾರ ಉತ್ಸಾಹವು ತುಂಬಿ, ವಿಧಾಯಕ ಕಾರ್ಯರಂಗವು ವಿಶಾಲವಾಗಿ, ಕ್ರಾಂತಿಸಾಗರದ ತರಂಗಗಳು ಮುಂದೆ ಮುಂದೆ ಹರಿದು ದೇಶದಲ್ಲೆಲ್ಲ ಜಾಗ್ರತಿಯುಂಟಾಗಬಹುದಾಗಿದ್ದಿತು; ಮತ್ತು ಇದರಿಂದ ಸಾಮ್ರಾಜ್ಯ ವಾದದ ಶಕ್ತಿಯನ್ನು ಕುಗ್ಗಿಸಿ ನಾವು ದೇಶದ ಆಡಳಿತದ ಸೂತ್ರವನ್ನು ಕಸಿದು ಕೊಳ್ಳಬಹುದಾಗಿದ್ದಿತು.

ಈಗಿನ ಕ್ರಾಂತಿಯು ಇಳಿಮುಖವಾಗುವುದಕ್ಕೆ ಸಮರ್ಥವಾದ ಸಂಘಟನೆಯ ಅಭಾವವೂ ರಾಷ್ಟ್ರೀಯ ಕ್ರಾಂತಿಕಾರಕ ಕಾರ್ಯಕ್ರಮದ ಕೊರತೆಯೂ ಮುಖ್ಯಕಾರಣಗಳು.

ನಾವು ಈಗ ಮಾಡಬೇಕಾದ ಕೆಲಸಗಳು ಯಾವುವು ಎಂಬುದೇ ಈಗ ನಮ್ಮ ಮುಂದಿರುವ ಮುಖ್ಯ ಪ್ರಶ್ನೆ. ಮೊದಲು ನಮ್ಮಲ್ಲಿಯೂ ನಮ್ಮ ಜನರಲ್ಲಿಯೂ ಬೇರೂರಿದ ನಿರಾಶೆಯನ್ನು ಕಿತ್ತಿಸೆಯುವುದು; ಮತ್ತು ಈ ವರೆಗೆ ದೊರೆತ ವಿಜಯದಿಂದ ತೃಪ್ತರಾಗಿ ಮುಂದೆಯಾದರೂ ನಮಗೆ ಗೆಲುವು ಮೀಸಲೆಂದು ತಿಳಿಯುವುದು.

ನಮ್ಮ ಮುಂದೆಯೂ ಜನತೆಯ ಮುಂದೆಯೂ ಈ ನಮ್ಮ ಕ್ರಾಂತಿಯು ಎಂಥದು ಎಂಬುದರ ಸ್ಪಷ್ಟ ಚಿತ್ರವನ್ನಿಡಬೇಕು. ಇದು ನಮ್ಮ ಸ್ವಾತಂತ್ರ್ಯದ ಕೊನೆಯ ಸಂಗ್ರಾಮ. ವಿಜಯವೇ ನಮ್ಮ ಧ್ಯೇಯ. ಈ ವಿಷಯದಲ್ಲಿ ಒಪ್ಪಂದಮಾಡಿಕೊಳ್ಳುವ ಸಂಭವವಿಲ್ಲ. ಶ್ರೀ॥ ರಾಜಗೋಪಾಲಾಚಾರ್ಯರಂಥವರು ರಾಷ್ಟ್ರೀಯ ಸರಕಾರಕ್ಕಾಗಿ ಪಡುತ್ತಿರುವ ಪ್ರಯತ್ನಗಳಲ್ಲಿ ಹುರುಳಿಲ್ಲ. ಇಂತಹ ಪ್ರಯತ್ನಗಳು ನಿಷ್ಫಲವಾಗುವವಲ್ಲದೆ ಜನರ ದೃಷ್ಟಿಯನ್ನು ಮುಖ್ಯ ವಿಷಯದಿಂದ ದೂರ ಸೆಳೆಯುವುದರಿಂದ ನಿಜವಾಗಿಯೂ ಅಪಾಯಕರವಾಗಿವೆ. 'ಭಾರತದಿಂದ ತೊಲಗಿರಿ' ಎಂಬ ಕೂಗೂ 'ರಾಷ್ಟ್ರೀಯ ಸರಕಾರ'ದ ಮಾತೂ ಪರಸ್ಪರ ವಿರುದ್ಧವಾಗಿವೆ. ಕಾಂಗ್ರೆಸ್-ಲೀಗುಗಳಲ್ಲಿ ಒಡಂಬಡಿಕೆಯಾಗಬೇಕೆಂದು ಹುಯಿಲೆಬ್ಬಿಸುವವರು ಸಾಮ್ರಾಜ್ಯವಾದದ ಕೈಗೊಂಬೆಗಳು. ರಾಷ್ಟ್ರೀಯ ಸರಕಾರವು ಸ್ಥಾಪಿತವಾಗದಿರಲು ಕಾರಣವು ಒಕ್ಕಟ್ಟಿನ ಅಭಾವವಲ್ಲ; ಸಾಮ್ರಾಜ್ಯವಾದಿಗಳು ಅಧಿಕಾರ ಸೂತ್ರವನ್ನು ಬಿಟ್ಟುಕೊಡಲು ಒಪ್ಪದಿರುವುದು. ತಾನು ಮುಖ್ಯಮಂತ್ರಿಯಾದುದು ಚಕ್ರವರ್ತಿಗಳ ಸಾಮ್ರಾಜ್ಯವನ್ನು ಕೊನೆಗೊಳಿಸಲಿಕ್ಕಲ್ಲವೆಂದು

ಚರ್ಚಿಲ್ಲರು ಘೋಷಿಸಿದ್ದರಿಂದ ಈ ಮಾತು ಸ್ಪಷ್ಟವಾಗುವಂತಿದೆ. ಸಾಮ್ರಾಜ್ಯವು ತನ್ನಷ್ಟಕ್ಕೆ ತಾನೇ ಕೊನೆಗೊಳ್ಳುವುದೆಂದು ಭಾವಿಸುವವನು ಸಾಮ್ರಾಜ್ಯ ಶಾಸ್ತ್ರವನ್ನು ಚೆನ್ನಾಗಿ ಅರಿತವನಲ್ಲ. ದೀನವಾದ ಸ್ಮಾರಕಗಳಿಂದ ಸಮಾಜ ಕ್ರಾಂತಿಯಾಗುವುದೆಂದು ತಿಳಿದ ಈ ಮೊದಲಿನ 'ಕ್ರಾಂತಿಕಾರರು' ಇತಿಹಾಸದಲ್ಲಿ ನಗೆಗೀಡಾಗುವರು.

ಸಾಮ್ರಾಜ್ಯವಾದಿಗಳು ಬಡಬಡಿಸುವಂತೆ ಹಿಂದುಸ್ಥಾನದಲ್ಲಿ ಈಗ ಅವಶ್ಯವಾಗಿ ಬೇಕಾದುದು ವಿವಿಧ ಪಂಗಡಗಳ ಐಕ್ಯವಲ್ಲ; ಆದರೆ ಎಲ್ಲ ರಾಷ್ಟ್ರೀಯ ಕ್ರಾಂತಿಕಾರಕ ಶಕ್ತಿಗಳ ಕೇಂದ್ರೀಕರಣ. ಇವೆಲ್ಲ ಶಕ್ತಿಗಳು ಈಗಾಗಲೇ ಕಾಂಗ್ರೆಸ್ ಬಾವುಟದ ಬುಡದಲ್ಲಿ ಐಕ್ಯವಾಗಿ ನಿಂತಿವೆ. ಕಾಂಗ್ರೆಸ್-ಲೀಗ್ ಐಕ್ಯವು ಈ ಶಕ್ತಿಯ ಸಂವರ್ಧನೆಯನ್ನು ಸೂಚಿಸುವುದಿಲ್ಲ. ಯಾಕೆಂದರೆ ಲೀಗು ಕ್ರಾಂತಿಯ ಮತ್ತು ಸ್ವಾತಂತ್ರ್ಯದ ಮಾರ್ಗವನ್ನು ಹಿಡಿಯಲಾರದು.

ಆದುದರಿಂದ ಸಾಮ್ರಾಜ್ಯವಾದವನ್ನು ಸಂಪೂರ್ಣ ಬುಡಮೇಲು ಮಾಡುವುದೇ ನಮ್ಮ ಧ್ಯೇಯವೆಂಬುದನ್ನು ನಾವು ಸ್ಪಷ್ಟವಾಗಿ ತಿಳಿದುಕೊಳ್ಳಬೇಕು. ಈ ವಿಷಯದಲ್ಲಿ ಒಡಂಬಡಿಕೆಯೇ ಸಾಧ್ಯವಿಲ್ಲ. ನಾವು ಗೆಲ್ಲಲೂ ಬಹುದು, ಸೋಲಲೂ ಬಹುದು. ಸೋಲುವ ಮಾತು ಸುಳ್ಳು. ಯಾಕೆಂದರೆ, ಗೆಲ್ಲುವವರೆ ನಾವು ಹೋರಾಡಲು ನಿರ್ಧರಿಸಿದ್ದೇವೆ ಮಾತ್ರವಲ್ಲ, ಜಗತ್ತಿನಲ್ಲಿ ಎಲ್ಲ ಕಡೆಗೆ ಬಹು ಬಲಿಷ್ಠ ಶಕ್ತಿಗಳು, ಸಾಮ್ರಾಜ್ಯವಾದದ ವಿನಾಶ ಕಾಲವು ಸಮೀಪಿಸುವಂತೆ ಕಾರ್ಯತತ್ಪರವಾಗಿವೆ. ಈಗಿನ ಯುದ್ಧವು ತಾತ್ಪೂರ್ತಿಕವಾಗಿ ನಿಂತಿದೆ. ಶಾಂತಿಪರಿಷತ್ತಿನಲ್ಲಿಯೋ ಕರಾರುಗಳನ್ನು ಒತ್ತಾಯದಿಂದ ಹೇರಲಾಗಿದೆ. ಆದರೆ ಯುದ್ಧಾನಂತರದ ಜಗತ್ತಿನ ಮೇಲೆ ಇವುಗಳ ಪರಿಣಾಮವೇನೂ ಆಗುವುದಿಲ್ಲ. ಯುದ್ಧವೆಂಬುದು ಒಬ್ಬ ಬಹು ವಿಲಕ್ಷಣ ರಸಾಯನಜ್ಞನಂತಿದೆ. ಆದರ ಕತ್ತಲೆಯ ಕೋಣೆಗಳಲ್ಲಿ ಪರಿಶುದ್ಧಕರವಾದ ಕೆಲವೊಂದು ಶಕ್ತಿಗಳು ಹುದುಗಿಕೊಂಡಿವೆ. ಅವು ಜಯಾಪಜಯ ಹೊಂದಿದವರಿಬ್ಬರ ವಿಚಾರಗಳನ್ನೂ ಮೂಲೆಗುಂಪು ಮಾಡುತ್ತವೆ. ಕಳೆದ ಯುದ್ಧದ ನಂತರ ಯುರೋಪ್ ಮತ್ತು ಏಷಿಯಾದ ನಾಲ್ಕು ಬಲಿಷ್ಠ ಸಾಮ್ರಾಜ್ಯಗಳು—ರಶಿಯನ್, ಜರ್ಮನ್, ಆಸ್ಟ್ರಿಯನ್ ಮತ್ತು ಒಟೋ

ಮನ್ ಎಂಬಿವು—ಹೋರಾಡಿ ಮಣ್ಣುಮುಕ್ಕಬೇಕೆಂದು ಯಾವ ಶಾಂತಿ ಪರಿಷತ್ತೂ ನಿರ್ಧರಿಸಿರಲಿಲ್ಲ. ಅಥವಾ ರಶಿಯದ, ಜರ್ಮನಿಯ ಮತ್ತು ತುರ್ಕಸ್ಥಾನದ ಕ್ರಾಂತಿಯನ್ನು ಲೈಡ್ ಜಾರ್ಜ್, ಕ್ಲೆಮೆನ್ಸಾ, ವಿಲ್ಸನ್ ಮುಂತಾದವರಲ್ಲಿ ಯಾರೂ ಮುಂದಾಲೋಚಿಸಿರಲಿಲ್ಲ.

ಈ ರಸಾಯನಜ್ಞನು, ಜಗತ್ತಿನ ತುಂಬ, ಜನರು ಎಲ್ಲೆಲ್ಲಿ ಹೋರಾಡುವರೋ ಅಲ್ಲಲ್ಲಿ, ತನ್ನ ಕೆಲಸ ನಡೆಸಿದ್ದಾನೆ. ಹಿಂದುಸ್ಥಾನದಲ್ಲಿಯೂ ಅವನ ಕೆಲಸ ನಡೆದಿದೆ. ಇಲ್ಲಿ ಅವನ ಕೆಲಸವೆಂದರೆ ಸಮಾಜಿಕ ಕ್ರಾಂತಿ. ಈ ಯುದ್ಧದ ನಂತರ ಚರ್ಚಿಲ್ ಅಥವಾ ರೂಜ್‌ವೆಲ್ಟರಾಗಲಿ, ಹಿಟ್ಲರ್ ಅಥವಾ ಟೋಜೋರಾಗಲಿ, ಜಗತ್ತಿನ ಭವಿತವ್ಯತೆಯನ್ನು ನಿರ್ಧರಿಸಲಾರರು. ಇಂತಹ ಮಹತ್ವದ ಕೆಲಸವನ್ನು ನಮ್ಮಂತಹರು ಪ್ರದರ್ಶಿಸುವ ಶಕ್ತಿ ಮಾತ್ರವೇ ಮಾಡಬಲ್ಲುದು. ಕ್ರಾಂತಿಕಾರಕ ಶಕ್ತಿಗಳು ಚಟುವಟಿಕೆಯನ್ನು ನಡೆಸಿವೆ ಎಂಬುದರಲ್ಲಿ ಸಂದೇಹವಿಲ್ಲ. ಭವಿಷ್ಯದ ಯಾವ ಯೋಚನೆಯೂ ಇಲ್ಲದೆ ಲಕ್ಷಾಂತರ ಜನರು ಚಿತ್ರಹಿಂಸೆಗಳನ್ನು ಅನುಭವಿಸುತ್ತಲಿದ್ದಾರೆಂಬುದನ್ನು ನಾವು ನಂಬಬಲ್ಲೆವೆ? ಆಳರಸರು ತಮ್ಮ ಮೇಲೆ ಪ್ರತಿದಿನ ಸುರಿಸುತ್ತಿರುವ ಸುಳ್ಳಿನ ಮಳೆಯನ್ನು ಲೆಕ್ಕವಿಲ್ಲದಷ್ಟು ಜನರು ನಂಬುತ್ತಿರುವರೆಂದು ನಾವು ನಂಬಬಲ್ಲೆವೆ? ಅದು ಹಾಗೆ ಎಂದಿಗೂ ಇರಲಾರದು.

ಸಂಪೂರ್ಣ ವಿಜಯವೇ ನಮ್ಮ ಗುರಿಯೆಂಬುದನ್ನು ನಿರ್ಧರಿಸಿದ ಬಳಿಕ, ನಾವು ಮುನ್ನುಗ್ಗಲೇಬೇಕು. ಹಾಗಾದರೆ ನಾವು ಪ್ರತ್ಯಕ್ಷವಾಗಿ ಮಾಡಬೇಕಾದುದೇನು? ಯುದ್ಧವನ್ನು ಗೆಲ್ಲಲಿ ಸೋಲಲಿ, ಸೇನಾಪತಿಯು ಮಾಡುವುದೇನು? ಅವನು ಎಲ್ಲವನ್ನೂ ಸರಿಪಡಿಸಿಕೊಂಡು ಮತ್ತೊಂದು ಯುದ್ಧದ ಸಿದ್ಧತೆ ನಡೆಸುತ್ತಾನೆ. ರೋಮೆಲ್ಲನು ಮಹತ್ವದ ವಿಜಯವನ್ನು ಪಡೆದ ಬಳಿಕ ಎಲ್‌ಎಲಾಮಿನ್ನಿನ ಬಳಿ ತನ್ನ ದಂಡನ್ನು ಸಜ್ಜುಗೊಳಿಸಿಕೊಂಡು ಮುಂದಿನ ಯುದ್ಧದ ಸಿದ್ಧತೆಗಾಗಿ ನಿಲ್ಲಬೇಕಾಯಿತು. ಅಲೆಗ್ಝಾಂಡರನೂ ಸಿದ್ಧತೆಯಲ್ಲಿ ತೊಡಗಿ ತನ್ನ ಸೋಲನ್ನು, ಮುಂದಿನ ಪ್ರಚಂಡ ವಿಜಯಸಂಪಾದನೆಗಾಗಿ ಉಪಯೋಗಿಸಿಕೊಂಡನು. ನಮ್ಮದೇನೂ ಸೋಲು ಅಲ್ಲ. ಯಾಕೆಂದರೆ, ನಮ್ಮ ಕೆಲಸದಿಂದ ದೇಶದಲ್ಲೆಲ್ಲ ಬ್ರಿಟಿಷ್

ದಾಳಿಕಾರನ ಆಡಳಿತವು ಕುಂಠಿತವಾದುದರಿಂದ ನಮಗೆ ನಮ್ಮ ಯುದ್ಧದ ಪೂರ್ವರಂಗದಲ್ಲಿ ಗೆಲುವು ದೊರೆತಂತಾಯಿತು. ಬ್ರಿಟಿಷ್ ರಾಜ್ಯವೆಂಬ ಹೆಸರಿನಿಂದ ಮೆರೆಯುತ್ತಿರುವ ಪೋಲೀಸ್ ಮತ್ತು ಅಮಲುದಾರರ ಶಕ್ತಿ, ಜನತೆಯ ಸಂಯುಕ್ತ ಶಕ್ತಿಯ ಆಘಾತಕ್ಕೆ ರಟ್ಟಿನ ಮನೆಯಂತೆ ಕುಸಿದು ಬೀಳುವುದೆಂಬುದು ಜನತೆಗೆ ಈಗ ಸ್ಪಷ್ಟವಾಗಿ ತಿಳಿದುಬಂದಿದೆ. ಈ ಪಾಠ ವನ್ನು ನಾವು ಎಂದಿಗೂ ಮರೆಯಲಾಗದು. ನಮ್ಮ ಮುಂದಿನ ಹೋರಾಟಕ್ಕೆ ಇದುವೆ ಸಹಾಯಕಾರಿಯಾಗುತ್ತದೆ.

ಈಗ ನಮ್ಮ ಮೂರನೆಯ ಮತ್ತು ಅತ್ಯಂತ ಮಹತ್ವದ ಕೆಲಸವೆಂದರೆ ಮುಂದಿನ ದೊಡ್ಡ ಹೋರಾಟಕ್ಕೆ ನಾವು ಸಿದ್ಧರಾಗುವುದು. ಸುಸಂಘಟನೆ, ಶಿಸ್ತು, ಇವು ಈಗ ನಮ್ಮ ಜಪಮಂತ್ರ.

ಮುಂದಿನ ಹೋರಾಟವೆ? ಅದನ್ನು ಮೊದಲಿಸುವುದು ಯಾವಾಗ? ಇನ್ನು ೫-೬ ವರುಷಗಳಾದರೂ ಜನತೆ ಇನ್ನೊಂದು ಹೋರಾಟಕ್ಕೆ ಅಣಿ ಯಾಗಲಾರದೆಂದು ಕೆಲವರ ಅಭಿಪ್ರಾಯ. ಶಾಂತಿಕಾಲದಲ್ಲಿ ಈ ಲೆಕ್ಕ ಸರಿಯಾಗಬಹುದು. ಆದರೆ ಜಗತ್ತು ಅಸ್ತವ್ಯಸ್ತವಾಗಿ ಹೋಗಿರುವುದ ರಿಂದಲೂ, ಸಂಗತಿಗಳು ಬಹು ತ್ವರಿತದಿಂದ ಸಂಭವಿಸುತ್ತಿರುವುದರಿಂದಲೂ ಈ ಎಣಿಕೆ ಸರಿಯಾಗಲಾರದು. ಬ್ರಿಟಿಷ್ ಸಾಮ್ರಾಜ್ಯವಾದವು ತನ್ನ ಕೈಗೊಂಬೆಗಳಾದ ಲಿನ್‌ಲಿತ್‌ಗೋ, ಹ್ಯಾಲೆಟ್, ಸ್ಟುಅರ್ಟ್ ಮುಂತಾದ ಪ್ರಭೃತಿಗಳ ಅಸಹ್ಯಧೋರಣೆಯ ಮುಖಾಂತರ ಜನತೆಯ ತ್ವೇಷವನ್ನು ಹತ್ತಿಕ್ಕಿರಬಹುದು. ಆದರೆ ಜನತೆಯಲ್ಲಿ ಅದರ ಬಗೆಗಿದ್ದ ಸ್ನೇಹಭಾವವು ಅಳಿದುಹೋಗಿದೆ. ಇಂತಹ ಬ್ರಿಟಿಷ್ ನಾಜೀ ನರಕಯಾತನೆ ನಡೆದ ಎಲ್ಲ ಕಡೆಯಲ್ಲಿಯೂ ಅಸಂತುಷ್ಟಿ, ಕ್ರೋಧ, ಸೇಡು ಮುಂತಾದ ವಿಚಾರಗಳಿಂದ ಜನತೆ ಕುದಿಯುತ್ತಿದೆ. ಮುಂದಿನ ಹೋರಾಟಕ್ಕಾಗಿ ಬಹು ಶಕ್ತಿಯುತ ವಾದ ಸಿದ್ಧತೆ ನಡೆದಿದೆಯೆಂಬುದನ್ನು—ಸರ್ವಶಕ್ತಿಗಳನ್ನೂ ಕೇಂದ್ರೀಕರಿಸಿ ಸುಸಂಘಟಿತವಾಗಿ, ಓರಣದಿಂದ, ಕಾರ್ಯವನ್ನು ಪ್ರಾರಂಭಿಸುವ ಯೋಜನೆ ಸಿದ್ಧವಾಗುತ್ತಿದೆಯೆಂಬುದನ್ನು—ಜನರು ಅರಿತುಕೊಳ್ಳುವುದು ಅಗತ್ಯ. ನಮ್ಮ ಮುಂದಿನ ದಾಳಿಗೆ ಇದು ಒಳ್ಳೇ ಸಹಾಯಕಾರಿಯಾಗುತ್ತದೆ. ಅಂತರ್‌ರಾಷ್ಟ್ರೀಯ ಸಮಸ್ಯೆಗಳು ನಮಗೆ ಅನುಕೂಲವಾಗಬಲ್ಲುವು.

ಇದಲ್ಲದೆ ಮಹಾತ್ಮಾಜಿಯವರ ಮುಂಬರುವ ಆಮರಣಾಂತ ಉಪವಾಸವೂ ನಮ್ಮ ಕಣ್ಣಮುಂದಿದೆ. ನಮ್ಮ ಹಿಡಿತ ಸಡಿಲಾಗಬಾರದೆಂದೂ, ನಾವು ಹೊಯ್ದಾಡಬಾರದೆಂದೂ, ಕೆಲಸವು ಕೊನೆಗೊಂಡಿತೆಂದು ಅಲಸಿಗರಾಗ ಬಾರದೆಂದೂ ಅದು ನಮ್ಮನ್ನು ಎಚ್ಚರಿಸುತ್ತದೆ.

ಮುಂದಿನ ಹೋರಾಟದ ಪ್ರಶ್ನೆಯು, ಕ್ರಾಂತಿಯ ನಿಶ್ಚಿತಕಾರ್ಯ ವನ್ನು—ಎಂದರೆ ಕ್ರಾಂತಿಕಾರಕ ಸರಕಾರದ ಕೇಂದ್ರಗಳ ಸ್ಥಾಪನೆಯನ್ನು— ಅವಲಂಬಿಸಿದೆ. ಈ ಪ್ರಶ್ನೆ ಎಂದೊಡನೆ ಹಿಂಸೆ, ಸುಸಜ್ಜಿತ ದಂಡು, ಮುಂತಾದ ಪ್ರಶ್ನೆಗಳು ಮುಂದೆಬರುತ್ತವೆ. ಈ ಮಾತು ನಮ್ಮ ಕ್ರಾಂತಿಯ ಭವಿತವ್ಯತೆಗೆ ನಿಕಟವಾಗಿ ಸಂಬಂಧಿಸಿರುವುದರಿಂದ ಈ ವಿಷಯದ ಬಗೆಗೆ ನನ್ನ ಅಭಿಪ್ರಾಯವನ್ನು ಹೇಳುತ್ತೇನೆ

ಮೊದಲು, ಈ ಕ್ರಾಂತಿಯಲ್ಲಿ ಹಿಂಸೆಯನ್ನು ಬಳಸಿದ್ದರ ಬಗೆಗೆ ಬ್ರಿಟಿಷ್ ಅಧಿಕಾರಿಗಳು ಎಬ್ಬಿಸಿದ ಹುಯಿಲನ್ನು ಕುರಿತು ಒಂದೆರಡು ಮಾತು ಹೇಳಲೇಬೇಕು. ಜನರನ್ನು ಬಹುವಾಗಿ ಕೆಣಕಿದ್ದರಿಂದ ತುಸು ಹಿಂಸೆ ನಡೆದುದೇನೋ ನಿಜ. ಆದರೆ ಪ್ರಚಂಡ ಜನಜಾಗ್ರತಿಗೂ, ವೈಯಕ್ತಿಕ ಮತ್ತು ಅಪಾರ ಅಹಿಂಸೆಗೂ ಅದನ್ನು ಹೋಲಿಸಿದರೆ ಈ ಹಿಂಸೆ ತೀರ ಕಡಿಮೆ ಯೆಂದು ಕಂಡುಬರುತ್ತದೆ. ಪರಕೀಯ ಸರಕಾರದ ಸಾವಿರಾರು ಬ್ರಿಟಿಷ್ ಮತ್ತು ಹಿಂದೀ ಕೆಲಸಗಾರರು ಕೆಲವು ದಿನಗಳ ಮಟ್ಟಿಗಾದರೂ ಜನತೆಯ ಕೈಯಲ್ಲಿ ಸಿಕ್ಕಿಕೊಂಡಿದ್ದರೆಂಬುದನ್ನೂ, ಜನತೆ ಅವರನ್ನು ಕರುಣೆಯಿಂದ ಕಾಪಾಡಿ, ಅವರ ಪ್ರಾಣಕ್ಕೂ ಆಸ್ತಿಗೂ ಪೆಟ್ಟುಬೀಳದಂತೆ ನೋಡಿಕೊಂಡಿದೆ ಯೆಂಬುದನ್ನೂ ನಾವು ಮರಯಕೂಡದು. ಕೈಯಲ್ಲಿ ಕ್ರಾಂತಿಯ ಪತಾಕೆ ಯನ್ನೆತ್ತಿ, 'ಇನ್ ಕಿಲಾಬ್ ಜಿಂದಾಬಾದ್' ಎಂದು ಘೋಷಿಸುತ್ತ ಮುನ್ನುಗ್ಗಿ ಪ್ರಚಂಡ ಸಾಹಸ ಧೈರ್ಯಗಳನ್ನು ಪ್ರಕಟಿಸುತ್ತ ಶತ್ರುವಿನ ಕ್ರೂರ ಗುಂಡುಗಳಿಗೆ ಆಹುತಿಯಾದ ಸಾವಿರಾರು ತರುಣ ತರುಣಿಯರ ಗತಿಯೇನು? ಈ ದಿವ್ಯ ಸಾಹಸದ ಬಗೆಗೆ ಬ್ರಿಟಿಷರು ಶ್ಲಾಘನೆಯ ಒಂದು ಶಬ್ದವನ್ನಾದರೂ ನುಡಿದಿದ್ದಾರೆಯೆ?

ಹಿಂಸೆಯಲ್ಲಿ ಮುಳುಗಿ ಏಳುತ್ತಿರುವ, ಹಿಂಸೆಯ ತಳಹದಿಯ ಮೇಲೆಯೇ ನಿಂತ, ಪ್ರತಿದಿನವೂ ಚಿತ್ರಹಿಂಸೆಯ ಮೂಲಕ ಲಕ್ಷಾಂತರ

ಜನರ ಪ್ರಾಣವನ್ನು ಹಿಂಡಿ ನೆತ್ತರು ಸುರಿಸುತ್ತಿರುವ ಬ್ರಿಟಿಷರು, ಪರರು ಮಾಡುವ ಹಿಂಸೆಯ ಬಗೆಗೆ ಕೋಲಾಹಲವನ್ನೆಬ್ಬಿಸುವುದು ಯೋಗ್ಯವಲ್ಲ. ತಮ್ಮ ವಿರುದ್ಧವಾಗಿ ಹೋರಾಡಲು ನಾವು ಎಂತಹ ಆಯುಧಗಳನ್ನು ಬಳಸುವೆವೆನ್ನುವುದನ್ನು ಅರಿತುಕೊಂಡು ಬ್ರಿಟಿಷರು ಮಾಡುವುದೇನು? ಪ್ರತಿಪಕ್ಷವು ಅಹಿಂಸಾತ್ಮಕವಾಗಿ ಹೋರಾಡಿದರೆ ತಾವು ಅವರೊಡನೆ ಅಹಿಂಸಾತ್ಮಕವಾಗಿ ಹೋರಾಡುವೆವೆಂದು ಅವರು ಪ್ರತಿಜ್ಞೆಮಾಡಿದ್ದಾರೆಯೆ? ಅಹಿಂಸಾತ್ಮಕವಾಗಿ ಹೋರಾಡಿದ ನಮ್ಮ ಸಾವಿರಾರು ಯೋಧರನ್ನು ಅವರು ಗುಂಡಿಕ್ಕಿ ಕೊಲ್ಲಲಿಲ್ಲವೆ? ನಾವು ಎಂತಹ ಆಯುಧಗಳನ್ನು ಉಪಯೋಗಿಸಿದರೂ ನಮ್ಮ ವಿರುದ್ಧವಾಗಿ ಗುಂಡು, ಸುಲಿಗೆ, ಮಾನಭಂಗ, ಕೊಳ್ಳಿಮುಂತಾದುವೇ ಬ್ರಿಟಿಷರ ಆಯುಧ. ಆದುದರಿಂದ ನಾವು ತಮ್ಮೊಡನೆ ಹೇಗೆ ಹೋರಾಡುವೆವೆಂಬ ವಿಷಯದಲ್ಲಿ ಅವರು ಬಾಯಿಮುಚ್ಚಿಕೊಂಡಿರಬೇಕು. ಅದು ನಮಗೆ ಮಾತ್ರ ಸಂಬಂಧಿಸಿದ ವಿಷಯ.

ಅಹಿಂಸೆಯ ವಿಷಯದಲ್ಲಿ ಗಾಂಧೀಜಿಗೂ ಕಾಂಗ್ರೆಸ್ ಕಾರ್ಯಕಾರೀ ಮಂಡಲ ಮತ್ತು ಅಖಿಲಭಾರತ ಕಾಂಗ್ರೆಸ್ ಸಮಿತಿಗೂ ಇರುವ ಭಿನ್ನಾಭಿಪ್ರಾಯದ ಕಡೆಗೆ ನಾನು ನಿಮ್ಮ ಗಮನವನ್ನು ಎಳೆಯಬಯಸುತ್ತೇನೆ. ಗಾಂಧೀಜಿ ಎಂತಹ ಸಂದರ್ಭದಲ್ಲಿಯೂ ಅಹಿಂಸೆಯನ್ನು ಬಿಟ್ಟು ಕದಲುವಂತಿಲ್ಲ. ಅದು ಶ್ರದ್ಧೆಯ ಮತ್ತು ತತ್ವದ ಮಾತು. ಆದರೆ ಕಾಂಗ್ರೆಸ್ಸಿನ ವಿಷಯದಲ್ಲಿ ಹಾಗಲ್ಲ. ಆದುದರಿಂದ ಈ ಯುದ್ಧಕಾಲದಲ್ಲಿ ಭಾರತವು ಸ್ವತಂತ್ರವಾದರೆ, ಇಲ್ಲವೆ ಇಲ್ಲಿ ರಾಷ್ಟ್ರೀಯ ಸರಕಾರವು ಸ್ಥಾಪಿತವಾದರೆ, ಭಾರತವು ಪರರ ದಾಳಿಯನ್ನು ಆಯುಧಗಳಿಂದ ಎದುರಿಸುವುದು ಎಂದು ಕಾಂಗ್ರೆಸ್ಸು ಮತ್ತೆ ಮತ್ತೆ ಒತ್ತಿ ಹೇಳಿದೆ. ಜಪಾನು ಮತ್ತು ಜರ್ಮನಿಯ ವಿರುದ್ಧ ನಾವು ಆಯುಧಗಳಿಂದ ಹೋರಾಡಲು ಸಿದ್ಧರಿದ್ದರೆ, ಬ್ರಿಟಿಷರ ವಿರುದ್ಧ ಏಕೆ ಹೋರಾಡಬಾರದು? ಈ ಪ್ರಶ್ನೆಗೆ 'ಅಧಿಕಾರದಲ್ಲಿದ್ದ ಕಾಂಗ್ರೆಸ್ಸು ಸೈನ್ಯಸಿದ್ಧತೆಯನ್ನು ಮಾಡಬಹುದು. ಅಧಿಕಾರವಿಲ್ಲದ ಈಗಿನ ಕಾಂಗ್ರೆಸ್ಸಿಗೆ ಅದು ಸಾಧ್ಯವಿಲ್ಲ'ವೆಂದು ಉತ್ತರಿಸಬಹುದು. ಭಾರತದಲ್ಲಿ ಕ್ರಾಂತಿಕಾರಕ ಸೈನ್ಯವೊಂದು ಸನ್ನದ್ಧವಾದರೆ, ಇಲ್ಲವೆ ಈಗಿನ ಹಿಂದೀ ಸೈನ್ಯವು ಅಥವಾ ಅದರ ಒಂದು ತುಂಡು ಬಂಡುಹೂಡಿದರೆ, ಸೈನಿಕರಿಗೆ

ಬಂಡುಹೂಡಿರೆಂದು ಮೊದಲು ಹೇಳಿ ಆ ಬಳಿಕ ಬಂಡುಗಾರರಿಗೆ 'ನಿಮ್ಮ ಶಸ್ತ್ರಾಸ್ತ್ರಗಳನ್ನು ಕೆಳಗಿರಿಸಿ ಬ್ರಿಟಿಷರ ಗುಂಡುಗಳನ್ನು ಬರಿಗೈಯಿಂದ ಎದುರಿಸಿರಿ' ಎಂದು ಹೇಳುವುದು ವಿಸಂಗತವಾಗಲಾರದೆ ?

ಕೆಚ್ಚೆದೆಯ ಅಹಿಂಸೆಯನ್ನು ಬಹು ಜನರು ಆಚರಿಸಿದರೆ ಅದು ಹಿಂಸೆಯನ್ನು ನಿರ್ವಿಣ್ಣಗೊಳಿಸಬಲ್ಲುದೆಂದು ನಾನು ಎದೆತಟ್ಟಿ ಹೇಳಬಲ್ಲೆ. ಆದರೆ ಇಂತಹ ಅಹಿಂಸೆಯ ಕೊರತೆ ಇದ್ದಲ್ಲಿ, ಶಾಸ್ತ್ರಗಳ ಸೂಕ್ಷ್ಮಭೇದಗಳ ಚರ್ಚೆಯಲ್ಲಿ ಮುಳುಗುತ್ತ ಈ ಕ್ರಾಂತಿಯ ಬೆಳೆವಣಿಗೆಯನ್ನು ಕುಗ್ಗಿಸಿ ಅಪಜಯಕ್ಕೆ ನಿಮ್ಮನ್ನು ಈಡುಮಾಡುವ ಹೇಡಿತನಕ್ಕೆ ಎಂದಿಗೂ ಇಂಬುಗೊಡಕೂಡದು.

ಕ್ರಾಂತಿಯ ಕೊನೆಯ ಸ್ವರೂಪವನ್ನು ಚೆನ್ನಾಗಿ ತಿಳಿದುಕೊಂಡು, ನಮ್ಮ ಶಕ್ತಿಗಳನ್ನು ಸಜ್ಜುಗೊಳಿಸಿ ಸುಸಂಘಟಿತರಾಗಿ, ಓರಣದಿಂದ ಕಾರ್ಯಮಾಡಲು ಕಲಿತುಕೊಳ್ಳಬೇಕು. ಕೈಕೊಂಡ ಯಾವ ಕೆಲಸದಲ್ಲಿಯೂ ಒಳಂಗಿದೊಳಗೇ ಒಳಸಂಚಿನಿಂದ ನಡೆಯುವ ರೀತಿ ನಮ್ಮದಲ್ಲವೆಂಬುದನ್ನು ತಿಳಿದುಕೊಳ್ಳಬೇಕು. ಅಖಿಲ ಜನತೆಯ ಸಂಪೂರ್ಣ ಕ್ರಾಂತಿಯೇ ನಮ್ಮ ಗುರಿ. ಆದುದರಿಂದ ಅಪಾರವಾದ ಸೂಕ್ಷ್ಮ ಕೆಲಸ ಮಾತ್ರವಲ್ಲದೆ ನಾವು ಜನಸಾಮಾನ್ಯರಲ್ಲಿಯೂ ಅಪಾರ ಜಾಗ್ರತಿಯನ್ನು ಹುಟ್ಟಿಸಬೇಕು. ಹಳ್ಳಿಯ ಒಕ್ಕಲಿಗರೊಡನೆ, ಕಾರಖಾನೆ ಕಣಿ ಮತ್ತು ರೇಲ್ವೆಗಳಲ್ಲಿ ದುಡಿಯುವ ಕೂಲಿಕಾರರೊಡನೆ, ನಮ್ಮ ಸಂಬಂಧವನ್ನು ಹೆಚ್ಚಿಸಬೇಕು. ಒಂದೇಸಮನಾದ ಪ್ರಚಾರಕಾರ್ಯದಿಂದ ಅವರಲ್ಲಿ ಜಾಗ್ರತಿಯನ್ನುಂಟುಮಾಡಿ ಈಗಿನ ಅವರ ಸಂಕಟಗಳಲ್ಲಿ ಅವರಿಗೆ ನೆರವಾಗಬೇಕು. ತಮ್ಮ ಆವಶ್ಯಕತೆಗಳಿಗಾಗಿ ಹೋರಾಡುವಂತೆ ಅವರನ್ನು ಸಂಘಟಿಸಬೇಕು. ನಮ್ಮ ಅನೇಕ ಕಾರ್ಯಕಲಾಪಗಳಿಗಾಗಿ ಅವರೊಳಗಿನ ಯೋಗ್ಯರಾದ ಸೈನಿಕರನ್ನು ಆಯ್ದುಕೊಂಡು ವಿಷಯಜ್ಞಾನವಾಗುವಂತೆ, ರಾಜಕೀಯ ಚಟುವಟಿಕೆಗಳು ತಿಳಿಯುವಂತೆ ಅವರನ್ನು ಪಳಗಿಸಬೇಕು. ಪಳಗಿದ ಇಂಥ ಕೆಲವರು ಮಾತ್ರವೇ ಸಾವಿರಾರು ಜನರಿಂದ ಆಗದ ಕೆಲಸವನ್ನು ಮಾಡಬಲ್ಲರು. ಪ್ರತಿಯೊಂದು ಹಳ್ಳಿ, ತಾಲೂಕು ಮತ್ತು ಜಿಲ್ಲೆಯಲ್ಲಿ, ಪ್ರತಿಯೊಂದು ಕಾರಖಾನೆ, ಗಿರಣಿಯಲ್ಲಿ, ಮತ್ತು ಬೇರೆ ಎಲ್ಲ ಔದ್ಯೋಗಿಕ

ಕೇಂದ್ರಗಳಲ್ಲಿ, ಮನಸ್ಸಿನಿಂದಲೂ ಆಯುಧಗಳಿಂದಲೂ ಸುಸಜ್ಜಿತರಾದ ಯೋಧರು ಸನ್ನದ್ಧರಾಗಬೇಕು; ಮುಂಬರುವ ಕ್ರಾಂತಿಯಲ್ಲಿ ಹೋರಾಡಲು ಇವರು ಹಾತೊರೆಯುತ್ತಿರಬೇಕು.

ಆಮೇಲೆ ಹಿಂದೀ ಸೈನ್ಯದಲ್ಲಿ, ಸರಕಾರದ ಹಿಂದೀ ಕೆಲಸಗಾರರಲ್ಲಿ ನಾವು ಮಾಡಬೇಕಾದ ಕೆಲಸ ಇನ್ನೂ ಬಹಳವಿದೆ. ಜನತೆಯಲ್ಲಿ ಕ್ಷೋಭೆಯನ್ನು ಹುಟ್ಟಿಸಿ, ಅದನ್ನು ಪ್ರದರ್ಶಿಸುವಂತೆ ಹುರಿಗೊಳಿಸಬೇಕಾಗಿದೆ. ಶಾಲೆ ಕಾಲೇಜುಗಳಲ್ಲಿ, ಪೇಟೆ ಸಂತೆಗಳಲ್ಲಿ ಮಾಡಬೇಕಾದ ಕೆಲಸವಿದೆ. ಸಂಸ್ಥಾನಗಳಲ್ಲಿ, ಗಡಿನಾಡುಗಳಲ್ಲಿ ಆಗಬೇಕಾದ ಎಷ್ಟೋ ಕೆಲಸವಿದೆ. ಅದೆಲ್ಲವನ್ನೂ ಪ್ರತ್ಯಕ್ಷವಾಗಿ ಬಣ್ಣಿಸುವುದು ಸಾಧ್ಯವಿಲ್ಲ. ಮಾಡಬೇಕಾದ ಕೆಲಸ ಅಪಾರವಾಗಿದೆ, ಪ್ರತಿಯೊಬ್ಬನೂ ದುಡಿಯುವಷ್ಟಿದೆ ಎಂದಿಷ್ಟೇ ಹೇಳಬಲ್ಲೆ. ಈಗ ಎಷ್ಟೋ ಕೆಲಸ ನಡೆದಿದೆ. ಆದರೆ ಇನ್ನೂ ಆಗಬೇಕಾದ ಕೆಲಸ ಬಹಳವಿದೆ.

ತರುಣರನ್ನುಳಿದು ಈ ಕೆಲಸವನ್ನು ಕೈಕೊಳ್ಳುವವರಾರು? ಈಗಾಗಲೇ ಇಷ್ಟೊಂದು ಮಹತ್ವದ ಕೆಲಸವನ್ನು ಮಾಡಿದ ನಮ್ಮ ವಿದ್ಯಾರ್ಥಿಗಳು, ಇನ್ನು ಮುಂದೆಯಾದರೂ ತಮ್ಮ ಚಟುವಟಿಕೆಗಳನ್ನು ಮುಂದುವರಿಸಿ ತಮ್ಮ ವಚನವನ್ನು ಪಾಲಿಸುವರೆಂದು ಆಶಿಸಬಹುದೊ? ಇದಕ್ಕೆ ವಿದ್ಯಾರ್ಥಿಗಳೇ ಉತ್ತರಕೊಡಬೇಕು.

ಸಿದ್ಧತೆಯೆಂದೊಡನೆ ಯುದ್ಧವು ತಾತ್ಕಾಲಿಕವಾಗಿ ಸಂಪೂರ್ಣ ನಿಂತುಬಿಡುವುದೆಂದು ಅರ್ಥವಲ್ಲ. ಅಲ್ಲಲ್ಲಿ ಹೋರಾಟ, ಗಡಿನಾಡುಗಳಲ್ಲಿ ಚಟುವಟಿಕೆಗಳು, ಗಸ್ತಿ ಮುಂತಾದ ಕಾರ್ಯಗಳು ನಡೆದಿರಲೇಬೇಕು. ಇವೆಲ್ಲವೂ ಮುಂಬರುವ ದಾಳಿಯ ಪೂರ್ವಪೀಠಿಕೆ. ಜನತೆಯಲ್ಲಿ ಸಂಪೂರ್ಣ ವಿಶ್ವಾಸವನ್ನಿಟ್ಟು, ನಾವು ಕೈಕೊಂಡ ಕೆಲಸದಲ್ಲಿ ಆಸ್ಥೆವಹಿಸಿ ಮುನ್ನುಗ್ಗಬೇಕು. ನಮ್ಮ ಹೆಜ್ಜೆಗಳು ಸ್ಥಿರವಾಗಿರಲಿ, ನಮ್ಮ ಮನಸ್ಸು ಗಟ್ಟಿಯಾಗಿರಲಿ; ನಮ್ಮ ಗುರಿ ಸ್ಪಷ್ಟವಾಗಿರಲಿ, ಭಾರತದ ಸ್ವಾತಂತ್ರ್ಯ ಸೂರ್ಯನು ಕ್ಷಿತಿಜದಿಂದ ಈಗಾಗಲೇ ಮೇಲೇರುತಿದ್ದಾನೆ. ನಮ್ಮ ಸಂದೇಹ ವಾದವಿವಾದಗಳ, ಆಲಸ್ಯ ಅನಾಸ್ಥೆಗಳ ಕಾರ್ಮೋಡಗಳು ಆ ರವಿಯನ್ನು ಮುಸುಕುಗೊಳಿಸಿ, ನಮ್ಮನ್ನು ಅಜ್ಞಾನದ ಅಂಧಃಕಾರದಲ್ಲಿ ಮುಳುಗಿಸದಿರಲಿ.

ಕೊನೆಯದಾಗಿ ಗೆಳೆಯರೆ, ನಿಮಗೆ ನನ್ನ ಸೇವೆಯನ್ನು ಸಲ್ಲಿಸಲು ನಾನು ಮತ್ತೆ ಸಮರ್ಥನಾದುದಕ್ಕೆ ನನಗೆ ಅತ್ಯಂತ ಆನಂದ-ಹೆಮ್ಮೆ ಎನಿಸುತ್ತಿದೆ. ನಿಮ್ಮ ಸೇವೆಯಲ್ಲಿ ತೊಡಗಿದಾಗ ನಮ್ಮ ಮುಂದಾಳಿನ 'ಮಾಡು ಇಲ್ಲವೆ ಮಡಿ' ಎಂಬ ಕೊನೆಯ ಮಾತು ಮಾರ್ಗದರ್ಶಿಯಾಗಿಯೂ ನಿಮ್ಮ ಅಪ್ಪಣೆಯೇ ನನ್ನ ಜೀವನದ ಸೌಖ್ಯವಾಗಿಯೂ ಪರಿಣಮಿಸುತ್ತವೆ.

ಭಾರತದ ಒಂದು ಅಜ್ಞಾತ ಸ್ಥಳ. **ಜಯಪ್ರಕಾಶ ನಾರಾಯಣ**



೨

# ಎಲ್ಲ ಸ್ವಾತಂತ್ರ್ಯ ಯೋಧರಿಗೆ

## ಎರಡನೆಯ ಓಲೆ

[ಶತ್ರುವಿನ ಕಾರಾಗ್ರಹದಿಂದ ಜಾರಿದ ಬಳಿಕ ಕೆಲವೊಂದು ತಿಂಗಳ ಹಿಂದೆ ರಾಷ್ಟ್ರೀಯ ಕ್ರಾಂತಿಯ ವಿಷಯವಾಗಿ ನನ್ನ ಅಭಿಪ್ರಾಯವನ್ನೂ ಸೂಚನೆಗಳನ್ನೂ ನಿಮ್ಮ ಮುಂದಿರಿಸಿದ್ದೆನು. ಆ ಮಾತಿಗೆ ಈಗ ೬ ತಿಂಗಳು ಸಂದಿವೆ; ಅನೇಕ ಬದಲಾವಣೆಗಳಾಗಿವೆ. ಆದುದರಿಂದ ಕಳೆದ ತಿಂಗಳುಗಳ ಕೆಲಸವನ್ನೂ ಈಗಿನ ಪರಿಸ್ಥಿತಿಯನ್ನೂ ಪರಿಶೀಲಿಸುವುದು ಹಿತಕರವೆಂದು ನನಗೆ ತೋರುತ್ತದೆ—ಜಯಪ್ರಕಾಶ]

೧

ಕಳೆದ ೬ ತಿಂಗಳಲ್ಲಿ ಉಂಟಾದ ಕ್ರಾಂತಿಯ ನಿಕಟ ಸಂಬಂಧದಿಂದ, ನನ್ನ ದೃಷ್ಟಿಕೋನವನ್ನು ಬದಲಿಸುವ ಅಗತ್ಯವಿಲ್ಲೆಂದು ನನಗೆ ತೋರುತ್ತದೆ. ಮತ್ತು ನನ್ನ ಹಿಂದಿನ ಓಲೆಯಲ್ಲಿ ಮಾಡಿದ ಪರಿಶೀಲನೆಯಲ್ಲಿ—ಒಂದೇ

ಒಂದು ಮಹತ್ವದ ಮಾತಿನ ಹೊರತಾಗಿ ಯಾವ ಹೆಚ್ಚುಕಡಿಮೆಯನ್ನೂ ಮಾಡುವ ಅಗತ್ಯವಿಲ್ಲೆಂದು ತೋರುತ್ತದೆ.

ಕಳೆದ ಡಿಸೆಂಬರಿನಲ್ಲಿ, ಇನ್ನು ಕೆಲವು ತಿಂಗಳಿನಲ್ಲಿಯೇ ಜನತೆ ಮತ್ತೊಂದು ಆಂದೋಲನವನ್ನು ಹೂಡುವುದು ಸಾಧ್ಯವೆಂದು ನನಗೆ ಎನಿಸಿತ್ತು. ಆ ಆಂದೋಲನವು ಇಲ್ಲಿಯ ವರೆಗೆ ಮೊದಲಾಗಲಿಲ್ಲ; ಮತ್ತು ಇಷ್ಟರಲ್ಲಿಯೇ ಪ್ರಾರಂಭವಾಗುವುದೆಂದೂ ತೋರುವುದಿಲ್ಲ. ಈ ಮಾತು ನಮ್ಮ ಈಗಿನ ಧೋರಣೆಗಾಗಲಿ ನಮ್ಮ ಹೋರಾಟದ ಮಾರ್ಗಕ್ಕಾಗಲಿ ಹೇಗೆ ಸಂಬಂಧಿಸಬಹುದೆಂಬ ಪ್ರಶ್ನೆ ಮುಂದೆಬರಬಹುದು. ಇದಕ್ಕೆ ಉತ್ತರವು ಬೇಕಾದರೆ, ಜನತೆಯು ಆಂದೋಲನವನ್ನು ಹೂಡಲು ತಪ್ಪಿದ್ದೇಕೆ ಎಂಬುದನ್ನು ಪರಿಶೀಲಿಸಬೇಕು.

ಇದರಿಂದ ಜನತೆಯ ಹುಮ್ಮಸ್ಸು ಕುಗ್ಗಿದೆಯೆಂದಾಗಲಿ, ಹೋರಾಟದ ನಿರ್ಧಾರ ಸಡಿಲಾಗಿದೆಯೆಂದಾಗಲಿ ತಿಳಿಯುವುದು ಸರಿಯಲ್ಲ. ಜನತೆ ಬ್ರಿಟಿಷ್ ಆಡಳಿತವನ್ನು ಹಿಂದೆ ಎಂದಿಗೂ ಈಗಿನಷ್ಟು ದ್ವೇಷಿಸುತ್ತಿರಲಿಲ್ಲ. ಮತ್ತು ಈ ಆಡಳಿತವನ್ನು ಬುಡಮೇಲುಮಾಡಬೇಕೆಂಬ ನಿರ್ಧಾರ ಈಗಿನಷ್ಟು ಹಿಂದೆ ಎಂದಿಗೂ ಇರಲಿಲ್ಲ. ನಮ್ಮ ಹಿಡಿತವು ಸ್ವಲ್ಪ ಮಟ್ಟಿಗೆ ಸಡಿಲಾದಂತೆ ತೋರುತ್ತದೆ. ಆದರೆ ಅದು ಬರಿಯ ಪಟ್ಟಣಗಳಲ್ಲಿ ಮತ್ತು ಸಮಾಜದ ಸಿರಿವಂತರಲ್ಲಿ. ದಬ್ಬಾಳಿಕೆ ಅತಿಯಾಗಿ ನಡೆದ ಹಳ್ಳಿಪಳ್ಳಿಗಳಲ್ಲಿ ಜನರ ಧೈರ್ಯ ಕುಗ್ಗಿಲ್ಲ. ಜನತೆ, ಇದರ ಸೇಡನ್ನು ಯೋಗ್ಯರೀತಿಯಿಂದ ತೀರಿಸಿಕೊಳ್ಳುವುದೆಂತು ಎಂದು ಕುದಿಯುತ್ತಲಿದೆ. ತಕ್ಕ ಸಮಯದಲ್ಲಿ ಅವರು ಕಾರ್ಯವನ್ನು ಕೈಕೊಳ್ಳುವರು; ಬ್ರಿಟಿಷ್ ಆಡಳಿತವನ್ನು ತುಂಡು ತುಂಡಾಗಿ ಹರಿದೊಗೆಯುವರು. ಬ್ರಿಟಿಷ್ ಪುಂಡಾಟಿಕೆಯಿಂದ ಬಾಧಿಸಲ್ಪಡದಿದ್ದ ಹಳ್ಳಿಗರು ಮಾತ್ರ ಅಂಜಿದಂತೆಯೂ ತಪ್ಪಿಸಿಕೊಳ್ಳುವ ಹಂಚಿಕೆಯಲ್ಲಿದ್ದಂತೆಯೂ ತೋರುತ್ತದೆ. ಆದರೆ ಕೊನೆಯ ಹೊತ್ತು ಬಂದಾಗ ಇವರನ್ನು ಹುರಿದುಂಬಿಸಿ ಕಾರ್ಯಪ್ರವೃತ್ತರನ್ನಾಗಿ ಮಾಡುವುದು ಸಾಧ್ಯ. ಮೊದಲಿನ ಆಂದೋಲನದಲ್ಲಿ ಸೇರಿದ ವಿದ್ಯಾರ್ಥಿಗಳೆಲ್ಲ ಮರಳಿ ಶಾಲೆ ಕಾಲೇಜುಗಳಿಗೆ ಹೋಗುತ್ತಿರುವರೆಂಬುದು ನಿಜ. ಆದರೆ ಅವರು ಧೈರ್ಯ ಗುಂದಿಲ್ಲವೆಂಬುದನ್ನೂ ಮತ್ತೆ ಆಂದೋಲನ ಮೊದಲಾದೊಡನೆ ಮುಖ್ಯ

ಪಾಲುಗಾರರಾಗುವರೆಂಬುದನ್ನೂ ನಾನು ಚೆನ್ನಾಗಿ ಬಲ್ಲೆ. ಆಹಾರದ ಪರಿಸ್ಥಿತಿ ಗಂಭೀರವಾಗಿದ್ದರೂ ಜೀವನದ ಕಷ್ಟನಷ್ಟಗಳು ಮಿತಿಮೀರಿದ್ದರೂ ದಿನದಿನಕ್ಕೆ ಸಂಬಳವು ಕಡಿಮೆ ಬೀಳುತ್ತಿದ್ದರೂ ಕೂಲಿಕಾರವರ್ಗವು ಬ್ರಿಟಿಷರ ಯುದ್ಧಕಾರ್ಯದಲ್ಲಿ ಸಹಾನುಭೂತಿಯನ್ನು ತೋರುವುದೆಂದು ಹೇಳಲಿಕ್ಕಾಗದು. ಹೋರಾಟವು ಇನ್ನೊಮ್ಮೆ ತಲೆದೋರಿದರೆ ಕೂಲಿಕಾರರು ಮೊದಲಿಗಿಂತಲೂ ಹೆಚ್ಚು ಹುರುಪಿನಿಂದ ನಮ್ಮನ್ನು ಕೂಡಿಕೊಳ್ಳುವರೆಂದು ಹೇಳಬಹುದು. ಪೋಲೀಸರಲ್ಲಿ ಕೆಳತರಗತಿಯವರು — ರಾಜನಿಷ್ಠೆಯು ಕಡೆಗೆ ಎಷ್ಟು ಒಲೆದರೂ—ಸಂತುಷ್ಟರಾಗಿದ್ದಾರೆಂದು ನಾನು ನಂಬಲಾರೆ. ಮುಂದಿನ ಆಂದೋಲನದಲ್ಲಿ ಪರಕೀಯ ಸರಕಾರವು ಅವರನ್ನು ನಂಬಿ ಕುಳ್ಳಿರುವಂತಿಲ್ಲ. ಯುದ್ಧವು ಬೆಳೆದಂತೆ ಹಿಂದೀ ಸೈನ್ಯದೊಳಗಿನ ಅಧಿಕಾರಿಗಳ ಅಸಂತುಷ್ಟಿಯೂ ಬೆಳೆಯುತ್ತಲಿದೆ. ಹೊಸ ಸೇನಾಪತಿಯು ಹೆಚ್ಚಿನ ಸಂಬಳದ ಆಮಿಷಕ್ಕೆ ಅವರೇನೂ ಒಳಗಾಗುವಂತಿಲ್ಲ.

ಈ ವಸ್ತುಸ್ಥಿತಿ ನಿಜವಾಗಿದ್ದರೆ ಆಂದೋಲನವು ಮತ್ತೊಮ್ಮೆ ಏಕೆ ಮೊದಲಾಗಲೊಲ್ಲದೆಂದು ಕೇಳಬಹುದು. ಅದಕ್ಕೆ ನಮ್ಮ ಮನೋವೃತ್ತಿಯೇ ಕಾರಣ. ಮುಂದಾಳುಗಳು ಜನತೆಯ ಸಿದ್ಧತೆಯನ್ನು ಚೆನ್ನಾಗಿ ಕಂಡುಕೊಂಡಿಲ್ಲ. ಈಗಿನ ಸರಕಾರವು ದುರ್ಬಲವಾಗಿದೆಯೆಂಬುದನ್ನು ಸಾಮಾನ್ಯ ಜನತೆ ಅರಿತುಕೊಳ್ಳತೊಡಗಿದೆ. ಕಳೆದ ಅಗಸ್ಟಿಗಿಂತ ಮುಂಚೆ, ಬ್ರಿಟಿಷ್ ಸಾಮ್ರಾಜ್ಯ ತತ್ತರಿಸುತ್ತಿದೆಯೆಂದೂ ಅದು ಸಂಪೂರ್ಣ ನಾಶವಾಗಲು ತಾವು ಕೊನೆಯ ಪೆಟ್ಟು ಕೊಡಬೇಕೆಂದೂ ಜನತೆ ಭಾವಿಸಿತ್ತು. ಈಗ ಈ ಭಾವನೆ ಕೊಂಚ ಕಣ್ಮರೆಯಾಗಿರಬಹುದು. ಅಮೇರಿಕೆಯು ಬ್ರಿಟಿಷ್ ಸಾಮ್ರಾಜ್ಯದಿಂದ ಸಿಡಿದು ಹೋಗಬಹುದಾದ ಭಾಗವನ್ನು ಒಗ್ಗೂಡಿಸಿ ರಕ್ಷಿಸುವಂತೆ ಕಾಣುತ್ತದೆ. ಆದರೆ ನಿಜವಾಗಿಯೂ ದುರ್ದೈವಿಯಾದ ಈ ಸಾಮ್ರಾಜ್ಯದ ವಿಚ್ಛೇದನವು ನಡೆದೇ ಇದೆ. ಸೋಜಿಗವೇನೆಂದರೆ ಈ ಕಷ್ಟದಲ್ಲಿ ಅಮೇರಿಕೆಯು ತನ್ನ ಲಾಭವನ್ನು ಹೊಂದುತ್ತಲೇ ಇದೆ. ಏಕೆಂದರೆ ತನ್ನ ಪ್ರಯತ್ನದಿಂದ ಉಳಿದ ಭಾಗವು ತನಗೆ ಅಡವಾಗಿ ಉಳಿಯುವಂತೆ ಅಮೇರಿಕೆ ಜಾಗರೂಕವಾಗಿದೆ. ಆದರೆ ಇವೆಲ್ಲ ಸಾಮಾನ್ಯರಿಗೆ ಅಷ್ಟು ಸ್ಪಷ್ಟವಾಗಿ

ತೋರುವಂತಿಲ್ಲ. ಜನತೆ ಈ ಕಾರಣದಿಂದಲೇ ತುಸು ಹಿಂಜರಿಯುವಂತೆ ಕಾಣುತ್ತದೆ.

ಜನತೆಯ ಈ ಉದಾಸೀನತೆಯನ್ನು ಹೋಗಲಾಡಿಸುವುದು ಸಾಧ್ಯ. ಅಂತರ್‌ರಾಷ್ಟ್ರೀಯ ಪರಿಸ್ಥಿತಿ ಸುಧಾರಿಸಿದರೆ—ಎಂದರೆ ಅದು ಬ್ರಿಟಿಷ್ ಸಾಮ್ರಾಜ್ಯಕ್ಕೆ ಪ್ರತಿಕೂಲವಾದರೆ—ಜನತೆಯಲ್ಲಿ ಉತ್ಸಾಹವೇರಬಹುದು. ಅಥವಾ ಸುಸಂಘಟಿತವಾದ ಕ್ರಾಂತಿಕಾರಕ ಶಕ್ತಿಯು ಶತ್ರುವಿನ ತಲೆಗೆ ಬಲವಾದ ಪೆಟ್ಟುಗಳನ್ನು ಹಾಕಿ, ಎಂಥ ಸೈನ್ಯವಿದ್ದರೂ ಹಿಂದೀ ಕ್ರಾಂತಿಕಾರಕ ಶಕ್ತಿಯ ಎದುರು ಬ್ರಿಟಿಷರ ಆಟ ನಡೆಯಲಾರದೆಂದೂ ಈ ಕಾಲದಲ್ಲಿ ಕ್ರಾಂತಿಯನ್ನೆಬ್ಬಿಸಿದರೆ ಗೆಲುವನ್ನು ದೊರಕಿಸಬಹುದೆಂದೂ ಭರವಸೆಯನ್ನು ಹುಟ್ಟಿಸಿದರೆ ಜನತೆ ಜಾಗೃತವಾಗಬಹುದು.

ಕಳೆದ ಆಗಸ್ಟಿನಲ್ಲಿ ಯುದ್ಧ ಪರಿಸ್ಥಿಯು ನಮಗೆ ಅನುಕೂಲವಾಗಿದ್ದಿತಲ್ಲದೆ ಕಾಂಗ್ರೆಸ್ಸೂ ತನ್ನ ಸರ್ವಶಕ್ತಿಯಿಂದ ಜನತೆಯ ಮುಂದಾಳಾಗಿತ್ತು. ತಮ್ಮ ಮುಂದಾಳುಗಳಲ್ಲಿ ಜನತೆಗೆ ವಿಶ್ವಾಸವಿದ್ದಿತು. ಅವರಿಂದ ಹೋರಾಟಕ್ಕೆ ಕರೆ ಬಂದೊಡನೆ ಹುರುಪಿನಿಂದಲೂ ಹುಮ್ಮಸ್ಸಿನಿಂದಲೂ ಜನರು ಮುಂದೆ ಬರುತ್ತಿದ್ದರು. ಈಗ ಈ ಮುಂದಾಳುಗಳು ಸೆರೆಯಲ್ಲಿದ್ದಾರೆ. ಮತ್ತು ಈಗ ಜನತೆಗೆ ಅವರು ಅಸಹಾಯರಾಗಿ ಕಾಣುವುದು ಸ್ವಾಭಾವಿಕ. ಆದುದರಿಂದ ಜನತೆಯ ಮನೋಭೂಮಿಕೆಯನ್ನು ಸರಿಪಡಿಸಿ ಅವರನ್ನು ಮತ್ತೊಂದು ಆಂದೋಲನಕ್ಕೆ ಅಣಿಗೊಳಿಸುವುದು ಈಗ ಸುಲಭಸಾಧ್ಯವಲ್ಲ.

ಮೊದಲಿನ ರೀತಿಯ ಮೇರೆಗೆ ಕ್ರಾಂತಿಯಲ್ಲಿ ಯಶಸ್ಸು ಪಡೆಯುವುದು ನಮ್ಮ ಕೈಯಲ್ಲಿರದಿದ್ದರೂ ಎರಡನೆಯ ವಿಧದಿಂದ ನಾವು ನಮ್ಮ ಕೆಲಸವನ್ನು ಮುಂದುವರಿಸಲೇಬೇಕು. ಜನತೆ ಕಾರ್ಯೋನ್ಮುಖವಾಗಿಲ್ಲವೆಂಬ ನೆವನದಿಂದ ಯೋದ್ಧರು ಪಾರಾಗುವ ಒಂದು ವಿಧಾನ ಇತ್ತೀಚೆಗೆ ತಲೆದೋರಿದೆ. ಇದು ಸೋಲಿನ ಲಕ್ಷಣ. ನಮ್ಮಲ್ಲಿ ಶಕ್ತಿ ಇಲ್ಲದಿದ್ದರೆ ಜನತೆ ತನ್ನಷ್ಟಕ್ಕೆ ತಾನೇ ಕೆಲಸದಲ್ಲಿ ತೊಡಗಲಾರದು. ನಮ್ಮಲ್ಲಿ ಶಕ್ತಿ ಸಂಘಟನೆಗಳಿಲ್ಲದಿದ್ದರೆ ಜನತೆಯ ವಿಶ್ವಾಸವನ್ನು ನಾವು ಪಡೆಯಲಾರೆವು. ನಮ್ಮ ಚಟುವಟಿಕೆಗಳಿಂದ ನಾವು ಅರ್ಹರೆಂದು ತೋರ್ಪಡಿಸದಿದ್ದರೆ, ನಮ್ಮ ಸಂಘಟನೆ ಶಕ್ತಿಯುತವಾದುದೆಂದು ಜನರಿಗೆ ನಾವು ಮನಗಾಣಿಸಿ

ಕೊಡದಿದ್ದರೆ ಅವರು ನಮ್ಮನ್ನು ಹಿಂಬಾಲಿಸಲಾರರು. ಜನತೆಯಾದರೋ ತನ್ನ ಕರ್ತವ್ಯವನ್ನೊಮ್ಮೆ ತಾನು ಮಾಡಿಬಿಟ್ಟಿದೆ. ಕೊರತೆ ಕಂಡುಬಂದದ್ದು ನಮ್ಮಲ್ಲಿಯೇ. ನಮ್ಮ ಕರ್ತವ್ಯವನ್ನು ನಾವು ಮಾಡುವುದಾದರೆ ಜನತೆ ತನ್ನ ಕೆಲಸವನ್ನು ತಾನು ಮತ್ತೊಮ್ಮೆ ಮಾಡುವುದು. ಕಳೆದ ಆಗಸ್ಟಿನಲ್ಲಿ ಜನತೆಯ ಕಣ್ಮುಂದೆ ಕಾಂಗ್ರೆಸ್ಸಿನ ಶಕ್ತಿಯೂ ಮಹಾತ್ಮರ ಮುಂದಾಳು ತನವೂ ಸ್ಪಷ್ಟವಾಗಿದ್ದುವು. ಈಗ ಜನರು ತಮ್ಮ ಯೋಚನೆಯನ್ನು ತಾವೇ ಮಾಡಿಕೊಳ್ಳಬೇಕೆಂದೂ ಅವರನ್ನು ಮುನ್ನಡೆಸುವ ಶಕ್ತಿ ಸಂಘಟನೆ ಗಳು ದೇಶದಲ್ಲಿ ಇಲ್ಲವೆಂದೂ ಅವರಿಗೆ ಎನಿಸುವಂತಹ ಪರಿಸ್ಥಿತಿಯುಂಟಾ ದರೆ, ಅವರು ನಿರಾಶೆಯಿಂದ ತಮ್ಮ ಗತಿಯನ್ನು ತಾವು ನೋಡಿಕೊಳ್ಳು ವುದು ಸ್ವಾಭಾವಿಕ.

ಆದುದರಿಂದ ಈಗ ಕ್ರಾಂತಿಯ ಮುಖ್ಯ ಭಾರವನ್ನು ಹೊತ್ತು ಯೋಧರು ಕಾರ್ಯೋನ್ಮುಖರಾಗಬೇಕಾಗಿದೆ. ಅವರು ತಮ್ಮ ಸಂಘಟನೆ ಯನ್ನು ಹೆಚ್ಚಿಸಿಕೊಂಡು ಶತ್ರುವಿನೊಡನೆ ನಿರಂತರವಾಗಿ ಹೋರಾಡುವ ಸಿದ್ಧತೆಮಾಡಬೇಕು. ಎಂತಹ ಕಷ್ಟಗಳನ್ನೂ ಸ್ವಾರ್ಥತ್ಯಾಗವನ್ನೂ ಲೆಕ್ಕಿಸ ತಕ್ಕದಲ್ಲ. ಯಾವ ಜಗಳವೂ ಆಸೆಯೂ ನಮ್ಮನ್ನು ಹಿಂದೆಳೆಯಕೂಡದು. ನಮಗೆ ಹೋರಾಟದ ಎಲ್ಲ ಮಾರ್ಗಗಳೂ ತೆರೆದಿವೆ. ನಮ್ಮ ಮತತತ್ವ ಗಳು ಏನೇ ಇರಲಿ, ನಮ್ಮ ಸಾಧನ ಸಾಮಗ್ರಿಗಳು ಏನೇ ಇರಲಿ, ನಮ್ಮ ಮಾರ್ಗವು ಮಾತ್ರ ಸರಳವಾಗಿದೆ. ನಾವು ಹೋರಾಡುತ್ತಲೇ ಇರಬೇಕು. ನಾವು ಹೋರಾಡುವುದು ಒಂದು ವರುಷವಾದರೇನು, ಹತ್ತು ವರುಷವಾದ ರೇನು ? ಅಮೇರಿಕೆ ತನ್ನ ಸ್ವಾತಂತ್ರ್ಯಸಮರವನ್ನು ಏಳು ವರುಷ ಸಾಗಿಸಿತು. ಚೀನರು ತಮ್ಮ ವಿಮೋಚನೆಯ ವಿಗ್ರಹದ ಏಳನೆಯ ವರುಷ ವನ್ನು ಇದೀಗ ಪ್ರಾರಂಭಿಸುತ್ತಲಿದ್ದಾರೆ. ನಾವು ನಮ್ಮ ಹೋರಾಟದ ಮೊದಲನೆಯ ವರುಷವನ್ನು ಇದೀಗ ಮುಗಿಸುತ್ತಲಿದ್ದೇವೆ. ಅಮೇರಿಕೆಯ ಮತ್ತು ಚೀನರ ಯುದ್ಧಗಳಲ್ಲಿ ಒಮ್ಮೊಮ್ಮೆ ಎಲ್ಲವೂ ನಾಶವಾಯಿತೆಂಬಂತೆ ತೋರಿದ ಸಂದರ್ಭಗಳು ಒದಗಿದ್ದವು. ಆದರೆ ಮುಂದಾಳುಗಳೂ ಜನರೂ ಒಂದೇಸಮನೆ ಮುನ್ನುಗ್ಗಿದರು. ಅಮೇರಿಕೆಗೆ ಅದರಿಂದಲೇ ಜಯ ದೊರೆಯಿತು ; ಚೀನಕ್ಕೆ ದೊರೆಯುವುದು ಖಂಡಿತ. ಇದು ನಮ್ಮ ಹೋರಾಟ

ದೊಳಗಿನ ತೀರ ಅಧೋಗತಿಯ ಸಮಯುವೇನಲ್ಲ. ಕೆಲವೊಂದು ಪುಕ್ಕರು, ಹೇಡಿಗಳು ಹಾಗೆ ಹೇಳಬಹುದು. ಅಂತಹರು ದೇಶದ್ರೋಹಿಗಳು. ಇವರನ್ನು ನಾವು ತೊಡೆದುಹಾಕಿ ಮುನ್ನುಗ್ಗಬೇಕು. ಇದಕ್ಕಿಂತ ಭೀಕರ ಸಂದರ್ಭಗಳು ಬರುವುದುಂಟು. ಕಷ್ಟದುಃಖಗಳು ನಮ್ಮನ್ನು ಎದೆಗುಂದಿಸುವ ಬದಲು ಕಲ್ಲೆದೆಯುವರನ್ನಾಗಿ ಮಾಡಬೇಕು. ಏಂದರೆ ಮಾತ್ರ ನಾವು ಜನತೆಯ ವಿಶ್ವಾಸಕ್ಕೆ ಪಾತ್ರರಾಗುವೆವು. ಆಗ ಜನತೆ ನಮ್ಮನ್ನು ಹಿಂಬಾಲಿಸುವುದು.

೨

ಕಳೆದ ಕೆಲವು ತಿಂಗಳಿಂದ, ವಿಶೇಷತಃ ಗಾಂಧೀಜಿ ಮತ್ತು ವೈಸ್‌ರಾಯರ ನಡುವಿನ ಪತ್ರವ್ಯವಹಾರವು ಪ್ರಕಟವಾದಂದಿನಿಂದ, ಹೋರಾಡುವವರಲ್ಲಿ ಹಿಂಸೆ ಮತ್ತು ಅಹಿಂಸೆಯ ಬಗೆಗೆ ವಾದವಿವಾದ ನಡೆದಿದೆ. ಈ ವಿಷಯದಲ್ಲಿ ನನ್ನ ಸ್ಪಷ್ಟ ವಿಚಾರಗಳು ನನ್ನ ಮೊದಲಿನ ಓಲೆಯ ಮುಖಾಂತರ ನಿಮ್ಮೆಲ್ಲರಿಗೆ ವಿದಿತವಾಗಿವೆ. ನನ್ನ ಅಭಿಪ್ರಾಯ ಈಗಲೂ ಅದೇ. ಈ ಮೊದಲೇ ನಾನು ಹೇಳಿದ ಮಾತುಗಳನ್ನು ಪುನರುಚ್ಚರಿಸುವ ಅವಶ್ಯಕತೆ ಇಲ್ಲ. ಆದರೂ ಈ ವಾದ ವಿವಾದದ ಬಗೆಗೆ ಒಂದೆರಡು ಮಾತು ಹೇಳಬಯಸುತ್ತೇನೆ. ಈ ಸಂದರ್ಭದಲ್ಲಿ ಇಂಥ ಜಗಳವು ಅರ್ಥವಿಲ್ಲದುದೆಂದು ನನ್ನ ಮತ. ಸ್ವಾತಂತ್ರ್ಯಕ್ಕಾಗಿ ಹೋರಾಡುವ ಪ್ರತಿ ಒಬ್ಬನೂ ತನ್ನ ರೀತಿಯನ್ನು ಹುಡುಕಲು ಸ್ವತಂತ್ರನು. ಒಂದು ತತ್ವದಲ್ಲಿ ವಿಶ್ವಾಸವಿದ್ದವರೆಲ್ಲರೂ ಒಂದುಗೂಡಿ ಓರಣದಿಂದ ಹೋರಾಡಬೇಕು. ಬೇರೆ ಬೇರೆ ಮಾರ್ಗವನ್ನು ಹಿಡಿಯುವವರು ಅನ್ಯೋನ್ಯರಿಗೆ ಅಡ್ಡಬರದಿರಬೇಕು. 'ಮಾಡು ಇಲ್ಲವೆ ಮಡಿ' ಎಂಬುದು ಕಾರ್ಯದ ಬೀಜಮಂತ್ರವಾಗಿರುವಾಗ ಪರಸ್ಪರರನ್ನು ದೂಷಿಸುವುದರಲ್ಲಿ ಅರ್ಥವಿಲ್ಲ. ಹಿಂಸೆಯನ್ನು ಹಿಡಿಯುವವರು ಗಾಂಧೀಜಿಯವರ ಸ್ಥಾನಮಾನಕ್ಕೆ ಕುಂದುತರುವರೆಂದು ಅಹಿಂಸಾಭಕ್ತರು ಭಾವಿಸಬಹುದು. ಈ ಹೆದರಿಕೆಗೆ ಕಾರಣವೇನೂ ಇಲ್ಲ. ಗಾಂಧೀಜಿಯವರು ಅಹಿಂಸೆಯನ್ನು ಸ್ಪಷ್ಟವಾಗಿಯೂ ಸಂಪೂರ್ಣವಾಗಿಯೂ ಅನುಸರಿಸುವುದರಿಂದ ಸಾವಿರಾರು ಚರ್ಚಿಲ್ಲರು, ಅಮೆರಿಗಳು ಅವರ ಬೆಲೆಯನ್ನು

ಕಡಿಮೆಮಾಡಲಾರರು. ಇನ್ನೊಂದು ಮಾತೇನೆಂದರೆ ನಾವು ಏನು ಮಾಡಿದರೂ, ಹೇಗೆ ಪ್ರಯತ್ನಿಸಿದರೂ ಬ್ರಿಟಿಷ್ ಮುಂದಾಳುಗಳು—ಅವರು ಟೋರಿಗಳೇ ಇರಲಿ, ಕೂಲಿಕಾರರೇ ಇರಲಿ—ಸುಳ್ಳಾಡುವುದನ್ನು ನಾವು ತಡೆಯುವಂತಿಲ್ಲ. ಯಾಕೆಂದರೆ ಸುಳ್ಳು ಬ್ರಿಟಿಷ್ ಸಾಮ್ರಾಜ್ಯದ ಆಧಾರಸ್ತಂಭವಾಗಿದೆ. ಭಾರತದಲ್ಲಿ ಹಿಂಸಾಚರಣೆಯಾದರೆ ಅದಕ್ಕೆ ಹೊಣೆ ಬ್ರಿಟಿಷ್ ಸರಕಾರ ಮಾತ್ರವೇ ಎಂಬುದನ್ನು ಮರೆಯಕೂಡದು.

ಗಾಂಧೀ ವೈಸ್‌ರಾಯ್ ಪತ್ರವ್ಯವಹಾರ ಪ್ರಕಟನಾದಂದಿನಿಂದ ಆರಂಭವಾದ ಮತ್ತೊಂದು ವಿವಾದವೆಂದರೆ ಈ ಹೋರಾಟವನ್ನು ಮೊದಲಿಸಿದ್ದು ಕಾಂಗ್ರೆಸ್ಸೋ? ಮತ್ತು ಅದಕ್ಕೆ ಕಾಂಗ್ರೆಸ್ ಚಟುವಟಿಕೆಯೆಂದು ಹೇಳಬಹುದೊ?—ಎಂಬುದು. ಕೆಲವರಂತೂ, ಗಾಂಧೀಜಿ ಮತ್ತು ಕಾಂಗ್ರೆಸ್ ಮುಂದಾಳುಗಳು ಹೋರಾಟವನ್ನು ಸಾರುವ ಮೊದಲೇ ಸೆರೆಹಿಡಿಯಲ್ಪಟ್ಟಿದ್ದರಿಂದ ಇದು ಕಾಂಗ್ರೆಸ್ಸಿನ ಚಟುವಟಿಕೆ ಅಲ್ಲವೆಂದೂ ಆದ್ದರಿಂದ ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಸೆರೆಮನೆ ಸೇರದಿದ್ದ ಸದಸ್ಯರ ಸಭೆಯೊಂದನ್ನು ಕರೆದು ಮುಂಬಯಿಯಲ್ಲಿ ಸ್ವೀಕೃತವಾದ ಗೊತ್ತುವಳಿಯನ್ನು ಹಿಂದೆಗೆದುಕೊಳ್ಳಬೇಕೆಂದೂ ಸೂಚಿಸುತ್ತಾರೆ. ಈ ವಿಚಾರಸರಣಿಯ ಮೇರೆಗೆ, ಬ್ರಿಟಿಷರು ಮುಂದಾಳುಗಳನ್ನು ಮುಂದಾಗಿಯೇ ಸೆರೆಗೆಯ್ದು ಬಿಟ್ಟರೆ ಕಾಂಗ್ರೆಸ್ಸಿನ ಯಾವ ಹೋರಾಟವೂ ಅಧಿಕೃತವಾಗಲಾರದು. ಈ ಹೋರಾಟಕ್ಕೆ ಕಾಂಗ್ರೆಸ್ಸಿನ ಒಪ್ಪಿಗೆ ಇಲ್ಲವೆನ್ನುವವರು, ಆಗಸ್ಟ್ ೯ ರಲ್ಲಿ ಸರಕಾರವು ಹೇಡಿತನದಿಂದ ನಮ್ಮ ಮುಂದಾಳುಗಳ ಮೇಲೆ ನಡೆಸಿದ ದಬ್ಬಾಳಿಕೆಗೆ ಏನುಮಾಡಬೇಕೆನ್ನುವರು? ಗಾಂಧೀಜಿ ಮತ್ತು ಕಾಂಗ್ರೆಸ್ ಕಾರ್ಯ ಸಮಿತಿಯ ಸದಸ್ಯರ ಮನಸ್ಸಿನಲ್ಲಿ, ತಮ್ಮ ಸೆರೆಯ ನಂತರದ ವಿಷಯದಲ್ಲಿ ಏನು ಯೋಚನೆ ಇದ್ದಿತೆಂದು ಈ ಜನರು ಭಾವಿಸುತ್ತಾರೆ? ನಮ್ಮ ಮುಂದಾಳುಗಳನ್ನು ಕೈದುಮಾಡಿದ್ದಕ್ಕಾಗಿ ಪ್ರತಿಕ್ರಿಯೆ ಏನೂ ಇಲ್ಲವಾಗಿದ್ದರೆ ಈ ಹೋರಾಟವನ್ನು ಸಾರಿದ ವೀರರ ಸ್ಥಿತಿ ಏನಾಗುತಿದ್ದಿತು? ಸಾಮ್ರಾಜ್ಯವಾದೀ ಬೂಟುಗಾಲಿನ ಒದೆತಕ್ಕೆ ದೇಶವು ತಲೆಬಾಗಿದ್ದರೆ ಪರಿಣಾಮವೇನಾಗುತಿದ್ದಿತು? ನಮ್ಮ ಮುಂದಾಳುಗಳ ಬಿಡುಗಡೆಯ ಬೇಡಿಕೆಯನ್ನು ಬರಿಯ ಸಭೆಗಳ ಮೂಲಕ ಮಂಡಿಸಿ ಸುಮ್ಮನಿರಬೇಕಾಗಿದ್ದಿತೆ? ಇಷ್ಟರಿಂದ

ನಮ್ಮ ಮುಂದಾಳುಗಳ ಬಿಡುಗಡೆಯಾಗದಿದ್ದರೆ ಮತ್ತೆ ಸಭೆಸೇರಿ ಕೇಳು ವವರಿಗೆ ಬೇಸರ ಬರುವಂತೆ ಹೇಳಿದ್ದನ್ನೇ ಹೇಳಿ, 'ನಮ್ಮ ಕರ್ತವ್ಯವನ್ನು ನಾವು ಮಾಡಿದೆವು' ಎಂದು ನೆಮ್ಮದಿಯಾಗಿ ಮಲಗಬೇಕಾಗಿದ್ದಿತೆ? ಹೀಗಾ ಗಿದ್ದರೆ ಈ ವೀರಕ್ರಾಂತಿಯ ಉದ್ದೇಶವು ಎಲ್ಲಿ ಉಳಿಯುತ್ತಲಿದ್ದಿತು? ಅದರ ಬಗೆಗೆ ನಾಡಿನ ಮಹನೀಯರು ಆವೇಶಪೂರಿತ ಮಾತುಗಳನ್ನು ಮುಂಬ ಯಿಯ ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಸಭೆಯಲ್ಲಿ ಆಡಿದುದರ ಅರ್ಥ ವೇನು? ಹಾಗಲ್ಲದಿದ್ದರೆ, ಬ್ರಿಟಿಷ್ ಆಘಾತವನ್ನು ಜನತೆ ಪ್ರತಿಭಟಿಸ ಬೇಕೆಂದಿದ್ದರೆ, ಮುಂದಾಳುಗಳ ಕೈದು ಜನಸಾಮಾನ್ಯರ ಆಂದೋಲನದ ಪ್ರಾರಂಭದ ಕಹಳೆ ಎಂದಿದ್ದರೆ, ಈ ಹೋರಾಟವು ಅನಧಿಕೃತವೆಂದೂ ಕಾಂಗ್ರೆಸ್ಸಿಗೆ ಅಮಾನ್ಯವಾದುದೆಂದೂ ಬೊಬ್ಬೆಕುಟ್ಟುವುದರಲ್ಲಿ ಅರ್ಥವೇನಿದೆ? ನೀವು ಯುದ್ಧಕ್ಕೆ ಸನ್ನಧರಾಗಿ ಹೊರಡುವಾಗ ಶತ್ರುವು ನಿಮಗೆ ಎಲ್ಲ ಕೆಲಸಗಳನ್ನೂ ಸರಿಪಡಿಸಿಕೊಳ್ಳಲು ಕಾಲವನ್ನು ಕಲ್ಪಿಸಿಕೊಡಬೇಕೆಂದು ನಿರೀಕ್ಷಿಸುವುದು ತಿಳಿಗೇಡಿತನ. ಆದ್ದರಿಂದ ಆಗಸ್ಟ್ ೯ ರಲ್ಲಿ ಮೊದಲಾದ ರಾಷ್ಟ್ರೀಯ ಹೋರಾಟವು ಕಾಂಗ್ರೆಸ್ಸಿನ ಸಮ್ಮತಿಯುಕ್ತವಾದುದಲ್ಲವೆಂದು ಭಾವಿಸುವುದು ಹೇಡಿಗಳ ನಡತೆ ಎಂದು ನನ್ನ ಭಾವನೆ.

ಈ ಹೋರಾಟಕ್ಕೆ ಅಧಿಕಾರಕೊಟ್ಟದ್ದು ಗಾಂಧೀಜಿಯೋ ವರ್ಕಿಂಗ್ ಕಮಿಟಿಯೋ ಎಂಬುದನ್ನು ಯೋಚಿಸುವುದಾದರೆ ಆ ಮಾತು ಬೇರೆ. ಅದ ಕ್ಕಾಗಿ ನಾವು ನಡೆದ ಸಂಗತಿಗಳನ್ನು ನೋಡಬೇಕಾಗುವುದೇ ಹೊರತು ತತ್ವ ಗಳನ್ನಲ್ಲ. ನಡೆದ ಸಂಗತಿಗಳ ವಿಷಯದಲ್ಲಿ ಭಿನ್ನಾಭಿಪ್ರಾಯವಿಲ್ಲ. ವರ್ಕಿಂಗ್ ಕಮಿಟಿ ಹೋರಾಟದ ಯೋಜನೆಯನ್ನೇನೂ ಸಿದ್ಧಪಡಿಸಿರಲಿಲ್ಲ. ಮುಂದಾಳುತನವನ್ನು ವಹಿಸಿಕೊಳ್ಳಬೇಕೆಂದು ಗಾಂಧೀಜಿಯನ್ನು ಕೇಳಿ ಕೊಂಡಿತ್ತು ಮಾತ್ರ. ಗಾಂಧೀಜಿಗೂ ಕಾರ್ಯದ ನಿಶ್ಚಿತ ಸ್ವರೂಪವು ಸ್ಪಷ್ಟ ವಿರಲಿಲ್ಲ. ಅಖಿಲಭಾರತ ಕಾಂಗ್ರೆಸ್ ಸಮಿತಿಯಲ್ಲಿ ಮಾಡಿದ ಭಾಷಣದಲ್ಲಿ ಅವರು ಸಾಮಾನ್ಯ ರೂಪರೇಷೆಗಳನ್ನು ಮಾತ್ರ ವಿವರಿಸಿದ್ದರು. ಹೊರ ಗುಳಿದ ಕಾಂಗ್ರೆಸ್ ಕೆಲಸಗಾರರಿಗೆ ತಮ್ಮ ಕಾರ್ಯರಂಗವನ್ನು ನಿರ್ಮಿಸಿ ಕೊಳ್ಳಲು ಉಪಲಬ್ಧವಾದ ಸಲಹೆ ಸೂಚನೆಗಳೆಂದರೆ ಈ ವಿವರಗಳು, ಹರಿ ಜನದಲ್ಲಿ ಪ್ರಕಟವಾದ ಅವರ ಲೇಖನಗಳು. ಈ ಕೆಲಸಗಾರರು ಇವುಗಳ

ನೆರವಿನಿಂದಲೇ ಇದು ವರೆಗೆ ನಡೆದುಬಂದ 'ಕಟ್ಟಳೆಗೇಡಿ' ಕಾಂಗ್ರೆಸ್ ಸಂಘಟನೆಯನ್ನು ಸಿದ್ಧಪಡಿಸಿಕೊಂಡರು. ಆ ಕಾರ್ಯವೇ ಈಗಲೂ ರಾಷ್ಟ್ರೀಯ ಹೋರಾಟದ ಕಟ್ಟುನಿಟ್ಟಾಗಿದೆ. ಅದರಲ್ಲಿ ಕೊಲೆ ಹಿಂಸೆಗಳಿಗೆ ಆಸ್ಪದವಿಲ್ಲ. ಭಾರತದಲ್ಲಿ ಕೊಲೆಗಳು ನಡೆಯುತ್ತಿದ್ದರೆ ಅದೆಲ್ಲ ಬ್ರಿಟಿಷ್ ಪುಂಡರ ಹಾವಳಿ ಎಂದೇ ನನ್ನ ಭಾವನೆ. ಅಹಿಂಸೆಯಿಂದ ವಿಘ್ನವನ್ನೊಡುವುದೂ ಬ್ರಿಟಿಷ್ ಆಡಳಿತವನ್ನು ಹದಗೆಡಿಸುವುದೂ ಸಾಗದಂತೆ ಮಾಡುವುದೂ ಆ ಕಾರ್ಯರಂಗದ ತಳಹದಿಯಾಗಿತ್ತು. ಅದನ್ನು ಅಹಿಂಸೆಯ ಮೂಲಕವೇ ಮುಂದೆ ಸಾಗಿಸುವ ಉದ್ದೇಶವಿತ್ತು. ಈ ಕಾರ್ಯಕ್ರಮದ ಕೆಲವೊಂದು ಭಾಗವನ್ನು ಒಪ್ಪದಿರುವ ಕೆಲವು ಜನ ಅಹಿಂಸೆಯ ಸೋಗುಗಾರರೆಂಬುದು ನಿಜ. ಆದರೆ ಇಂತಹ ಕಾರ್ಯಕ್ರಮದ ವಿಭಾಗವನ್ನು ಮೊದಲಿಗೆ ಅವರೇ ಒಪ್ಪಿಕೊಂಡಿದ್ದರು. ಶ್ರೀ॥ ಕಿಶೋರಿಲಾಲ್ ಮಶ್ರುವಾಲಾರಂತಹರು ಕೂಡ ಇದರಲ್ಲಿ ಯಾವ ತಪ್ಪನ್ನೂ ಕಂಡಿಲ್ಲ; ಅದನ್ನು ಆಚರಿಸಬೇಡಿರೆಂದು ಜನರಿಗೆ ಹೇಳಲಿಲ್ಲ. ಆದುದರಿಂದ ೧೯೪೨ರ ಆಗಸ್ಟಿನಿಂದ ಜನತೆ ಹಿಡಿದ ಮಾರ್ಗವು ಆ ಕಾಲದ ಮುಂದಾಳುಗಳಿಗೆ ಸರಿಯಾಗಿ ತೋರಿದಂತಹ ಅಹಿಂಸಾ ತತ್ವವನ್ನೇ ಅನುಸರಿಸಿದೆ ಎಂಬುದರಲ್ಲಿ ಸಂದೇಹವೇನು? ಕಾರ್ಯಕ್ರಮವನ್ನು ಸಿದ್ಧಪಡಿಸಿದವರು ಅದರ ಹೊಣೆ ಹೊರಲು ಎಂದಿಗೂ ಹಿಂದೆ ಮುಂದೆ ನೋಡಿಲ್ಲ. ಮತ್ತು ಸಂದರ್ಭಬಂದರೆ ಅವರು ಕಾಂಗ್ರೆಸ್ಸಿನ ನ್ಯಾಯಸಭೆಯ ಮುಂದೆ ನಿಂತು ತಮ್ಮ ಕೃತ್ಯವನ್ನು ಸಮರ್ಥಿಸಿಕೊಂಡು, ಅತಿ ಸಂದುಕಟ್ಟಿನ ಸಮಯದಲ್ಲಿ ಕಾಂಗ್ರೆಸ್ಸಿನ ಭಾರಹೊತ್ತು ಕೆಲಸಮಾಡಿದ್ದಕ್ಕಾಗಿ ಅಭಿನಂದನೆಗಳನ್ನು ಪಡೆಯಲು ಸಿದ್ಧರಿದ್ದಾರೆ.

ಅದು ಹೇಗೂ ಇರಲಿ. ಆಗಸ್ಟ್ ಆಂದೋಲನವನ್ನು ಗಾಂಧೀಜಿಯವರಿಗೆ ಸಂಬಂಧಿಸುವುದು ಹೇಯವಾದುದು. ಬ್ರಿಟಿಷ್ ಆಡಳಿತಗಾರರು ಮಾತ್ರ ಹಾಗೆ ಮಾಡಲು ಇಚ್ಛಿಸಬಹುದು.

೩

ಕಳೆದ ಒಂದೆರಡು ತಿಂಗಳಿಂದ, ಈ ವಿವಾದಕ್ಕಿಂತಲೂ ಹೆಚ್ಚಿನ ಕುಚೇಷ್ಟೆಯ ಒಂದು ಸಂದರ್ಭಸೂಚನೆ ತೋರಿಬರುತ್ತಲಿದೆ. ಈ ಹೋರಾ

ಟದ ಆರಂಭದಿಂದಲೂ, ಮುಂಬೈಯಲ್ಲಿ ನಿರ್ಧರಿಸಿದ ಕಾರ್ಯಕ್ರಮಕ್ಕೆ ಅಸಮ್ಮತಿಪಟ್ಟು, ಹಿಂದುಸ್ಥಾನದ ಕೆಲವೊಂದು ಜನರ ಗುಂಪು ಈ ಬಿಕ್ಕಟ್ಟನ್ನು ಕೊನೆಗೊಳಿಸಲು ತನಗೆ ತೋರಿದ ರೀತಿಯಿಂದ ಪ್ರಯತ್ನಿಸತೊಡಗಿದೆ. ಕಾಂಗ್ರೆಸ್ಸು ಇಲ್ಲಿಯ ವರೆಗೆ ಅವರನ್ನು ಎಂದಿಗೂ ಲೆಕ್ಕಿಸಲಿಲ್ಲ; ಈಗಲೂ ಲೆಕ್ಕಿಸುವುದಿಲ್ಲ. ಭಾರತವು ಸ್ವಾತಂತ್ರ್ಯ ಸಮರವನ್ನು ಹೂಡಿದ ಪ್ರತಿಸಲವೂ ಈ ಜನರು 'ಒಪ್ಪಂದ'ಮಾಡಿಸುವ ಕೆಲಸದಲ್ಲಿ ತೊಡಗುತ್ತಾರೆ. ಯೋಧವೀರರಲ್ಲಿ ಸ್ಥಾನಪಡೆಯಬೇಕಾಗಿದ್ದ ಶ್ರೀ|| ರಾಜಗೋಪಾಲಾಚಾರಿ, ಶ್ರೀ|| ಭೂಲಾಭಾಯಿ ದೇಸಾಯಿ, ಶ್ರೀ|| ಕೆ. ಎಂ. ಮುನ್ಶಿ ಮುಂತಾದವರು ಈ ಹೋರಾಟದಲ್ಲಿ ಅಡ್ಡಿ ಆತಂಕಗಳನ್ನು ಒಡ್ಡುತಿದ್ದಾರೆ. ಇದರಿಂದ ವ್ಯತ್ಯಾಸವೇನೂ ಆಗುವಂತಿಲ್ಲ.

ಆದರೆ ಕಾಲವು ಕಳೆದಂತೆ,—ಯೋಧರು ಸೆರೆಮನೆಯಿಂದ ಬಿಡುಗಡೆಯಾಗಿ ಬಂದೊಡನೆ, ಅವರೊಳಗಿನ ಕೆಲವರು—ಬೇಸತ್ತು ನಿರುತ್ಸಾಹಿಗಳಾದಂತೆ ಕಾಣುತ್ತಾರೆ. ಈ ಬಿಕ್ಕಟ್ಟನ್ನು ಬಗೆಹರಿಸಬೇಕೆಂದು ಅವರೂ ಹಲಕೆಲವು ವಿಧಾನಗಳನ್ನು ಸೂಚಿಸುತ್ತಲಿದ್ದಾರೆ.

ಮೊಟ್ಟಮೊದಲಿನ ಮಾತೆಂದರೆ, ತಮ್ಮ ಮುಂದಾಳುಗಳು ಸಮರಾಂಗಣದ ಪುರೋಭಾಗದಲ್ಲಿ ಗುಂಡುಗಳನ್ನು ಎದುರಿಸುತ್ತಿರುವಾಗ ಇಂತಹ ಕಾಂಗ್ರೆಸ್ಸಿಗರು ಓಡಿಹೋಗುವ ಅನೀತಿಮಾರ್ಗವನ್ನು ಅನುಸರಿಸುವುದು ಅನ್ಯಾಯ. ನಮ್ಮ ನಿಜವಾದ ಓರಣವಿರುವುದು ನಮ್ಮ ಕೃತಿಯಲ್ಲಿ. ವಿವಾದಕಾಲದಲ್ಲಿ ಟೀಕಿಸುವುದೂ ಭಿನ್ನಾಭಿಪ್ರಾಯವನ್ನು ವ್ಯಕ್ತಪಡಿಸುವುದೂ ಪ್ರಜಾಪ್ರಭುತ್ವದ ಸಾಮಾನ್ಯ ಲಕ್ಷಣಗಳು. ಆದರೆ ಕಾರ್ಯವನ್ನು ಕೈಕೊಂಡ ಬಳಿಕ–ವಿಶೇಷತಃ ಹೋರಾಟ ನಡೆದಾಗ–ಓರಣವು ಸಂಪೂರ್ಣವಾಗಿ ಆವಶ್ಯಕವಾಗಿದೆ. ಈ ಓರಣವು, ಪ್ರತಿಯೊಬ್ಬ ಕಾಂಗ್ರೆಸ್ಸಿಗನೂ ಸಾಲಿನಲ್ಲಿ ನಿಂತು ಹೋರಾಡಬೇಕೆಂದೂ, ಓಡಿಹೋಗುವ ಇಲ್ಲವೆ ಶತ್ರುವಿಗೆ ಶರಣಾಗತನಾಗುವ ಯೋಚನೆಗೆ ಇಂಬುಗೊಡಬಾರದೆಂದೂ ಅಪೇಕ್ಷಿಸುತ್ತದೆ. ಸೇನಾಪತಿಗಳು ಮಾತ್ರ ಯೋಚಿಸಬಹುದಾದ ಮಾತುಗಳಿವು. ಮಹಾತ್ಮಾಜಿಯವರೂ ಮೌಲಾನಾ ಅಜಾದರೂ ಇನ್ನೂ ಸೆರೆಯಲ್ಲಿದ್ದಾರೆ. ಶಾಂತಿ ಇಲ್ಲವೆ ಹೋರಾಟವನ್ನು ಯೋಚಿಸುವ ಹೊಣೆ ಅವರದು.

ಗಾಂಧೀಜಿ ತಮಗೆ ಬೇಕಾದಾಗ ಶರಣಾಗತರಾಗಿ 'ಬಿಕ್ಕಟನ್ನು ಕೊನೆಗೊಳಿಸ ಬಹುದು.' ಆದರೆ ಅವರು ಇನ್ನೂ ಹಾಗೆ ಮಾಡಿಲ್ಲ. ಆದ್ದರಿಂದ ಯುದ್ಧವು ಇನ್ನೂ ಸಾಗಬೇಕೆಂದು—ಅಥವಾ ಬಿಕ್ಕಟ್ಟು ಹಾಗೆಯೇ ಉಳಿಯಬೇಕೆಂದು —ಅವರು ಬಯಸುತ್ತಾರೆ ಎಂದು ಅರ್ಥವಾಗುತ್ತದೆ.

ಎರಡನೆಯ ಮಾತು—ನಾವು 'ಬಿಕ್ಕಟ್ಟು' ಎಂದು ಹೇಳುವ ಈ ಪ್ರಶ್ನೆಯನ್ನು ಕೊಂಚ ಆಳವಾಗಿ ವಿವೇಚಿಸೋಣ. ಈ ಬಿಕ್ಕಟ್ಟು ಕೊನೆ ಗೊಂಡರೆ ಎಲ್ಲವೂ ಮುಗಿಯಿತೆಂದು ಹೇಳಲಾಗುವುದಿಲ್ಲ. ಅದರಿಂದ ರಾಷ್ಟ್ರದ ಪುರೋಭಿವೃದ್ಧಿಯಾಗಬೇಕು. ಅದು ನಮ್ಮನ್ನು ನಮ್ಮ ಧ್ಯೇಯ ದೆಡೆಗೆ ಒಂದು ಹೆಜ್ಜೆಯನ್ನಾದರೂ ಮುಂದೆ ಒಯ್ಯಬೇಕು.

ಇದನ್ನು ಗಮನದಲ್ಲಿಟ್ಟುಕೊಂಡರೆ ಮಾತ್ರ ಈ ಬಿಕ್ಕಟ್ಟನ್ನು ಕೊನೆ ಗಾಣಿಸುವ ಮಾರ್ಗವನ್ನು ನಾವು ಪರಿಶೀಲಿಸಬೇಕು. ಈ ಪ್ರಶ್ನೆಯನ್ನು ಮೂರು ವಿಧವಾಗಿ ಬಿಡಿಸಬಹುದು. ನಮ್ಮ ಬೇಡಿಕೆಯನ್ನು ಮನ್ನಿಸಲು ಬ್ರಿಟಿಷ್ ಸರಕಾರವನ್ನು ಒತ್ತಾಯಪಡಿಸುವುದು ; ನಾವು ಶರಣುಹೋಗು ವುದು ; ಇಲ್ಲವೆ ಒಪ್ಪಂದಮಾಡಿಕೊಳ್ಳುವುದು. ಇವುಗಳಲ್ಲಿ ಮೊದಲನೆಯ ದೆಂದರೆ ಭಾರತಕ್ಕೆ ಸಂಪೂರ್ಣ ಜಯದೊರೆತಂತೆ ; ಮತ್ತು ಯೋಗ್ಯರೀತಿಯ ಹೋರಾಟದಿಂದ ಮಾತ್ರ ಇದನ್ನು ದೊರಕಿಸುವುದು ಸಾಧ್ಯ. ಜಯದ ಬಗೆಗೆ ನಿರಾಶರಾದವರಿಗೆ—ಕಾಲಹರಣದಿಂದ ಬೇಸತ್ತವರಿಗೆ, ಬ್ರಿಟಿಷ್ ಪಾರ್ಲಿಮೆಂಟಿನ ಕಪಟ ನಾಟಕಕ್ಕೆ ಮರುಳಾದವರಿಗೆ, ಶರಣುಹೋಗುವು ದೊಂದೇ ಮಾರ್ಗ ಆದರೆ ಇದರಿಂದ ಅವರು ಕಾಂಗ್ರೆಸ್ಸನ್ನು ಸಮೂಲ ನಾಶಗೊಳಿಸಿ ಪ್ರತಿರೋಧದ ಶಕ್ತಿಯನ್ನು ಒಂದು ಪೀಳಿಗೆಯ ವರೆಗಾದರೂ ಕುಗ್ಗಿಸಿಬಿಡುವರು. ಹಾಗಾದರೆ ಬ್ರಿಟನ್ನಿಗೆ ಸಂಪೂರ್ಣ ಜಯದೊರೆತಂತೆ.

ಇನ್ನು ಒಪ್ಪಂದದ ವಿಚಾರವೊಂದು ಉಳಿಯಿತು. ಅದರ ಮೋಹಕ್ಕೆ ಮಹಾಮಹಾನ' ವ್ಯಕ್ತಿಗಳೂ ಬಲಿಬೀಳುತ್ತಾರೆ. ಒಪ್ಪಂದವೆಂದರೆ ಎರಡೂ ಪಕ್ಷಗಳು ಕೆಲವೊಂದು ಹಕ್ಕುಗಳನ್ನು ಬಿಟ್ಟುಕೊಡುವುದು. ಅದರಿಂದ ಕಾಂಗ್ರೆಸ್ಸಿಗಾಗಬಹುದಾದ ಲಾಭಗಳೆಂದರೆ ಹೋರಾಟದಲ್ಲಿ ಸೆರೆಯಾದವರ ಬಿಡುಗಡೆ, ಕಾಂಗ್ರೆಸ್ಸು ಮತ್ತು ಅದಕ್ಕೆ ಸಂಬಂಧಿಸಿದ ಸಂಸ್ಥೆಗಳು ಕಾಯಿದೆಬದ್ಧ ಸಂಸ್ಥೆಗಳೆಂದು ಸಾರುವುದು. ಬ್ರಿಟನ್ನಿಗೆ ಆಗುವ ಲಾಭ

ವೆಂದರೆ ಕಾಂಗ್ರೆಸ್ಸಿನ ಈ ಹೋರಾಟದ ಮೂಲಕ ಹಿಂದುಸ್ಥಾನದಲ್ಲಿರುವ ಬ್ರಿಟಿಷ್ ಸರಕಾರಕ್ಕೆ ಆಗುತ್ತಿರುವ ಅಪಾರ ತೊಂದರೆಯ ಪರಿಹಾರ. ಇಂತಹ ಒಡಂಬಡಿಕೆಯಿಂದ ಬ್ರಿಟನ್ನಿಗೆ ಚೊಕ್ಕ ಲಾಭವೂ ಕಾಂಗ್ರೆಸ್ಸಿಗೆ ಬರಿಯ ಹಾನಿಯೂ ಸಂಭವಿಸುವುದೆಂದು ನನ್ನ ಅಭಿಪ್ರಾಯ.

ಇಂತಹ ಒಪ್ಪಂದದ ಆಗುಹೋಗುಗಳನ್ನು ಚೆನ್ನಾಗಿ ಪರಿಶೀಲಿಸೋಣ. ಈಗಿನ ಯುದ್ಧದಲ್ಲಿ ಕಾಂಗ್ರೆಸ್ಸಿನ ಸ್ಥಾನಮಾನವೇನು? ಕಳೆದ ಆಗಸ್ಟಿನಿಂದ ಇಲ್ಲಿಯ ವರೆಗೆ, ಈಗಿನ ಯುದ್ಧದ ವಿಷಯದಲ್ಲಿ ಕಾಂಗ್ರೆಸ್ಸು ತನ್ನ ಅಭಿಪ್ರಾಯವನ್ನು ಬದಲಿಸುವ ಅಥವಾ ಯುದ್ಧದಲ್ಲಿ ಪಾಲುಗೊಳ್ಳುವ ಪರಿಸ್ಥಿತಿಯೇನೂ ಒದಗಲಿಲ್ಲ. ಈ ಯುದ್ಧದಲ್ಲಿ ಹಿಂದೀಯರ ಪರವಾಗಿ, ಭಾರತದ ಹಿತಕ್ಕಾಗಿ ಹೋರಾಡುವಂಥ ಸಂದರ್ಭವು ಕಾಂಗ್ರೆಸ್ಸಿಗೆ ಒದಗುವಂತಿಲ್ಲ. ಅಲ್ಲದೆ ಜನತೆಯ ತಲೆಯ ಮೇಲೆ ಅಪಾರವಾದ ಕಷ್ಟನಷ್ಟಗಳನ್ನು ಹೇರುತ್ತಿರುವ ಈ ಪುಂಡ ಸರಕಾರದ ಈಗಿನ ಯುದ್ಧದಲ್ಲಿ ನೆರವಾಗುವುದು ಯಾವ ಸ್ವಾಭಿಮಾನಿಗೂ ಶೋಭಿಸದ ಮಾತು. ನಮ್ಮ ದೇಶದ ತರುಣರನ್ನು ಸೆರೆಮನೆಯಲ್ಲಿ ಜೀವಂತ ಕೊಲ್ಲುತ್ತಿರುವ, ಕೊಲೆ ಸುಲಿಗೆ ಮಾನಹಾನಿಯನ್ನು ಮಾಡುತ್ತಿರುವ ಈ ಸರಕಾರದೊಡನೆ ಕಾಂಗ್ರೆಸ್ಸಿಗರು ಎಂತು ಸಹಕರಿಸುವರು ಎಂಬುದು ನನಗೆ ತೋರುವುದಿಲ್ಲ. ಈ ಕಾರಣದಿಂದಲೂ, ಮತ್ತು ನಿಜವಾದ ಅಧಿಕಾರವಿಲ್ಲದ ಅಧಿಕಾರವನ್ನು ಸ್ವೀಕರಿಸುವುದು ಕಾಂಗ್ರೆಸ್ಸಿಗೆ ಬೇಡವಾಗಿರುವುದರಿಂದಲೂ, ಕಾಂಗ್ರೆಸ್ಸು ೧೯೩೫ ರ ಘಟನೆಯನ್ನು ಸ್ವೀಕರಿಸಲಾರದು. ಈ ಘಟನೆಯನ್ನು ಸದೆಬಡೆಯುವ ಉದ್ದೇಶದಿಂದ ಕಾಂಗ್ರೆಸ್ಸು ಒಮ್ಮೆ ಈ ಘಟನೆಯಂತೆ ಅಧಿಕಾರವನ್ನು ಸ್ವೀಕರಿಸಿತು. ಆದರೆ ಇದರಿಂದ ಕಾಂಗ್ರೆಸ್ಸು ತನ್ನ ಕಾಲಮೇಲೆ ತಾನೇ ಕಲ್ಲು ಹಾಕಿಕೊಂಡಿತು. ಜನತೆಗೆ ಅಧಿಕಾರ ಕೊಡುತ್ತೇವೆಂದು ನಟಿಸುವ ಬ್ರಿಟಿಷರ ಆ ಮಾಟವೂ ಯುದ್ಧದ ಮೂಲಕ ಮಾಯವಾಗಿದೆ. ಮತ್ತು ಮೌಲ್ವಿ ಫಜಲುಲ್ ಹಕ್ಕರು ಬಂಗಾಲ್ ಶಾಯಿದೆ ಮಂಡಲದಲ್ಲಿ ಹೇಳಿದಂತೆ 'ಬ್ರಿಟಿಷ್ ಅಧಿಕಾರಿಗಳ ಆಡಳಿತವನ್ನು ಮುಚ್ಚುಮರೆಮಾಡುವ ಅಂಥ ಯಾವ ಉಪಾಯವೂ ಈಗ ಉಳಿಯಲಿಲ್ಲ.' (ಹೀಗಿದ್ದರೂ ಇಂತಹ ಮಹನೀಯರು ಇಂಥ ಪೊಳ್ಳು ಅಧಿಕಾರವನ್ನು ಸ್ವೀಕರಿಸಿ ಯಾಕೆ ಕಷ

ಹಡುತ್ತಾರೋ ನಾನರಿಯೆ ಇಂತಹ ರೀತಿಯ ಅಧಿಕಾರಸ್ವೀಕಾರಕ್ಕಿಂತ ಈ ನಮ್ಮ ಜನರು ಈ ಕಾಯಿದೆ ಮಂದಿರಗಳಿಂದ ಸಂಪೂರ್ಣವಾಗಿ ಹೊರ ಬಿದ್ದು ಇಂಥ ಸರಕಾರವನ್ನು ಬುಡಮೇಲುಮಾಡುವ ಒಂದೇ ಒಂದು ಯೋಗ್ಯವಾದ ಮಾರ್ಗವನ್ನನುಸರಿಸಬೇಕು.) ಕಾಂಗ್ರೆಸ್ಸು ಇಂತಹ ಪೊಳ್ಳು ಪ್ರಾಂತೀಯ ಸರಕಾರದ ಹೊಣೆಹೊರಲು ಸಿದ್ಧವಾದರೆ ರಾಜಕೀಯದ ಮಾಟ ಗಾರಿಕೆಗೆ ಬಲಿಬಿದ್ದಂತೆಯೇ ಸರಿ. ಗ್ಲಾಸ್ಗೋ ಹರ ಘಟನೆ ಮೃತವಾಗಿದೆ. ಅದನ್ನು ಮತ್ತೆ ಸ್ವೀಕರಿಸುವುದು ಆಗದ ಮಾತು ಎಂಬುದನ್ನು ನಾವು ಚೆನ್ನಾಗಿ ಗಮನಿಸಬೇಕು. ಸಹಿಸಲಸಾಧ್ಯವಾದ ಅವಮಾನಕ್ಕೂ ಹಾನಿಗೂ ನಮ್ಮನ್ನು ಗುರಿಮಾಡಿದವರೊಡನೆ ಭಾರತವು ಸುಖವಾಗಿರುವುದು ಅಸಂಭವ ನೀಯ.

ಇಂತಹ ಒಪ್ಪಂದದಿಂದ ಕಾಂಗ್ರೆಸ್ಸಿಗೆ ಅಪಾರ ಹಾನಿಯಾಗುವುದು. ಕಾಂಗ್ರೆಸ್ಸು 'ಸ್ವಾತಂತ್ರ್ಯ'ವನ್ನು ಪಡೆಯಬಹುದು. ಆದರೆ ಸಾಮ್ರಾಜ್ಯ ಲಾಲಸೆಯ ಈ ಯುದ್ಧವನ್ನು ಖಂಡಿತವಾಗಿ ವಿರೋಧಿಸುವುದು. ಈ ಯುದ್ಧವನ್ನು ಬ್ರಿಟಿಷ್ ಬಂಡವಲುಗಾರರ ಹಿತಕ್ಕಾಗಿ ನಡೆಸುವ ವರೆಗೆ ಇದನ್ನು ಕಾಂಗ್ರೆಸ್ಸು ವಿರೋಧಿಸಿಯೇ ಬಿಡುವುದು. ಇಲ್ಲವಾದರೆ ಕಾಂಗ್ರೆಸ್ಸು ಈಗ ದಿನದಿನವೂ ಬಳಕೆಗೆ ಬರುತ್ತಿರುವ ಆರ್ಡಿನನ್ಸುಗಳನ್ನು ಎತ್ತಿಹಿಡಿಯ ಬೇಕಾದೀತು. ಇದರಿಂದ ಜನತೆಯ ಕಷ್ಟಪರಿಹಾರವನ್ನು ಮಾಡುವು ದಾಗಲಿ ಹಸಿದ ಹೊಟ್ಟೆಗೆ ಅನ್ನವನ್ನು ಬತ್ತಲೆ ಮೈಗೆ ಬಟ್ಟೆಯನ್ನು ಒದಗಿಸು ವುದಾಗಲಿ ಕಾಂಗ್ರೆಸ್ಸಿಗೆ ಸಾಧ್ಯವಾಗಲಿಕ್ಕಿಲ್ಲ. ಕಾಂಗ್ರೆಸ್ಸು ನಿಜವಾಗಿ ತನ್ನ ತತ್ವಗಳಿಗೆ ಅಂಟಿಕೊಳ್ಳುವುದಾದರೆ ಈ ಸ್ವಾತಂತ್ರ್ಯಾಪಹಾರಕರನ್ನು ಹೆಜ್ಜೆ ಹೆಜ್ಜೆಗೆ ವಿರೋಧಿಸದೆ ಗತ್ಯಂತರವಿಲ್ಲ. ಇದೆಲ್ಲವನ್ನೂ ಗಮನಿಸದೆ ಬರಿಯ ಮಾತಿನಿಂದ, ತೋರಿಕೆಗೆ, ಕೊನೆಗೊಳಿಸಿದ ಬಿಕ್ಕಟ್ಟು ವ್ಯರ್ಥವಾದೀತು.

ಕಾಂಗ್ರೆಸ್ಸಿಗೆ ಆಗಬಹುದಾದ ಮತ್ತೊಂದು ದೊಡ್ಡ ಹಾನಿ ಇದೆ. ಮಹಾತ್ಮಾಜಿ, ಅಧ್ಯಕ್ಷ ಅಜಾದ್, ಪಂಡಿತ ನೆಹರು ಮೊದಲಾದವರು ಸೆರೆ ಮನೆಯಿಂದ ಹೊರಗೆ ಬಂದೊಡನೆ ಜಗತ್ತು ಹಿಂದುಸ್ಥಾನವನ್ನು ಮರೆತು ಬಿಡುವುದು. ಜಗತ್ತಿನ ಸೂತ್ರಧಾರರ ಮೇಲೆ ಬಿದ್ದ ಈ ಬಿಕ್ಕಟ್ಟಿನ ಭಾರವು ಕೂಡಲೇ ಇಲ್ಲದಂತಾಗಿ—ಚರ್ಚಿಲ್ಲರು, ಅಮೇರಿಗಳು ಸುಖವಾಗಿ, ಶಾಂತ

ವಾಗಿ ನಿದ್ರಿಸಬಹುದು ; ಹುಚ್ಚ ಗಾಂಧಿಯು ತನ್ನ ಕುರಿ ಹಿಂಡನ್ನು ಮರಳಿ ಕಾರಾಗೃಹದಲ್ಲಿ ದೂಡುವ ವರೆಗೆ ಭಾರತದ ಪ್ರಶ್ನೆ ನಿಶ್ಚಯವಾಗಿಯೂ—ತಾತ್ಪೂರ್ತಿಕವಾಗಿ— ಕೊನೆಗಂಡಿತೆಂದು ತಿಳಿಯಬಹುದು. ಅಮೇರಿಕ ಸುದ್ದಿಗಾರರು ಬಾಯಿಚಪ್ಪರಿಸುವಂತಹ ಹೇಳಿಕೆಯನ್ನು ಸೆರೆಮನೆಯಿಂದ ಹೊರಗೆ ಬಂದ ನೆಹರುರವರು ಕೊಡಬಹುದು. ಇಂತಹ ಹೇಳಿಕೆಗಳಲ್ಲಿ ಬರಿಯ ಶಬ್ದಗಳ ವೈಚಿತ್ರ್ಯ ಆಡಂಬರಗಳೇ ಕಾಣಬಹುದಲ್ಲದೆ ನಿಜವಾದ ಶಕ್ತಿ ಇರುವುದಿಲ್ಲ ಪರರಾಷ್ಟ್ರೀಯ ರಾಯಭಾರಿಗಳ ಮುಂದೆ ಉದಾತ್ತವಾದ ಶಬ್ದಗಳ ಹೇಳಿಕೆಯನ್ನೀಯುವ ನೆಹರೂರವರಿಗಿಂತ ಸೆರೆಮನೆಯಲ್ಲಿರುವ ನೆಹರೂರವರು ಚರ್ಚಿಲ್ಲರಿಗೂ ರೂಸ್‌ವೆಲ್ಟರಿಗೂ ಬಹುದೊಡ್ಡ ಸಮಸ್ಯೆಯಾಗಿ ತೋರಬಹುದು.

ಆದರೆ ಒಪ್ಪಂದದೊಳಗಿನ ರಾಜಕೀಯ ಕರಾರುಗಳು ಕಾಂಗ್ರೆಸ್ಸಿಗೆ ಇವಕ್ಕೂ ಹೆಚ್ಚು ಹಿತಕಾರಿಯಾಗಬಹುದೆಂದು ವಾದಿಸಬಹುದು. ಇಂತಹ ಕರಾರುಗಳು ಯಾವುವು ಎಂಬುದನ್ನು ಪರಿಶೀಲಿಸೋಣ. ಕ್ರಿಪ್ಸ್ ಕೊಡುಗೆಗಿಂತ ಹೆಚ್ಚಿನದೇನನ್ನೂ ಕೊಡಲು ಬ್ರಿಟನ್ನು ಒಪ್ಪಿಕೊಂಡಿಲ್ಲ—ಕ್ರಿಪ್ಸ್ ಕೊಡುಗೆ ಎಂದರೆ ಯುದ್ಧಕಾಲದಲ್ಲಿ ಯಾವ ಅಧಿಕಾರವನ್ನೂ ಕೊಡುವಂತಿಲ್ಲ, ಮತ್ತು ಯುದ್ಧಾನಂತರ ಅಧಿಕಾರಕೊಡಲಾಗುವುದೆಂಬ ಮೋಸದ ವಚನ.

ಕಾಂಗ್ರೆಸ್ಸು ಬ್ರಿಟಿಷರ ಇಂತಹ ಕೊಡುಗೆಯನ್ನು ನಿರಾಕರಿಸಿದ್ದು ಯೋಗ್ಯವೇ ಸರಿ. ಈಗ ಕಾಂಗ್ರೆಸ್ಸು ಮರಳಿ ಅದನ್ನೇ ಸ್ವೀಕರಿಸಬೇಕೆಂದು ಯಾವ ಬುದ್ಧಿವಂತನೂ ಅಭಿಪ್ರಾಯಪಡಲಾರ. ೧೯೪೨ರ ಏಪ್ರಿಲಿನಲ್ಲಿ ಕಾಂಗ್ರೆಸ್ಸಿನ ತೀರ ಸೌಮ್ಯತರದ ಬೇಡಿಕೆಗಳು—ಇಂಥ ಬೇಡಿಕೆಗಳಿಗೆ ನಾನೆಂದೂ ಸಮ್ಮತಿಸಲಾರೆ ; ಮತ್ತು ಕಾಂಗ್ರೆಸ್ ಕಾರ್ಯಕಾರಿ ಸಮಿತಿಯು ಕೂಡ ಎಷ್ಟರಮಟ್ಟಿಗೆ ಅವುಗಳನ್ನು ಮಾನ್ಯಮಾಡಬಹುದೆಂಬುದೂ ಸಂದೇಹ—ಮಧ್ಯಸ್ಥರ ಮೂಲಕ ಮುಂದೆಬಂದುವು. ಆದರೆ ಬ್ರಿಟಿಷ್ ಸರಕಾರ ಅವುಗಳನ್ನು ನಿರಾಕರಿಸಿತು. ಕಾಂಗ್ರೆಸ್ಸು ಇಂಥ ಬೇಡಿಕೆಗಳನ್ನು ಒಪ್ಪಬಹುದೆಂದು ಭಾವಿಸಿದರೂ, ಬಿಕ್ಕಟ್ಟನ್ನು ಕೊನೆಗೊಳಿಸಬೇಕೆಂಬ ಮಧ್ಯಸ್ಥರು ಅವುಗಳನ್ನು ಬ್ರಿಟಿಷ್ ಸರಕಾರದ ಮೇಲೆ ಹೇರುವುದೆಂತು ? ಹೋರಾಟದ ಹೊರತು ಬೇರೆ ಮಾರ್ಗವೇನಿದೆ ? ಆದುದರಿಂದ ನಾವು ಮರಳಿ ಬಿಕ್ಕಟ್ಟಿಗೇ ಬಂದಂತಾಯಿತು.

ಅಂತೂ ಬಿಕ್ಕಟ್ಟನ್ನು ಬಿಡಿಸುವುದು ಸಾಧ್ಯವಿಲ್ಲ. ಕಾಂಗ್ರೆಸ್ಸಿನ ಕರಾರುಗಳಿಂದಲ್ಲದೆ ಅದನ್ನು ಬೇರೆ ವಿಧವಾಗಿ ಕೊನೆಗೊಳಿಸುವುದು ದೇಶಕ್ಕೆ ಹಾನಿಕರ. ಹೀಗೆಂದ ಮಾತ್ರಕ್ಕೆ ನಾವು ಸ್ಥಗಿತರಾಗಿದ್ದೇವೆಂದು ಅರ್ಥವಲ್ಲ. ನಾವು ಹೋರಾಟವನ್ನು ಮುಂದುವರಿಸುವೆವು; ಪ್ರತಿಕ್ರಿಯೆಯನ್ನು ವ್ಯಕ್ತಗೊಳಿಸುತ್ತಲೇ ಇರುವೆವು. ರಾಷ್ಟ್ರೀಯ, ಅಂತರ್‌ರಾಷ್ಟ್ರೀಯ ಪರಿಸ್ಥಿತಿಯಲ್ಲಿ ಆಗುವ ಬದಲಾವಣೆಗಳನ್ನು ನಮ್ಮ ಮುನ್ನಡೆಗಾಗಿ ಉಪಯೋಗಿಸಿಕೊಳ್ಳುವೆವು ಬ್ರಿಟಿಷ್ ಆಡಳಿತವನ್ನು ವಿರೋಧಿಸುವುದೂ, ಅದಕ್ಕಾಗಿ ನಮ್ಮ ವೀರ ಮುಂದಾಳುಗಳು ಸೆರಮನೆಯನ್ನು ಸೇರುವುದೂ ಹಿಂದುಸ್ಥಾನದ ಶಕ್ತಿ ಇನ್ನೂ ಕುಗ್ಗಿಲ್ಲವೆಂಬುದನ್ನು ತೋರಿಸುತ್ತದೆ; ಭಾರತದ ನಿರೋಧನ ಶಕ್ತಿ ಇನ್ನೂ ಅಳಿದಿಲ್ಲವೆಂಬುದನ್ನೂ, ಹಿಂದುಸ್ಥಾನದ ಪ್ರಶ್ನೆ ಜಗತ್ತಿನ ದೊಡ್ಡ ಸಮಸ್ಯೆಯೆಂಬುದನ್ನೂ, ಏಸಿಯದ, ಆಫ್ರಿಕದ ಪರತಂತ್ರ ರಾಷ್ಟ್ರಗಳು ಭಾರತದ ಹೋರಾಟದಿಂದ ಸ್ಫೂರ್ತಿಗೊಳ್ಳುತ್ತಿವೆಯೆಂಬುದನ್ನೂ, ಬ್ರಿಟನ್ನಿನ ಮತ್ತು ಇನ್ನಿತರ ರಾಷ್ಟ್ರಗಳ ಕೂಲಿಕಾರರಿಗೆ ತಾವು ಹೋರಾಡುತ್ತಿರುವ 'ಪ್ರಜಾಪ್ರಭುತ್ವ' ಎಂಥದು ಎಂಬುದನ್ನು ತೋರಿಸಿಕೊಟ್ಟಂತಾಗುವುದೆಂಬುದನ್ನೂ, ಯುದ್ಧಾನಂತರದ ಹೊಸ ಜಗತ್ತಿನ ನಿರ್ಮಾಣ ಸಮೀಪಿಸುತ್ತಿದೆಯೆಂಬುದನ್ನೂ, ಭಾರತವು ಜಗತ್ತಿನ ಜನಸಾಮಾನ್ಯರ ಮುಂದಾಳುತನವನ್ನು ಪಡೆದಿದೆಯೆಂಬುದನ್ನೂ, ಜಗತ್ತಿಗೆ ಮಿತ್ರರ ಅಥವಾ ಅಚ್ಚಿನ ರಾಷ್ಟ್ರಗಳ ಗೆಲುವುಗಳಿಂದ ಸುಖಸ್ವಾತಂತ್ರ್ಯಗಳು ದೊರೆಯಲಾರವು ಎಂಬುದನ್ನೂ ತೋರಿಸುತ್ತದೆ. ಆದುದರಿಂದ ಯುದ್ಧವು ಮುಗಿಯುವ ವರೆಗೆ ಬಿಕ್ಕಟ್ಟು ಉಳಿದರೂ ನನಗೆ ಸಂತೋಷ. ಈ ಯುದ್ಧ ಎಷ್ಟು ಕಾಲ ನಡೆಯಬಹುದು, ಯಾವ ಸ್ವರೂಪವನ್ನು ತಾಳಬಹುದು, ಯಾವ ಶಕ್ತಿಗಳನ್ನು ನಿರ್ಮಿಸಬಹುದು ಎಂಬುದನ್ನು ಯಾರೂ ಹೇಳಲಾರರು. ಯುದ್ಧವು ಹೆಚ್ಚು ಕಾಲ ನಡೆದಂತೆ ಹಿಂದುಸ್ಥಾನದಲ್ಲಿ ಮಾತ್ರವಲ್ಲ, ಎಲ್ಲ ದೇಶಗಳಲ್ಲಿಯೂ ಆಂತರಿಕ ಸ್ಥಿತಿ ಹದಗೆಡುವುದು. ಯುದ್ಧದ ಪರಿಸ್ಥಿತಿ ಒಮ್ಮಿಂದೊಮ್ಮೆ ಬದಲಾಗಿ, ಹೊಸ ಸಾಮಾಜಿಕ ಶಕ್ತಿಯು ಉದ್ಭೂತವಾಗಿ, ಭಾರತದ 'ಬಿಕ್ಕಟ್ಟು' ಭಾರತದ ಪ್ರಗತಿಗೆ ಸಹಾಯಕಾರಿಯಾಗಬಹುದು. ಇಲ್ಲವೇ ನಾವು ಬಿಕ್ಕಟ್ಟನ್ನು ಹೇಗಾದರೂ ಕೊನೆಗೊಳಿಸಿ ಮೊದಲಿನ ಸ್ಥಿತಿಗೆ ಬರಲು ಹವಣಿಸಿದರೆ

ಅದರಿಂದ ಅಪಾರ ಹಾನಿಯೂ ಸಂಭವಿಸಬಹುದು. ಈ ಬಿಕ್ಕಟ್ಟು ನಮ್ಮ ಗೆಲುವಿಗೆ ಕಾರಣವಾಗುವುದೆಂಬುದರಲ್ಲಿ ಸಂದೇಹವಿಲ್ಲ.

ಭಾರತದಲ್ಲಿ 'ಬಿಕ್ಕಟ್ಟು' ಉಂಟಾಗಬೇಕೆಂಬುದನ್ನು ಬ್ರಿಟಿಷರೂ ಬಯಸುವುದರಿಂದ ಈ ಬಿಕ್ಕಟ್ಟನ್ನು ಹಾಗೆಯೇ ಉಳಿಸಿದರೆ ನಾವು ಬ್ರಿಟಿಷರ ಕೈಗೊಂಬೆಗಳಾಗಬಹುದೆಂದು ವಾದಿಸಬಹುದು. ಇದು ಬ್ರಿಟಿಷ್ ಧೋರಣದ ಬಗೆಗಿದ್ದ ನಮ್ಮ ಅಜ್ಞಾನವೇ ಸರಿ. ಬ್ರಿಟನ್ನು ಭಾರತದಲ್ಲಿ ರಾಜಕೀಯ ಬಿಕ್ಕಟ್ಟನ್ನು ಬಯಸುತ್ತಿಲ್ಲ. ಮಾತ್ರವಲ್ಲ, ಅದು ಈ ರಾಜಕೀಯ ಹೋರಾಟವನ್ನು ನಿರ್ನಾಮಮಾಡಲು ಬಯಸುತ್ತಿದೆ. ಕಾಂಗ್ರೆಸ್ಸಿನ ಶಕ್ತಿಯನ್ನು ಕುಗ್ಗಿಸಿ, ಅದರ ಗಂಭೀರಧ್ವನಿಯನ್ನು ಅಡಗಿಸಿ, ಜನರ ವಿರೋಧನ ಶಕ್ತಿಯನ್ನೂ ಸ್ವಾತಂತ್ರ್ಯದ ಹುಮ್ಮಸ್ಸನ್ನೂ ತಗ್ಗಿಸಬೇಕಾಗಿದೆ ಬ್ರಿಟನ್ನಿಗೆ. ಕಾಂಗ್ರೆಸ್ಸಿನ ಬಲವನ್ನು ಬೆಳೆಸುವಂತಹ, ಪ್ರತಿಕ್ರಿಯೆಯ ಶಕ್ತಿಯನ್ನು ಹೆಚ್ಚಿಸುವಂತಹ, ಸ್ವಾತಂತ್ರ್ಯಕ್ಕಾಗಿ ಹೋರಾಡುವ ಶಕ್ತಿಯನ್ನು ಸ್ಥಿರಗೊಳಿಸುವಂತಹ ಬಿಕ್ಕಟ್ಟನ್ನು ಕೊನೆಗೊಳಿಸಿ ಪ್ರಯೋಜನವಿಲ್ಲ. ಈ ಬಿಕ್ಕಟ್ಟಿನಿಂದ ದಿನದಿನಕ್ಕೆ ಬ್ರಿಟಿಷರ ಘನತೆಯೂ ಅಧಿಕಾರವೂ ಕಡಿಮೆಯಾಗುತ್ತಲಿವೆ. ಅವರ ವಿರೋಧಿಗಳ ಶಕ್ತಿ ಹೆಚ್ಚುತ್ತಲಿದೆ. ಇಂಥ ಬಿಕ್ಕಟ್ಟು ಬ್ರಿಟನ್ನಿನ ಉದ್ದೇಶವನ್ನು ವಿಫಲಗೊಳಿಸುವುದಲ್ಲದೆ, ತನ್ನ ಜಯ ಸಂಪಾದನೆಗಾಗಿ ಬ್ರಿಟನ್ನು ಉಪಯೋಗಿಸುವ ಶಸ್ತ್ರಗಳು ಅದಕ್ಕೆ ಪರಾಭವವನ್ನು ತಂದೊಡ್ಡುವವು.

೪

ರಾಷ್ಟ್ರೀಯ ಸರಕಾರದ ಪ್ರಶ್ನೆಯೂ ಕಾಂಗ್ರೆಸ್ ಲೀಗುಗಳ ನಡುವೆ ಒಪ್ಪಂದವೂ ಮೇಲೆ ಚರ್ಚಿಸಿದ ವಿಷಯದೊಡನೆ ನಿಕಟವಾಗಿ ಸಂಬಂಧಿಸಿವೆ. ರಾಷ್ಟ್ರೀಯ ಸರಕಾರವು ನಿಜವಾಗಿ ಬೇಕಾಗಿದೆ. ಕಾಂಗ್ರೆಸ್ಸು ಇಂಥ ಸರಕಾರಕ್ಕಾಗಿ ಹೋರಾಡುತ್ತಿದೆ, ಕಷ್ಟಪಡುತ್ತಿದೆ. ಆದರೆ ಉಳಿದವರು ಬರಿಯ ಮಾತನಾಡುತ್ತಾರೆ. ರಾಷ್ಟ್ರೀಯ ಸರಕಾರವೆಂದರೆ ೧೯೩೫ ರ ಕಟ್ಟಳೆಯ ಮೇರೆಗಿನ ಬರಿಯ ಸಮ್ಮಿಶ್ರ ಸರಕಾರವಲ್ಲೆಂಬುದೂ ಅಥವಾ ಒಳ್ಳೇ ಸುಶೋಭಿತವಾದ 'ವೈಸ್‌ರಾಯ್ ಕೌನ್ಸಿಲ್' ಮಾತ್ರವಲ್ಲ

ವೆಂಬುದೂ ನಿಜವಾದರೆ ಅಂಥ ಸರಕಾರದ ಸ್ಥಾಪನೆ ಬರಿಯ ಸಭೆಗಳ ಮೂಲಕ ಸಾಧ್ಯವಿಲ್ಲ. ಕಾಂಗ್ರೆಸ್ಸು ಈ ವಿಫಲವಾದ ಮಾರ್ಗವನ್ನು ಎಷ್ಟೋ ವರುಷಗಳ ಹಿಂದೆಯೇ ಬಿಟ್ಟುಕೊಟ್ಟಿತು. ಆದರೆ ಸಾರ್ವಭೌಮ ಆಳರಸರನ್ನು ಬೇಡಿಕೊಳ್ಳುವುದರಿಂದ ಇದು ದೊರಕುವುದೆಂದು ಕಾಮ್ಯುನಿಷ್ಟರು ನಂಬುತಿದ್ದರೆ ಅವರು ಹಾಗೆ ಮಾಡಬಹುದು. ಇದರಿಂದ ಅವರು ಜನತೆಯ ಅಪಹಾಸ್ಯಕ್ಕೂ ಸರಕಾರದ ತಿರಸ್ಕಾರಕ್ಕೂ ಗುರಿಯಾಗುವರೇ ಹೊರತು ಮತ್ತೇನೂ ಇಲ್ಲ.

ರಾಷ್ಟ್ರೀಯ ಸರಕಾರದ ಸ್ಥಾಪನೆಗೆ ಮುಂಚಿತವಾಗಿ ಕಾಂಗ್ರೆಸ್-ಲೀಗ್ ಒಪ್ಪಂದವಾಗಬೇಕೆಂಬ ಹುಯಿಲು ಹೊಸದಲ್ಲ; ಮತ್ತು ಅದನ್ನು ಇಲ್ಲಿ ಉಲ್ಲೇಖಿಸುವ ಕಾರಣವೂ ಇಲ್ಲ. ನೇರವಾದ ಹೋರಾಟದಿಂದ ಬೇಸತ್ತ ಕೆಲವೊಂದು ಕಾಂಗ್ರೆಸ್ಸಿಗರು ಕಾಯಿದೆ ಮಂಡಲಗಳನ್ನು ಸೇರ ಬಯಸುವ ಈ ಸುಲಭ ಮಾರ್ಗವನ್ನು ಹಿಡಿಯಬೇಕೆಂದಿದ್ದಾರೆ. ಇದರ ಪುರಸ್ಕರ್ತರಾದ ಶ್ರೀ. ರಾಜಗೋಪಾಲಾಚಾರ್ಯರು ಜಿನ್ನಾ ಸಾಹೇಬರ ಅರಮನೆಯ ಬಾಗಿಲಲ್ಲಿ ದಾರಿಕಾಯುತ್ತ ಕುಳಿತಿದ್ದಾರೆ. ಗಾಂಧೀಜಿಯವರು ಬರೆದ ಓಲೆ ಲೀಗ್ ಮುಂದಾಳು ಶ್ರೀ. ಜಿನ್ನಾರಿಗೆ ಇನ್ನೂ ಮುಟ್ಟಿಲ್ಲವೆಂಬುದನ್ನು ಮರೆಯಕೂಡದು. (ಆದರೂ ಈ ಓಲೆಗೆ ಏನು ಉತ್ತರವು ದೊರೆಯಬಹುದೆಂಬುದನ್ನು ಸುದೈವದಿಂದ ಈಗಲೇ ಊಹಿಸಬಹುದಾಗಿದೆ) ಆದಕ್ಕಾಗಿಯೇ ಈ ವಿಷಯವನ್ನು ನಾನು ಸಂಕ್ಷೇಪವಾಗಿ ವಿವೇಚಿಸುತ್ತಿದ್ದೇನೆ.

ಬ್ರಿಟಿಷ್ ಪ್ರಚಾರಕ್ಕೆ ಎಂತಹರೂ ಮರುಳಾಗುವರೆಂದ ಮೇಲೆ ಅದರ ಪ್ರಚಾರಕಾರ್ಯಕ್ಕೆ ನಾವು ತಲೆದೂಗಲೇ ಬೇಕು; ಇಲ್ಲವೇ ರಾಜನೀತಿಯಲ್ಲಿ ನಮ್ಮ ಅಜ್ಞಾನವನ್ನೂ ಅಧೋಗತಿಯನ್ನೂ ಒಪ್ಪಿಕೊಳ್ಳಬೇಕು. ಬ್ರಿಟಿಷ್ ಚಾಣಾಕ್ಷತನ ಸಾಮಾನ್ಯ ಅಮೇರಿಕನ್ನರಿಗೂ ಮಾಟವನ್ನೆಸಗಿದೆ. ಆದರೆ ಭಾರತದಲ್ಲಿ ಇತ್ತೀಚೆಗೆ ನಡೆದ ಸಂಗತಿಗಳು ಬ್ರಿಟಿಷರ ಸೋಗನ್ನು ಬಯಲಿಗೆಳೆದಿವೆ. ಬ್ರಿಟಿಷ್ ಸಾಮ್ರಾಜ್ಯದ ಉದ್ದೇಶವನ್ನೂ ಸ್ವರೂಪವನ್ನೂ ಇನ್ನಾವ ರೀತಿಯಿಂದಲೂ ಬಚ್ಚಿಡುವುದು ಅಸಾಧ್ಯ. ಆದರೂ ಭಾರತದ ಸ್ವಾತಂತ್ರ್ಯ ಸಾಧನೆಗೆ ಕಾಂಗ್ರೆಸ್-ಲೀಗ್ ಭಿನ್ನಾಭಿ

ಪ್ರಾಯವೇ ಅಡ್ಡಬರುವುದೆಂದು ಕೆಲ ಹಿಂದೀಯರು ತಿಳಿಯುವುದಲ್ಲದೆ ತಮ್ಮ ದೇಶಬಾಂಧವರೆಲ್ಲರೂ ಹಾಗೆ ತಿಳಿಯಬೇಕೆಂದು ಬಯಸುತ್ತಾರೆ.

ಕಳೆದ ಕೆಲವೊಂದು ತಿಂಗಳಿನ ಬ್ರಿಟಿಷ್ ಧೋರಣೆ, ಬ್ರಿಟಿಷರು ಎಂಥ ಸಂದರ್ಭದಲ್ಲಿಯೂ ಭಾರತವನ್ನು ಬಿಟ್ಟುಕೊಡಲಾರರೆಂಬುದಕ್ಕೆ ಸಾಕ್ಷಿ. ಕ್ರಿಪ್ಸ್ ಸಂಧಾನದಿಂದ, ಹಿಂದೀಯರು ಎಷ್ಟೇ ಒಕ್ಕಟ್ಟನಿಂದಿದ್ದರೂ ಬ್ರಿಟನ್ನು ಯುದ್ಧಕಾಲದಲ್ಲಿ ಹಿಂದೀಯರಿಗೆ ಯಾವ ನಿಜವಾದ ಅಧಿಕಾರ ವನ್ನೂ ಕೊಡಲಾರದೆಂಬ ಒಂದು ಮಾತನ್ನು ಸ್ಪಷ್ಟಪಡಿಸಿದೆ. ಕಾಂಗ್ರೆಸ್-ಲೀಗುಗಳೆರಡೂ ಸೇರಿ ಜನತೆಯ ನಿಯಂತ್ರಣಕ್ಕೊಳಗಾದ ನಿಜವಾದ ರಾಷ್ಟ್ರೀಯ ಸರಕಾರವನ್ನು ಒಮ್ಮತದಿಂದ ಕೇಳಿದರೂ ಯುದ್ಧಕಾಲದಲ್ಲಿ ಅದನ್ನು ಕೊಡಲಾಗುವುದಿಲ್ಲವೆಂಬುದನ್ನು ಕ್ರಿಪ್ಸರು ಒತ್ತಿ ಹೇಳಿದರು. (ಭವಿಷ್ಯದ ಬಗೆಗೆ ಬ್ರಿಟಿಷರ ವಚನಗಳನ್ನು ನಂಬುವವರಾರು ?) ಹೀಗೆ ಬ್ರಿಟಿಷರು ತಮ್ಮ ಧೋರಣವನ್ನು ಸ್ಪಷ್ಟಪಡಿಸಿದ್ದರೂ ಮರಳಿ ಕಾಂಗ್ರೆಸ್-ಲೀಗ್ ಒಪ್ಪಂದಕ್ಕೆ ಯತ್ನಿಸುವುದೆಂದರೆ ಚರ್ಚಿಲ್ ಅಮೆರಿಗಳ ಸುಳ್ಳುಗಳ ಕಂತೆಗೆ ಇಲ್ಲದ ಮಹತ್ವವನ್ನು ಕೊಟ್ಟಂತೆಯೇ ಸರಿ. ಕಾಂಗ್ರೆಸ್-ಲೀಗ್ ಒಪ್ಪಂದದ ಆಂದೋಲನವೆಂದರೆ ರಾಷ್ಟ್ರೀಯ ಭಾರತದ ಮುನ್ನಡೆಯನ್ನು ಕುಂಠಿಸಲು ಬ್ರಿಟಿಷ್ ಸಾಮ್ರಾಜ್ಯವು ಮಾಡುತ್ತಿರುವ ಬೇರೊಂದು ಬಗೆಯ ಪ್ರಯತ್ನ.

ಕಾಂಗ್ರೆಸ್-ಲೀಗ್ ಒಮ್ಮತವು ರಾಷ್ಟ್ರೀಯ ಸರಕಾರದಾನಕ್ಕೆ ಬ್ರಿಟನ್ನಿಗೆ ಒತ್ತಾಯಗೊಳಿಸದಿದ್ದರೂ ಇಂತಹ ಐಕ್ಯವು ಸ್ವಾತಂತ್ರ್ಯ ಸಂಪಾದನೆಗೆ ಒಂದು ದೊಡ್ಡ ಶಕ್ತಿಯಾಗಿ ಪರಿಣಮಿಸಲಿಕ್ಕಿಲ್ಲವೆ ?—ಎಂದು ಯಾರಾದರೂ ಕೇಳಬಹುದು. ಈ ಗ್ರಹಿಕೆ ತಪ್ಪಾದುದು. ನಮ್ಮ ದೇಶದಲ್ಲಿ ಸ್ವಾತಂತ್ರ್ಯದ ಹೋರಾಟಕ್ಕೆ ಕಷ್ಟನಷ್ಟಗಳಿಗೆ ಯಾರು ಶಕ್ತರಿದ್ದಾರೋ ಅವರ ಶಕ್ತಿಯೇ ನಿಜವಾದ ಶಕ್ತಿ. ಮುಸ್ಲಿಂಲೀಗು ತನ್ನ ಇಡಿಯ ಆಯುಷ್ಯ ದಲ್ಲಿ ಒಮ್ಮೆಯಾದರೂ ಕಷ್ಟಪಡಲು, ಹೋರಾಡಲು ಸಿದ್ಧವಾಗಿಲ್ಲ; ಇಂದಿಗೂ ಸಿದ್ಧವಿಲ್ಲ. ಹೋರಾಟವಿಲ್ಲದೆ ಭಾರತಕ್ಕೆ ಸ್ವಾತಂತ್ರ್ಯವು ಶಕ್ಯ ವಿಲ್ಲ. ಹೋರಾಟಕ್ಕೆ ಸಿದ್ಧವಿಲ್ಲದಿರುವ ಮುಸ್ಲಿಂಲೀಗಿನೊಡನೆ ಮಾಡಿ ಕೊಳ್ಳಬಹುದಾದ ಒಪ್ಪಂದದಿಂದ ಹೋರಾಟಕ್ಕೆ ಯಾವ ಹೆಚ್ಚಿನ ಶಕ್ತಿಯೂ

ಬರಲಾರದು. ಮುಸ್ಲಿಂಲೀಗು ಹೋರಾಡಲು ಸಿದ್ಧವಾದರೆ ಅದರೊಡನೆ ಒಪ್ಪಂದವು ಎಂದಿಗೂ ಸಾಧ್ಯವಿದೆ ಎಂದು ಪಂಡಿತ್ ನೆಹರೂರವರು ಹೇಳಿದ ಮಾತಿನಲ್ಲಿ ತಥ್ಯವಿದೆ.

ಇದು ಕಾಂಗ್ರೆಸ್-ಲೀಗ್ ಒಪ್ಪಂದದ ವಿಷಯವಾಯಿತು. ಲೀಗಿನ ರಾಜನೀತಿಯ ಬಗೆಗೆ ಇನ್ನೊಂದು ಮಾತು. ಲೀಗು ಬ್ರಿಟಿಷರೊಡನೆ ಸಂಚುಹೂಡಿದೆ ಎಂಬುದನ್ನು ಗಮನದಲ್ಲಿಡಬೇಕು. ಜಿನ್ನಾ ಸಾಹೇಬರು ಸ್ಪಷ್ಟವಾಗಿ ದೇಶದ್ರೋಹಿಗಳು. ಅವರನ್ನು ಆಧುನಿಕ ಮೀರ್‌ಜಾಫರನೆಂದು ಕರೆಯಬಹುದು. ತನಗೆ ಬೇಕಾದ್ದನ್ನು ಬ್ರಿಟನ್ನು ಕೊಡಬಹುದೆಂದು ಅವರ ನಂಬುಗೆ. ಆದರೆ ತನ್ನ ಕೈಗೊಂಬೆಗಳಿಗೆ ತನ್ನ ಸಾಮ್ರಾಜ್ಯದ ತುಂಡುಗಳನ್ನು ಕೊಡುವುದು ಬ್ರಿಟನ್ನಿನ ಪದ್ಧತಿಯಲ್ಲ. ಬ್ರಿಟನ್ನು ಜಿನ್ನಾರನ್ನು ಸಂಪೂರ್ಣವಾಗಿ ಉಪಯೋಗಿಸಿಕೊಂಡು, ಕೆಲಸವಾದ ಬಳಿಕ, ಮೀರ್‌ಜಾಫರ್ ಮೊದಲಾದವರನ್ನು ದೂರ ಬಿಸುಡಿವಂತೆ—ಒಗೆದು ಬಿಡುತ್ತದೆ. ಇಂದು ಬಂಗಾಲವನ್ನು ಆಳುತ್ತಿರುವುದು ಮೀರ್‌ಜಾಫರನ ಮಕ್ಕಳು ಮೊಮ್ಮಕ್ಕಳಲ್ಲ, ಕ್ಲೈವನ ಹೊಲಸು ಪೀಳಿಗೆಯವರು ಎಂಬುದನ್ನು ಮುಸಲ್ಮಾನರು ನೆನಪಿನಲ್ಲಿಡಲಿ. ತಾವು ಬಹಳ ಚಾಣಾಕ್ಷರೆಂದು ಜಿನ್ನಾರವರು ತಿಳಿದಿರಬಹುದು. ಆದರೆ ಅವರ ಮೋಸಕ್ಕೂ ತಲೆತಿರುಕತನಕ್ಕೂ ಇತಿಹಾಸವು ಅವರನ್ನೊಂದು ಸಾರಾಸಾರ ವಿಚಾರವಿಲ್ಲದ ವ್ಯಕ್ತಿಯೆಂಬುದಾಗಿ ಸಾರದೆಬಿಡದು.

ಜಿನ್ನಾರಿಗೆ ತನ್ನ ಪಾಕಿಸ್ತಾನ ಬೇಕಾಗಿದೆ. ಅವರಿಗೆ ಅದು ನಿಜವಾಗಿಯೂ ಬೇಕಾಗಿದ್ದರೆ ಅವರು ಅದಕ್ಕಾಗಿ ಹೋರಾಡಬೇಕು, ಸ್ವಾರ್ಥತ್ಯಾಗಮಾಡಬೇಕು, ಸಾಯುಲು ಸಿದ್ಧರಾಗಬೇಕು. ಬಿಕ್ಕಟ್ಟು ಬರುವುದು ಇಲ್ಲಿಯೇ. ಜಿನ್ನಾ ಮತ್ತು ಅವರ ಅನುಯಾಯಿಗಳು ಇಂಥ ಕೆಲಸಕ್ಕೆ ಸಿದ್ಧರಿಲ್ಲ. ಆದುದರಿಂದ ಅವರು ಪಾಕಿಸ್ತಾನಕ್ಕಾಗಿ ಮಹಾತ್ಮಾಗಾಂಧಿಯವರ ಸಮ್ಮುಖದಲ್ಲಿ ಕಿರಿಚಿಕೊಳ್ಳುತ್ತಾರೆ. ಆದರೆ ಬಡ ಗಾಂಧಿಯವರು ಜಿನ್ನಾರವರ ಪವಿತ್ರ ದೇಶಕೋಶವನ್ನೇನೂ ಹಿಡಿದುಕೊಂಡಿಲ್ಲ. ಅದು ಸಾಮ್ರಾಜ್ಯವಾದದ ಕಾಲುಕೆಳಗೆ ಸಿಕ್ಕಿಕೊಂಡು ಮಲಿನವಾಗುತ್ತಿದೆ ಜಿನ್ನಾರವರು ತಮ್ಮ ವಿಭಾಗವನ್ನು ಬ್ರಿಟಿಷರ ಕೈಯಿಂದ ಕಸಿದುಕೊಂಡರೆ ಕಾಂಗ್ರೆ

ಸ್ಸಿಗೇನೂ ದುಃಖವಿಲ್ಲ. ಇದರಿಂದ ಭಾರತದ ಕೆಲವೊಂದು ಭಾಗವಾದರೂ ಸ್ವತಂತ್ರವಾದೀತು. ಆದರೆ ಜಿನ್ನಾ ಅದನ್ನು ಕಸಿದುಕೊಳ್ಳಲಾರರು. ಯಾಕೆಂದರೆ ಅದಕ್ಕಾಗಿ ಕಷ್ಟಪಡುವ ಶಕ್ತಿ ಅವರಲ್ಲಿಲ್ಲ. ಆದುದರಿಂದ ಅವರು ಕಾಂಗ್ರೆಸ್ಸನ್ನು ಹಳಿಯುತ್ತಲೇ ಮುಂದೆ ಸಾಗಬೇಕಾಗಿದೆ. ಆದರೆ ಕೊನೆಗೆ ಚರ್ಚಿಲ್ಲರು ಜಿನ್ನಾರನ್ನು ದೂರದಿರರು. ಬ್ರಿಟಿಷರು ಭಾರತವನ್ನು ವಿಭಾಗಿಸಿದ್ದಾದರೆ ಅದು ಸಾಮ್ರಾಜ್ಯದ ಹಿತಸಾಧನೆಗೇ ಹೊರತು ಮುಸಲ್ಮಾನರಿಗೆ ಸ್ವಾತಂತ್ರ್ಯವನ್ನು ಕೊಡಬೇಕೆಂಬ ಇಚ್ಛೆಯಿಂದಲ್ಲ. ಅಲ್ಸ್ಟರು ಐರ್ಲಂಡಿನ ಹಿತವನ್ನೇನೂ ಸಾಧಿಸುತ್ತಿಲ್ಲ. ಅದು ಬೆಂಕಿಯಲ್ಲಿಟ್ಟ ಬ್ರಿಟಿಷ್ ಚೂರಿಯಂತಿದೆ.

ಲೀಗಿನ ನಿಜವಾದ ರಾಜನೀತಿ ಬ್ರಿಟಿಷ್ ಸಾಮ್ರಾಜ್ಯವಾದದ ಯಂತ್ರವನ್ನು ಮುಂದುವರಿಸುವುದೂ ದೇಶದ್ರೋಹವನ್ನು ಬಗೆಯುವುದೂ ಆಗಿದೆ.

೫

ಶ್ರೀ. ಸುಭಾಸ್ ಚಂದ್ರ ಬೋಸರು ಶೋನಾನಿ(ಸಿಂಗಪುರ)ನಲ್ಲಿ ತಾತ್ಪೂರ್ತಿಕ ಸ್ವತಂತ್ರ ಹಿಂದೀ ಸರಕಾರವನ್ನು ಸ್ಥಾಪಿಸಿರುವರೆಂದೂ ಅದನ್ನು ಜಪಾನ್ ಸರಕಾರವು ಮಾನ್ಯಮಾಡಿರುವುದೆಂದೂ ನೀವು ಬಹುಶಃ ಬಲ್ಲಿರಿ. ಅವರು ಹಿಂದೀ ರಾಷ್ಟ್ರೀಯ ಸೈನ್ಯವನ್ನು ಕಟ್ಟಿದ್ದಾರೆ; ಅದು ತೀವ್ರವಾಗಿ ಬೆಳೆಯುತ್ತಲೂ ಇದೆ. ಈ ವಿಷಯಗಳು ಕೆಲವೊಂದು ಕಾರಣಗಳಿಂದ ಮಹತ್ವದವು. ಬರಗಾಲ ಸಂತ್ರಸ್ತರಾಗಿ ಸಾಯುತ್ತಿರುವ ಬಂಗಾಲದ ಜನರಿಗೆ ತಕ್ಕಷ್ಟು ಅಕ್ಕಿಯನ್ನು ಕಳುಹಿಸಿಕೊಡುವುದೇ ಸುಭಾಸ್ ಸರಕಾರವು ಮಾಡಬೇಕಾದ ಮೊಟ್ಟಮೊದಲಿನ ಕೆಲಸ. ಆದರೆ ಈ ದೇಶೀಯ ಜನರು ಸಾಯುವುದೇ ಮೇಲೆಂದು ಬ್ರಿಟಿಷ್ ಸರಕಾರವು ತಿಳಿಯುತ್ತದೆ.

ಸುಭಾಸರನ್ನು ಪರಕೀಯರ ಕೈಗೊಂಬೆಯೆಂದು ಧಿಕ್ಕರಿಸುವುದು ಸುಲಭ. ಬ್ರಿಟನ್ನಿನ ಕೈಗೊಂಬೆಗಳಾಗಿದ್ದವರಂತೂ ಇವರನ್ನು ಬಹು ಸುಲಭವಾಗಿ ಹೀಯಾಳಿಸುತ್ತಾರೆ. ಆದರೆ ರಾಷ್ಟ್ರೀಯ ಭಾರತವು, ಅವರು ಸ್ವದೇಶಾಭಿಮಾನಿಗಳಲ್ಲಿ ಅಗ್ರಗಣ್ಯರೆಂಬುದನ್ನೂ ಸ್ವಾತಂತ್ರ್ಯಸಮರದಲ್ಲಿ ಎಲ್ಲರಿಗಿಂತ ಮುಂದಿರುವವರೆಂಬುದನ್ನೂ ಬಲ್ಲುದು. ಅವರು ತಮ್ಮ

ರಾಷ್ಟ್ರದ ಹಿತವನ್ನು ಪರರಿಗೆ ಮಾರಿಕೊಳ್ಳುವರೆಂಬುದನ್ನು ಭಾವಿಸುವುದು ಅಸಾಧ್ಯ. ಅವರಿಗೆ ಬೇಕಾದ ಆಯುಧಗಳನ್ನೂ ಹಣವನ್ನೂ ಅಚ್ಚಿನ ರಾಷ್ಟ್ರಗಳು ಪೂರೈಸಿವೆ ಎಂಬುದೇನೋ ನಿಜ. ಆದರೆ ಮುಖ್ಯಮಾತೇನೆಂದರೆ ಅವರ ಸರಕಾರದಲ್ಲಿದ್ದ ಜನರು ಬ್ರಿಟಿಷ್ ಸರಕಾರವನ್ನು ದ್ವೇಷಿಸುವವರೂ ತಾಯ್ನಾಡಿನ ಸ್ವಾತಂತ್ರ್ಯಕ್ಕಾಗಿ ಹಾತೊರೆಯುವವರೂ ಆಗಿದ್ದಾರೆ. ಎರಡನೆಯ ಮಾತೆಂದರೆ ಯುರೋಪಿನಲ್ಲಿ ಕೂಡ ಬೇರೆ ಬೇರೆ ರಾಷ್ಟ್ರಗಳ ತಾತ್ಕಾಲಿಕ ಸರಕಾರಗಳು ಮಿತ್ರರ ಆಶ್ರಯ ಪಡೆದು ಅವರ ಸಹಾಯವನ್ನು ಪಡೆಯುತ್ತಲಿವೆ. ಮೂರನೆಯದೆಂದರೆ ಜಗತ್ತಿನ ಪರಿಸ್ಥಿತಿಯು, ಬಲಹೀನ ರಾಷ್ಟ್ರಗಳಿಗೆ ಶಕ್ತಿವಂತ ರಾಷ್ಟ್ರಗಳು ಎಂತಹ ಸಹಾಯವನ್ನೀಯುವ ಸಂದರ್ಭವನ್ನೊದಗಿಸುತ್ತದೆ ಎಂಬುದನ್ನು ಹೇಳುವುದು ಅಸಾಧ್ಯ. ಜಪಾನಿಗಳು ಬ್ರಹ್ಮದೇಶಕ್ಕೆ ಸ್ವಾತಂತ್ರ್ಯ ಕೊಟ್ಟ ವಿಷಯವು ಈಗಾಗಲೇ ಪ್ರಕಟವಾಗಿದೆ; ಮತ್ತು ಜಪಾನಿಗಳ ಈ ಔದಾರ್ಯವನ್ನು ಮೆಚ್ಚಿ ರಶಿಯದ ಸೋವಿಯಟ್ ಸರಕಾರವು ಅವರನ್ನು ಅಭಿನಂದಿಸಿದೆ ಎಂಬ ಸುದ್ದಿ ಬಂದಿದೆ. ಹೇಗಿದ್ದರೂ, ಬ್ರಹ್ಮೀಯರು ಬ್ರಿಟಿಷರ ಅಧೀನದಲ್ಲಿದ್ದಾಗಿನಕಿಂತಲೂ ಹೆಚ್ಚು ಸ್ವಾತಂತ್ರ್ಯವನ್ನು ಈ ಜಪಾನಿಗಳ ಸಂಪರ್ಕದಲ್ಲಿ ಉಪಭೋಗಿಸುತ್ತಲಿದ್ದಾರೆ ಎಂಬ ಬಗೆಗೆ ಸಂದೇಹವಿಲ್ಲ. ಶ್ರೀ. ಸುಭಾಸರ ಬಗೆಗೆ ಹೇಳುವುದಾದರೆ ಅವರು ಮೈಕೆವಿಲ್ಲಿ ಅಥವಾ ಕೌಟಿಲ್ಯನಿಗಿಂತ ಪೂರ್ವದಿಂದ ನಡೆದು ಬಂದ ರಾಜನೀತಿಯ ತತ್ವದಂತೆ ಶತ್ರುಗಳಿಂದ ಸಹಾಯ ಪಡೆದಿದ್ದಾರೆ. ಇಂಥ ನೆರವಿನಿಂದ ಅವರು ಕೊನೆಗೆ ಮೋಸಹೊಂದಬಹುದು ಆದರೆ ಅವರ ಉದಾತ್ತ ಧ್ಯೇಯದ ಬಗೆಗೆ, ಅವರ ಪ್ರಸಂಗಾವಧಾನದ ಬಗೆಗೆ ನಾವು ಸಂದೇಹಪಡುವಂತಿಲ್ಲ. ತನ್ನ ದೇಶದ ಸ್ವಾತಂತ್ರ್ಯಕ್ಕಾಗಿ ಸಹಾಯಮಾಡುವುದರಲ್ಲಿ ಜಯಾಪಜಯಗಳನ್ನು ಪಡೆಯುವುದು ಮುಂದೊದಗುವ ಸಂಗತಿಗಳನ್ನು ಅವಲಂಬಿಸಿದೆಯೇ ಹೊರತು ಯಾವುದೊಂದು ವ್ಯಕ್ತಿಯನ್ನಲ್ಲ

ಶೋನಾನಿನ ಹಿಂದೀ ಸರಕಾರದ ಮತ್ತು ರಾಷ್ಟ್ರೀಯ ಸೈನ್ಯದ ಮಹತ್ವವನ್ನು ನಾವು ಒಪ್ಪಿಕೊಂಡರೂ, ನಮ್ಮ ಸ್ವಾತಂತ್ರ್ಯವು ಹೆಚ್ಚಾಗಿ ನಮ್ಮ ಶಕ್ತಿಯನ್ನೂ, ಸಾಮರ್ಥ್ಯಗಳನ್ನೂ ಹೊಂದಿಕೊಂಡಿದೆಯೆಂದು ನಾನು ಒತ್ತಿಹೇಳುತ್ತೇನೆ. ಹೊರಗಿನ ಸಹಾಯದ ಆಸೆಯಿಂದ ಕಾರ್ಯವಿಮುಖ

ರಾಗಿ ಕುಳ್ಳಿರುವುದೆಂದರೆ ರಾಜನೀತಿಯ ತತ್ವಗಳನ್ನೇ ಕೊಲೆ ಮಾಡಿದಂತೆ. ಬರಿಯ ಹೊರಗಿನ ಸಹಾಯವು ನಮ್ಮನ್ನು ಸ್ವತಂತ್ರಗೊಳಿಸಲಾರದು. ಸುಬಾಸರ ಸೇನೆ ಎಷ್ಟು ದೊಡ್ಡದಿದ್ದರೂ ಅದು ಭಾರತದಲ್ಲಿರುವ ಮಿತ್ರ ರಾಷ್ಟ್ರಗಳ ಅಪಾರ ಸೈನ್ಯವನ್ನು ಸೋಲಿಸಬಲ್ಲುದೆಂದು ಭಾವಿಸುವುದು ತಪ್ಪು. ಅವರನ್ನು ಸೋಲಿಸಬಹುದಾದ ಯಾವುದೊಂದು ಸೈನ್ಯವಿದ್ದರೆ ಅದು ಜಪಾನ್‌ಸೈನ್ಯ ಮಾತ್ರ. ಜಪಾನಿಗಳು ಬ್ರಿಟಿಷರನ್ನು ಸೋಲಿಸಿದರೂ ಜಪಾನರು—ಸುಬಾಸ್ ಟೋಜೋರಲ್ಲಿ ಎಂತಹ ಒಪ್ಪಂದವಾಗಿದ್ದರೂ—ಭಾರತವನ್ನು ನಮಗೆ ಸುಲಭವಾಗಿ ಬಿಟ್ಟುಕೊಡಲಾರರು. ಒಂದು ವೇಳೆ ಹಿಂದುಸ್ಥಾನದಲ್ಲಿ ಮಿತ್ರರಿಗೂ ಅಚ್ಚಿನ ರಾಷ್ಟ್ರಗಳಿಗೂ ತಿಕ್ಕಾಟವು ಮೊದಲಾದರೆ ಅಧಿಕಾರವನ್ನು ಸ್ವತಃ ನಾವೇ ಹಿಡಿದುಕೊಳ್ಳಲು ಸಿದ್ಧರಾಗಿರಬೇಕು. ಈ ಬಗೆಯ ಪ್ರಯತ್ನಕ್ಕೆ ನಾವು ಸಿದ್ಧರಿದ್ದರೆ ಮಾತ್ರ ಸುಬಾಸ್ ಸೇನೆಯಂತಹ ಹೊರಗಿನ ಸಹಾಯವು ಉಪಯುಕ್ತವಾಗಿ ನಮಗೆ ಸ್ವಾತಂತ್ರ್ಯ ದೊರೆಯಬಹುದು ; ಟೋಜೊನಂಥವನನ್ನು ಹಿಂದುಸ್ಥಾನದಿಂದ ದೂರ ಇಡಲಿಕ್ಕೂ ಸಾಧ್ಯವಾಗಬಹುದು. ಈ ಮಾತನ್ನು ಸುಬಾಸರಾದರೂ ಎಷ್ಟರ ಮಟ್ಟಿಗೆ ಬಲ್ಲರೆಂಬುದು ಸಂಶಯ.

ಹಾಗಾದರೆ ಯುದ್ಧವು ನಮ್ಮ ಬಾಗಿಲಿಗೇ ಬಂದರೆ ಏನು ಮಾಡುವುದು? ಬ್ರಿಟಿಷ್ ಧೋರಣದಿಂದ ಪ್ರತಿಯೊಬ್ಬ ಹಿಂದೀಯನು—ಅವನು ಜಪಾನಿಗಳನ್ನು ಸ್ವಾಗತಿಸದಿದ್ದರೂ—ಬ್ರಿಟಿಷರ ವಿಷಯದಲ್ಲಿ ಉಪೇಕ್ಷೆಯಿಂದಿದ್ದಾನೆ. ಇಂಥ ಉಪೇಕ್ಷೆ ನಮ್ಮ ವಿನಾಶಕ್ಕೆ ಕಾರಣವಾಗುತ್ತದೆ. ಅದನ್ನು ನಾವು ಬಿಟ್ಟುಕೊಟ್ಟು ಯೋಗ್ಯರೀತಿಯಿಂದ ಕಾರ್ಯಾಸಕ್ತರಾಗಲು ಪ್ರಯತ್ನಿಸಬೇಕು. ಯುದ್ಧವು ಮೊದಲಾದ ವಿಭಾಗದಲ್ಲಿ, ಇಲ್ಲವೆ ಜಪಾನಿಗಳು ಆಕ್ರಮಿಸಿದ ಭಾಗದಲ್ಲಿ ಪರಕೀಯರ ಆಡಳಿತವು ಸಡಿಲಾಗುವುದು, ಇಲ್ಲವೆ ಕೊನೆಗೊಳ್ಳುವುದು. ಇಂತಹ ಸ್ಥಳಗಳಲ್ಲಿ ನಾವು ಸ್ವರಾಜ್ಯವನ್ನು ಸ್ಥಾಪಿಸಬೇಕು. ಇಂತಹ ಸರಕಾರದ ಪರವಾಗಿ, ಹಿನ್ನಡೆಯುತ್ತಿರುವ ಹಿಂದೀ ಸೈನಿಕರನ್ನು ಹುರಿಗೊಳಿಸಿ, ಅವರು ಜನತೆಯ ಸೈನಿಕರಾಗುವಂತೆ ಪ್ರಯತ್ನಿಸಬೇಕು. ಇಂಥ ಸರಕಾರವನ್ನು ಭಾರತದ ಪೂರ್ವಭಾಗದಲ್ಲಿ ಸ್ಥಾಪಿಸಲು ನಾವು ಈಗಿನಿಂದಲೇ ಹವಣಿಸಬೇಕು. ಇದು ಕ್ರಮೇಣ

ದೇಶವನ್ನೆಲ್ಲಾ ಆವರಿಸಬಹುದು. ಈ ಬಗೆಯ ಸಿದ್ಧತೆ ಎಂದೊಡನೆ ಅನೇಕ ಪ್ರಶ್ನೆಗಳು ಹುಟ್ಟುತ್ತವೆ. ಅವುಗಳನ್ನೆಲ್ಲಾ ಇಲ್ಲಿ ಚರ್ಚಿಸಲಾಗದು. ಇಲ್ಲಿ ಸಾಮಾನ್ಯ ಸೂಚನೆಯನ್ನು ಮಾತ್ರ ಮಾಡಲಾಗಿದೆ. ಅದರ ಕಡೆಗೆ ಯೋದ್ಧರೂ ಜನ ಸಾಮಾನ್ಯರೂ ಗಮನಕೊಡುವುದು ಅಗತ್ಯ.

೬

ಈ ವಿಷಯವನ್ನು ಮುಗಿಸುವ ಮೊದಲು ಈ ಯುದ್ಧದ ಬಗೆಗೆ ಒಂದೆರಡು ಮಾತುಗಳನ್ನು ಹೇಳಬೇಕಾಗಿದೆ. ಈ ಯುದ್ಧದ ರೀತಿಯನ್ನು ಕುರಿತು ಇನ್ನೂ ವ್ಯರ್ಥವಾದ ಚರ್ಚೆ ನಡೆದಿದೆ. ಇದು ಜನತೆಯ ಯುದ್ಧವೆಂದು ಪಂಚಮ ದಲದವರು ಹೇಳುತ್ತ ನಡೆದಿದ್ದಾರೆ—ಅವರು ಹಾಗೆ ಹೇಳುವುದು ಸ್ವಾಭಾವಿಕ. ಕಾದಾಟವೇ ರಾಜನೀತಿಯ ತುದಿ ಮೊದಲೆಂದು ಭಾವಿಸುವವರು ಇದರಿಂದ ಸಂತಪ್ತರಾಗಿ ಕೈಯಿಂದಲೂ ಬಾಯಿಯಿಂದಲೂ ಈ ವಿಷಯವನ್ನು ವಾದಿಸುತ್ತಾರೆ. ಆದರೆ ಬ್ರಿಟಿಷರ ಈ ಯುದ್ಧನೀತಿಯ ಧೋರಣೆಯನ್ನೂ ಅದನ್ನು ಸಮರ್ಥಿಸುವ ನಮ್ಮ ಕೆಲವುದೇಶಬಾಂಧವರ ಧೋರಣೆಯನ್ನೂ ಹಿಂದೀಯರು ಚೆನ್ನಾಗಿ ಅರ್ಥಮಾಡಿಕೊಂಡಿದ್ದಾರೆ. ಹಿಂದೀಯರಿಗೆ ಫಾಸಿಜಂ ಎಂದರೇನೆಂಬುದೂ ಗೊತ್ತು ; ಈ ಯುದ್ಧ ಯಾರ ಸಲುವಾಗಿ ನಡೆದಿರುವುದೆಂಬುದೂ ಗೊತ್ತು. ಅವನ್ನು ವಿವರಿಸಿ ಹೇಳುವ ಅಗತ್ಯವಿಲ್ಲ. ಬ್ರಿಟಿಷರ ಕ್ರೂರ ಪಾಶವೀ ಸರ್ವನಿಯಂತ್ರಣದ ರೀತಿಯನ್ನು ಅವರು ಕಳೆದ ವರುಷ ಕಣ್ಣಾರೆ ಕಂಡಿದ್ದಾರೆ. ಕಾರಾಗೃಹದಲ್ಲಿ ಕೊಳೆಯುತ್ತಿರುವವರು, ಬ್ರಿಟಿಷರು 'ಕಾಯಿದೆ ಸುವ್ಯವಸ್ಥೆ'ಯನ್ನು ಕಾಪಾಡುವ ನೆವನದಿಂದ ನಡೆಸಿದ ಹತ್ಯಾಕಾಂಡದಲ್ಲಿ ತಮ್ಮ ಬಾಂಧವರನ್ನು ಕಳೆದುಕೊಂಡವರು, ತಮ್ಮ ಸ್ತ್ರೀಯರ ಮಾನಭಂಗವನ್ನು ಕಣ್ಣಾರೆಕಂಡವರು— ಇವರೆಲ್ಲರೂ ಇದೆಂತಹ ಜನತೆಯ ಯುದ್ಧವೆಂಬುದನ್ನು ಚೆನ್ನಾಗಿ ಬಲ್ಲರು. ಒಬ್ಬ ಬ್ರಿಟಿಷ್ ಸೇನಾಪತಿ, ಅಳಿದುಳಿದ ಬಾಬರನ ವಂಶದವರ ತಲೆಗಳನ್ನು ಕಡಿದು ಅವುಗಳನ್ನು ಒಂದು ತಟ್ಟೆಯಲ್ಲಿಟ್ಟು, 'ಇದು ವಿಕ್ಟೋರಿಯಾ ಮಹಾರಾಣಿಯ ಕಾಣಿಕೆ' ಎಂದು ಮೊಗಲರ ಕೊನೆಯ ಚಕ್ರವರ್ತಿಗೆ ಕಳುಹಿದ್ದನಂತೆ. ಈ ಸಂಗತಿ ನಡೆದು ೧೫೦ ವರುಷಗಳ ನಂತರ, ಈಗ, ಟಾಟೆನ್‌ಹ್ಯಾಮ್ ಎಂಬುವವನು ಅಮೇರಿಕನ್ ಸುದ್ದಿಗಾರರೆದುರು, ತಾನು

ಗಾಂಧೀಜಿಯ ಅಂತ್ಯಸಂಸ್ಕಾರಕ್ಕೆ ತಕ್ಕಷ್ಟು ಗಂಧದ ಕಟ್ಟಿಗೆಯನ್ನು ಸಂಚಯಿಸಿರುವುದಾಗಿ ಬಡಾಯಿಕೊಚ್ಚಿಕೊಂಡಿದ್ದಾನೆ. ಬ್ರಿಟಿಷರ ಆಳಿಕೆಯ ಮೊದಲಿನಿಂದ ಕೊನೆಯ ವರೆಗೆ—ಕೊನೆ ತೀರ ಸಮೀಪಿಸಿದೆ—ಈ ಬಗೆಯ ತಕ್ಕಷ್ಟು ಅತ್ಯಾಚಾರಗಳನ್ನೂ ಅವಮಾನಗಳನ್ನೂ ಹಿಂದುಸ್ಥಾನವು ಕಂಡಿದೆ. ಬ್ರಿಟಿಷರ ರೀತಿನೀತಿಗಳ ಬಗೆಗೆ, ಅವರ ಔದಾರ್ಯದ ಬಗೆಗೆ ಅವರ ಕೈಗೊಂಬೆಗಳು, ದೇಶದ್ರೋಹಿಗಳು, ಏನು ಹೇಳಿದರೂ ಹಿಂದೀಯರು ನಂಬುವಂತಿಲ್ಲ

ಯುದ್ಧದ ಐದನೆಯ ವರುಷ ಆರಂಭವಾಗಿದೆ ಜೀವಗಳಿಗೂ ಸುಖಕ್ಕೂ ಅದರಿಂದಾದ ಅಪಾರ ಹಾನಿ ತುಂಬಿಬರುವಂತಿಲ್ಲ. ಎರಡೂ ಪಕ್ಷಗಳ ಜನಸಾಮಾನ್ಯರು ಯುದ್ಧವುಕೂಡಲೇ ಕೊನೆಗೊಳ್ಳುವುದನ್ನು ಬಯಸುತ್ತಾರೆ. ಆದರೆ ಅದನ್ನು ಚರ್ಚಿಲ್ ಅಥವಾ ರೂಸ್‌ವೆಲ್ಟರಾಗಲಿ, ಹಿಟ್ಲರ್ ಅಥವಾ ಟೋಜೋ ಆಗಲಿ ನಿಲ್ಲಿಸಲಾರರು ಈಗಿನ ಕೊಲೆ ಸುಲಿಗೆಗಳು ನಿಲ್ಲಲಿ ಎಂದು ಅವರು ಕಿರಿಚಿಕೊಂಡರೂ ಅದು ಇನ್ನೂ ಅತಿಘೋರವಾದ ಯುದ್ಧಕ್ಕೆ ಸಹಾಯಕವಾಗುವ ಭೀಕರವಾದ ಜಗತ್ತಿನ ಮಸುಕಾದ ಚಿತ್ರವು ಈಗಾಗಲೇ ನಮ್ಮ ಕಣ್ಮುಂದಿದೆ! ಈ ಪೂರ್ವದಲ್ಲಿದ್ದ ಜಗತ್ತಿಗೂ ಅದಕ್ಕೂ ಏನೂ ಹೆಚ್ಚುಕಡಿಮೆ ಇಲ್ಲ. ಹೊಸ ಜಗತ್ತಿನಲ್ಲಿಯೂ ಸಿರಿವಂತರ, ಅಧಿಕಾರಿಗಳ ವರ್ಗಗಳು ಇದ್ದೇ ಇವೆ. ರಾಷ್ಟ್ರೀಯತ್ವದ ಹೆಸರಿನಲ್ಲಿ ಹಿಂಸೆಯೂ ಬಂಡವಲುಗಾರರ ಸ್ಪರ್ಧೆಯೂ ಅಬಾಧಿತವಾಗಿ ನಡೆಯತಕ್ಕವೇ. ಈ ಎಲ್ಲ ಕಾರಣಗಳಿಂದ ಒಂದೇ ಒಂದು ತಲೆಮಾರಿನಲ್ಲಿ ಎರಡು ಮಹಾ ಯುದ್ಧಗಳಾದವು, ಮೂರನೆಯದು ಖಂಡಿತವಾಗಿ ಆಗಲಿದೆ.

ಈ ಯುದ್ಧವನ್ನು ಜಗತ್ತಿನ ಜನಸಾಮಾನ್ಯರು ಮಾತ್ರ ನಿಲ್ಲಿಸಬಲ್ಲರು. ಆದರೆ ಅವರ ಕೂಗು ಕೇಳಬರುವುದಿಲ್ಲ. ಜನಸಾಮಾನ್ಯನಿಗಾಗಿ ಹೋರಾಡಬಹುದಾಗಿದ್ದ ರಶಿಯವು ಕೂಡ, ಇಂದು ಇಂಗ್ಲಂಡ್ ಅಮೇರಿಕೆಗಳ ಸಾಮ್ರಾಜ್ಯವಾದದಲ್ಲಿಯೂ ಬಂಡವಲುಗಾರಿಕೆಯಲ್ಲಿಯೂ ಸಿಕ್ಕಿಬಿದ್ದು ಅವನ ಕೈಬಿಟ್ಟಿದೆ ಜಗತ್ತಿನ ಕೂಲಿಕಾರರೂ ಬಂಡವಲುಗಾರರ ಕೈಯಲ್ಲಿ ಸಿಕ್ಕು, ಸಮಾಜದ ಮತ್ತು ಜಗತ್ತಿನ ಮುಂದಾಳಾಗಬಹುದಾಗಿದ್ದ ಸಂದರ್ಭವನ್ನು ಕಳೆದುಕೊಂಡಿದ್ದಾರೆ.

ಆದುದರಿಂದ ಹಿಂದುಳಿದವರ ಮತ್ತು ಜನಸಾಮಾನ್ಯರ ಸೇವೆಯನ್ನು ಭರತಖಂಡವು ಮಾತ್ರ ಕೈಕೊಳ್ಳಬಲ್ಲುದು. ಭಾರತದ ಸ್ವಾತಂತ್ರ್ಯದ ಹೋರಾಟವೆಂದರೆ ಸಾಮ್ರಾಜ್ಯವಾದದ ವಿರುದ್ಧ—ಸರ್ವಾಧಿಕಾರದ ವಿರುದ್ಧವೂ—ಹೋರಾಟವೆಂದೂ ಜನಸಾಮಾನ್ಯರು ನಡುವೆ ಕೈಹಾಕಿ ಯುದ್ಧವನ್ನು ಕೊನೆಗೊಳಿಸುವರೆಂದೂ ಅರ್ಥ. ಮಿತ್ರರ ಅಥವಾ ಅಚ್ಚಿನ ರಾಷ್ಟ್ರಗಳ ವಿಜಯವು ನಮ್ಮ ಗುರಿಯಲ್ಲ. ನಾವು ಯಾರ ವಿಜಯವನ್ನೂ ಅವಲಂಬಿಸಿ ಕುಳಿತಿಲ್ಲ. ನಮ್ಮ ಹೋರಾಟವಿರುವುದು ಸಾಮ್ರಾಜ್ಯವಾದ ಮತ್ತು ಸರ್ವಾಧಿಕಾರತ್ವದ ವಿರುದ್ಧವಾಗಿ. ನಮ್ಮ ಹೋರಾಟದಿಂದ ನಾವು ಯುದ್ಧಗಳನ್ನು ಕೊನೆಗೊಳಿಸಿ ಕಪ್ಪು, ಬಿಳಿ, ಹಳದಿ ಮುಂತಾದ ಎಲ್ಲ ಬಣ್ಣದವರಿಗೂ ಸ್ವಾತಂತ್ರ್ಯದ ಮಾರ್ಗವನ್ನು ತೋರಿಸುತ್ತೇವೆ

೭

ನಾನು ನಿಮ್ಮ ಬಹಳ ವೇಳೆಯನ್ನು ತೆಗೆದುಕೊಂಡಿರುವುದರಿಂದ ನನ್ನ ಮಾತನ್ನು ಮುಗಿಸಬೇಕಾಗಿದೆ. ಹೋರಾಟವೇ ನಾವು ಅನುಸರಿಸಬೇಕಾದ ಮುಖ್ಯ ಮಾರ್ಗವೆಂಬುದನ್ನು ಈ ಮೊದಲು ಹೇಳಿದ ಮಾತುಗಳಿಂದ ನಿಮ್ಮ ನಿದರ್ಶನಕ್ಕೆ ತಂದುಕೊಟ್ಟಿದ್ದೇನೆ. ಹಾಗಾದರೆ ನಾವು ಹೋರಾಡುವುದು ಎಂತು ?

ಹೋರಾಡಲು ನಿರ್ಧರಿಸಿದ ಯೋಧರು ಹೋರಾಡುವ ಯೋಗ್ಯಕಾಲ ವೆಂದರೆ ಇದೇ ಎಂದು ನಾನು ಹಿಂದೆಯೇ ಹೇಳಿದ್ದೇನೆ.

ಈ ಯೋಧರು ಮೊದಲು ತಮ್ಮ ಸಂಘಟನೆಯನ್ನು ಬೆಳೆಸುವ, ಬಲಪಡಿಸುವ, ವಿಸ್ತರಿಸುವ ಕಾರ್ಯವನ್ನು ಮಾಡಬೇಕು. ಸಂಘಟನೆ ಇಲ್ಲದೆ ಯಾವ ದಂಡೂ—ಅಹಿಂಸೆಯನ್ನು ಮಾನ್ಯಮಾಡುವ ದಂಡು ಕೂಡ—ಹೋರಾಡಲಾರದು. ಜನಸಾಮಾನ್ಯರ ಕೃತಿಗಳು ಸ್ಫೂರ್ತಿಯುತವಾಗಿದ್ದು ಸಾಮಾಜಿಕ ಶಕ್ತಿಗಳನ್ನು ಬೆಳಕಿಗೆ ತರುತ್ತವೆ. ಆದರೆ ಅವುಗಳಿಗೆ ಉಚಿತ ಸ್ವರೂಪವನ್ನೀಯಲು ಕ್ರಾಂತಿಕಾರಕ ಶಕ್ತಿಯ ಮುಂದಾಳುತನವು ಬೇಕು ಜನಸಾಮಾನ್ಯರ ಕಾರ್ಯವು ಇಂಥ ಶಕ್ತಿಯ ಸಹಾಯದಿಂದಲೇ ಸ್ಫೂರ್ತಿಯುತವಾಗುತ್ತದೆ. ನಮ್ಮ ಇತ್ತೀಚೆಯ ಹೋರಾಟದಲ್ಲಿ ಮುಂದಾಳುಗಳು ಸಂಘಟನೆಯ ಮಹತ್ವವನ್ನು ದುರ್ಲಕ್ಷಿಸಿದ್ದಾರೆ. ತಮ್ಮ ಬಂಧನವಾದೊಡನೆ

ಮುಂದಾಳುಗಳು ಎಲ್ಲ ಕಾರ್ಯಭಾರವನ್ನೂ ಜನಸಾಮಾನ್ಯರ ಸ್ಫೂರ್ತಿಗೇ ಬಿಟ್ಟುಕೊಡಬೇಕಾಯಿತು. ಅಹಿಂಸಾತ್ಮಕ ಚಟುವಟಿಕೆಗಳನ್ನು ಬಚ್ಚಿಡಲಾಗದೆಂಬುದೇ ಈ ಬಗೆಯ ದುರ್ಲಕ್ಷ್ಯಕ್ಕೆ ಕಾರಣವಿರಬಹುದು. ಅಹಿಂಸೆ ಗುಪ್ತಕಾರ್ಯವನ್ನು ಒಪ್ಪುವುದಿಲ್ಲ. ಆದರೂ ಹೋರಾಟವೆಂದ ಬಳಿಕ ಸಂಘಟನೆ ಎಂಬುದು ಬಹು ಪವಿತ್ರವಾದ ವಿಷಯವಾಗಿರಬೇಕು. ಈ ಉಭಯಸಂಕಟಕ್ಕೆ ಸುಗಮವಾದ ಮಾರ್ಗವನ್ನು ಹುಡುಕುವುದು ನನ್ನಿಂದಾಗಲಿಲ್ಲವೆಂಬುದನ್ನು ನಾನು ಒಪ್ಪಿಕೊಳ್ಳುತ್ತೇನೆ. ಇವೆರಡೂ ಪರಸ್ಪರ ವಿರುದ್ಧವಾಗಿದ್ದರೂ ಅಹಿಂಸಾವಾದಿಗಳು ಬೇರೊಂದು ಮಾರ್ಗವನ್ನು ಹುಡುಕುವ ವರೆಗಾದರೂ ದೇಶೋದ್ಧಾರದ ದೃಷ್ಟಿಯಿಂದ ಗುಪ್ತವಾಗಿ ಸಂಘಟನೆಯನ್ನು ಕೈಕೊಳ್ಳಲೇಬೇಕು. ಗಾಂಧೀಜಿ ಕೂಡ ಸಂದರ್ಭಕ್ಕನುಸರಿಸಿ ಒಮ್ಮೊಮ್ಮೆ ತಮ್ಮ ಕಾರ್ಯಕ್ರಮದಲ್ಲಿ ಹೆಚ್ಚುಕಡಿಮೆ ಮಾಡಿ ಒಪ್ಪಂದ ಮಾಡಿಕೊಳ್ಳುತ್ತಾರೆ. ಗುಪ್ತಕಾರ್ಯವನ್ನು ಸುಮ್ಮನೆ ಹೀಗಳೆದು ಬಹಿರಂಗ ಚಟುವಟಿಕೆಯನ್ನು ಹೊಗಳಿದರೆ ನಮ್ಮ ಕಷ್ಟಗಳು ನೀಗಿದಂತಾಗುವುದಿಲ್ಲ; ಹಿಡಿದ ಕಾರ್ಯವು ಮುಂದುವರಿದಂತಾಗುವುದಿಲ್ಲ.

ಆದುದರಿಂದ ಹೋರಾಟದ ನಮ್ಮ ಕಾರ್ಯಕ್ರಮದಲ್ಲಿ ಸಂಘಟನೆಯೆಂಬುದು ಮೊಟ್ಟಮೊದಲಿನ ಮಾತು. ಕಾಂಗ್ರೆಸ್ ಸಂಸ್ಥೆಗಳು ಕಟ್ಟಳೆಗೇಡಿ ಸಂಸ್ಥೆಗಳೆಂದು ಸರಕಾರವು ಸಾರಿದರೂ ನಾವು ಈ ಸಂಸ್ಥೆಗಳನ್ನು ನಡೆಸುವುದರಿಂದ ಮಾತ್ರ ಇದನ್ನು ಸಾಧಿಸುವುದು ಸಾಧ್ಯ. ಇವುಗಳ ನೆರವಿನಿಂದ ಮಾತ್ರ ನಮ್ಮ ಹೋರಾಟದ ಪ್ರಯತ್ನಗಳನ್ನು ಒಗ್ಗೂಡಿಸಲು ಸಾಧ್ಯವಾಗುತ್ತದೆ. ಅವುಗಳಿಗೆ ನಿಯಮಗಳ ಕಟ್ಟುನಿಟ್ಟು ಇರುವುದಿಲ್ಲವೆಂಬುದೇನೋ ನಿಜ. ಆದರೆ ಈಗ ಕಾಂಗ್ರೆಸ್ಸು ಅವುಗಳ ಮುಖಾಂತರ ಮಾತ್ರ ತನ್ನ ಕಾರ್ಯವನ್ನು ಸಾಗಿಸಬಲ್ಲುದು, ಜನರೊಡನೆ ಸಂಪರ್ಕಬೆಳೆಸಿಕೊಳ್ಳಬಲ್ಲುದು, ಶತ್ರುವಿನ ವಿರುದ್ಧ ಹೋರಾಡಬಲ್ಲುದು. ಅನೇಕ ಪ್ರಾಂತಗಳಲ್ಲಿ ಈ ಸಂಸ್ಥೆಗಳು ಸುವ್ಯವಸ್ಥಿತವಾಗಿ ಕೆಲಸ ನಡೆಸಿಲ್ಲ. ಇಂತಹ ಸಂಘಟನೆಯ ದುರ್ಬಲತೆಗೆ ಕೆಲಸಗಾರರ ಕೊರತೆ ಕಾರಣವಲ್ಲ. ಹಣದ ಕೊರತೆ, ಯೋಗ್ಯ ಸಂಚಾಲಕರ ಅಭಾವವೇ ಮುಖ್ಯ ಕಾರಣ. ಇವೆರಡನ್ನೂ ಹೋಗಲಾಡಿಸುವುದು ಅಸಾಧ್ಯವಲ್ಲ. ಹಿಂದೀ ರಾಷ್ಟ್ರೀಯ ಮಹಾಸಭೆ (National

Congress) ಬೇರೆ ಬೇರೆ ಪ್ರಾಂತಗಳಿಗೆ ಅವಶ್ಯವಿದ್ದುದನ್ನೆಲ್ಲ ಕೊಂಚವುಟ್ಟಿಗಾದರೂ ಒದಗಿಸಿಕೊಡಲು ಪ್ರಯತ್ನಪಟ್ಟಿದೆ. ಈ ಪ್ರಯತ್ನಗಳೆಲ್ಲ ತೀರ ನಿಷ್ಫಲವಾಗಿಲ್ಲ. ಈಗಿನ ಕ್ರಾಂತಿಯಲ್ಲಿ ಭಾರತದ ಸಿರಿವಂತರು ಎಂತಹ ಪಾತ್ರವನ್ನು ವಹಿಸಿದ್ದಾರೆ ಎಂಬುದನ್ನು ವಿವೇಚಿಸುವುದು ಈಗ ಯೋಗ್ಯವಲ್ಲ. ಆದರೆ ಅವರು ದೂರದರ್ಶಿಗಳಲ್ಲ ಎಂದು ಮಾತ್ರ ಹೇಳಬಹುದು. ಹಿಂದೀ ರಾಷ್ಟ್ರೀಯ ಚಟುವಟಿಕೆಯು ಸದೆಬಡೆಯಲ್ಪಟ್ಟರೆ, ಯುದ್ಧಾನಂತರದ ಜಗತ್ತಿನಲ್ಲಿ ಬಹು ದೊಡ್ಡ ಆಘಾತಕ್ಕೀಡಾಗುವ ಬ್ರಿಟಿಷ್ ಬಂಡವಲುಗಾರಿಕೆ ಇವರಿಗೇನೂ ಆಶ್ರಯಕೊಡಲಾರದೆಂಬುದನ್ನು ಇವರು ಖಚಿತವಾಗಿ ತಿಳಿದುಕೊಳ್ಳಬೇಕು. ಆದರೂ ಸ್ವಹಿತಕ್ಕಾಗಿಯಾದರೂ ಇವರು ತಮ್ಮ ಸರ್ವಸ್ವವನ್ನೂ ರಾಷ್ಟ್ರೀಯ ಕ್ರಾಂತಿಗಾಗಿ ಅರ್ಪಿಸಬೇಕು. ಆದರೆ ಅವರು ತೀರ ಸ್ವಾರ್ಥಿಗಳಾಗಿ ಮಾತ್ರವಲ್ಲ, ಕೀಳು ಮನುಷ್ಯರಂತೆ ವರ್ತಿಸಿದ್ದಾರೆ.

ಹಣದ ಕೊರತೆಯನ್ನು ನಾವು ಹೇಗಾದರೂ ನಿವಾರಿಸಲೇಬೇಕು. ಅನುಕೂಲವಿದ್ದವರೆಲ್ಲರೂ ನೆರವಾಗಬೇಕು. ಸಂಯುಕ್ತ ಪ್ರಾಂತದಂತಹ ಪ್ರಾಂತಗಳಲ್ಲಿ ಕಾಂಗ್ರೆಸ್ಸಿನ ಹಿಂದಿನ ಮಂತ್ರಿಗಳು ಸೆರೆಮನೆಯ ಹೊರಗಿದ್ದಾರೆ. ಅವರೂ ಇನ್ನಿತರ ಕಾಂಗ್ರೆಸ್ ಕಾರ್ಯಕರ್ತರೂ ಬೇರೆ ಯಾವ ಕೆಲಸಮಾಡದಿದ್ದರೂ ಹಣಕೂಡಿಸಿ ತಮ್ಮ ತಮ್ಮ ಪ್ರಾಂತಗಳ ಬೇಡಿಕೆಗಳನ್ನು ಪೂರೈಸಲು ಯತ್ನಿಸಬೇಕು. ಕೇಂದ್ರಸಮಿತಿಯು ಪ್ರಾಂತಿಕ ಸಮಿತಿಗಳಿಗೆ ದ್ರವ್ಯ ಸಹಾಯಮಾಡುವುದನ್ನೇ ಮುಖ್ಯ ಕಾರ್ಯವನ್ನಾಗಿಟ್ಟುಕೊಳ್ಳಬೇಕು ಕಾರ್ಯಕ್ರಮವನ್ನು ಸಿದ್ಧಪಡಿಸಿ ಅದನ್ನು ಬಳಕೆಗೆ ತರಲು ಪ್ರಾಂತಗಳಿಗೆ ಅಪ್ಪಣೆಯನ್ನೀಯುವ ಮಾತ್ರದಿಂದಲೇ ಕೆಲಸವಾದಂತಾಗಲಿಲ್ಲ. ಅದಕ್ಕೆ ಅವಶ್ಯವಿದ್ದ ಹಣವನ್ನೂ ಒದಗಿಸಿಕೊಡಬೇಕು.

ಹೊಸ ಕಾರ್ಯಕ್ಷೇತ್ರವನ್ನು ನಿರ್ಮಿಸಿ, ಎಲ್ಲರನ್ನೂ ಕಾರ್ಯಪ್ರವೃತ್ತರನ್ನಾಗಿಮಾಡುವುದಕ್ಕೆ ಯೋಗ್ಯ ಸಂಚಾಲಕರೂ ಮುಂದಾಳುಗಳೂ ದೊರೆಯುವುದು ಕಷ್ಟ. ಆದರೂ ತಾತ್ಪೂರ್ತಿಕ ಉಪಾಯವೆಂದರೆ, ಹೊರಗಿದ್ದ ಕೆಲವರಾದರೂ ಎಲ್ಲ ಕಡೆ ಸುತ್ತಾಡಿ ಉಳಿದ ಕೆಲಸಗಾರರನ್ನು ಕಂಡು, ವ್ಯಾವಹಾರಿಕ ಸಮಸ್ಯೆಗಳನ್ನು ಚರ್ಚಿಸಿ ಅವರಿಗೆ ಅವಶ್ಯವಾದ ಉಪದೇಶ

ವನ್ನೂ ಶಿಕ್ಷಣವನ್ನೂ ಕೊಡಬೇಕು. ಒಂದೇ ಕಡೆಯಲ್ಲಿ ಅನೇಕ ಯೋಗ್ಯ ಕೆಲಸಗಾರರಿದ್ದರೆ, ಅವರನ್ನೆಲ್ಲ ಕೆಲಸಗಾರರ ಕೊರತೆ ಇದ್ದ ಸ್ಥಳಗಳಿಗೆ ಕಳುಹಿಕೊಡಬೇಕು. ವಿಶೇಷತಃ ವಿದ್ಯಾರ್ಥಿಗಳೊಳಗಿಂದ ಹೊಸ ಕೆಲಸ ಗಾರರನ್ನು ತುಂಬಿಕೊಳ್ಳಬೇಕು. ಸೆರೆಮನೆಯಿಂದ ಬಿಡುಗಡೆಯಾದವರನ್ನು ಮೆಲ್ಲನೆ ಕಾರ್ಯರಂಗದಲ್ಲಿ ಸೇರಿಸಬೇಕು.

ಹಣ, ಕೆಲಸಗಾರರ ಭರತಿ, ಶಿಕ್ಷಣ, ಈಗಿನ ಜ್ಞಾನ ಅನುಭವಗಳ ಯೋಗ್ಯ ಉಪಯೋಗ, ಮುಂತಾದುವುಗಳಿಂದ ನಮ್ಮ ಸಂಘಟನೆಯ ಸಮಸ್ಯೆಗಳನ್ನು ಬಿಡಿಸಬಹುದು.

ನಮ್ಮ ಸಂಘಟನೆಯನ್ನು ಸದೆಬಡೆಯಲು ನಡೆದಿರುವ ಹಂಚಿಕೆ ಯಿಂದ ಅದನ್ನು ಕಾಪಾಡಿಕೊಳ್ಳುವುದು ನಮ್ಮ ಹೋರಾಟದ ಒಂದು ಶುದ್ಧ ಅಂಗ. ನಮ್ಮ ಸಂಘಟನೆಯೊಳಗಿನ ಪ್ರತಿಯೊಂದು ಘಟಕವು ಜನತೆಯೊಡನೆ ಸಂಪರ್ಕವನ್ನಿಟ್ಟುಕೊಳ್ಳಬೇಕು. ಜನರ ಮತ್ತು ಹೋರಾ ಡುವವರ ನಡುವಿನ ಸಂಬಂಧವು ಅಳಿದುಹೋಗದಂತೆ ಎಚ್ಚರದಿಂದಿರ ಬೇಕು. ಈ ಸಂಬಂಧವೆಂದರೆ ಪ್ರಚಾರಕಾರ್ಯ. ಈ ಪ್ರಚಾರಕಾರ್ಯ ವನ್ನು ಬಾಯಿಯಿಂದಲೂ ಬರಹದಿಂದಲೂ ಸಾಗಿಸಬೇಕು; ಹಸ್ತಪತ್ರಿಕೆ, ಚಿಕ್ಕಚಿಕ್ಕ ಹೊತ್ತಗೆ ಮತ್ತು ಆಕಾಶವಾಣಿಯ ಮೂಲಕ ಸಾಗಿಸಬೇಕು. ಹೋರಾಡುವವರ ಗುಂಪುಗಳು ಹಳ್ಳಿಹಳ್ಳಿಗೆ ಹೋಗಿ ಜನರನ್ನು ಕಂಡು ಮಾತಾಡಿ, ಅವರೊಡನೆ ಸ್ನೇಹ ಸಂಬಂಧಗಳನ್ನು ಬೆಳೆಸಿಕೊಳ್ಳಬೇಕು. ಇದಕ್ಕೆ ಅವಶ್ಯವಾದ ಸಾಹಿತ್ಯವನ್ನು ಬರೆಯುವಷ್ಟೇ ಮಹತ್ವವು ಅದನ್ನು ಹಂಚುವುದರಲ್ಲಿಯೂ ಇದೆ. ಈ ಇಬ್ಬಗೆಯ ಕೆಲಸಕ್ಕೂ ಗಮನಕೊಡ ಬೇಕು. ಪ್ರಚಾರಕಾರ್ಯದ ಕ್ಷೇತ್ರವನ್ನು ಚೆನ್ನಾಗಿ ಅಭ್ಯಸಿಸಬೇಕು. ನಮ್ಮ ಅಭಿಪ್ರಾಯಗಳು ವಿದ್ಯಾರ್ಥಿಗಳು, ಕೂಲಿಕಾರರು, ಅಂಗಡಿಕಾರರು, ಒಕ್ಕಲಿಗರು ಮುಂತಾದವರ ವರೆಗೆ ಹೋಗಿ ಮುಟ್ಟುವುದಲ್ಲದೆ ಸರಕಾರದ ಕೆಲಸದಲ್ಲಿದ್ದವರನ್ನೂ, ದಂಡು ಮತ್ತು ಪೋಲೀಸರೊಳಗಿನ ಕೆಳತರಗತಿ ಯವರನ್ನೂ ಪ್ರಚೋದಿಸುವಂತೆ ಯತ್ನಿಸಬೇಕು. ಪರದೇಶಗಳಲ್ಲಿ ಪ್ರಚಾ ರವೂ ನಮ್ಮ ಕಾರ್ಯಕ್ಷೇತ್ರದ ಅಂಗವಾಗಿರಬೇಕು.

ಪ್ರಚಾರ ಕಾರ್ಯವು ಬರಿಯ ಪ್ರಚಾರಕಾರ್ಯವಲ್ಲ; ಅದು ನಮ್ಮ ಹೋರಾಟದ ಒಂದು ರೀತಿ. ಯಾಕೆಂದರೆ ಒಂದು ಬಾನುಲಿಯ ಕೇಂಗ

ನಡೆಸುವುದು, ಕಾಯಿದೆಗೆ ವಿರುದ್ಧವಾದ ಒಂದು ಹಸ್ತಪತ್ರಿಕೆಯನ್ನು ಪ್ರಕಟಿಸುವುದು, ಪ್ರತಿಬಂಧವಿದ್ದಲ್ಲಿ ಸಭೆಗಳನ್ನು ಏರ್ಪಡಿಸುವುದು, ಕಾಯಿದೆಗೆ ವಿರುದ್ಧವಾದ ಭಾಷಣ, ಇದೆಲ್ಲವೂ ನಮ್ಮ ಸ್ವಾತಂತ್ರ್ಯ ಹರಣದ ವಿರುದ್ಧ ಪ್ರತಿಭಟನೆ ಮಾತ್ರವಲ್ಲದೆ ಒಂದು ಬಗೆಯ ಹೋರಾಟವೇ ಸರಿ.

ಇದಕ್ಕಿಂತಲೂ ಹೆಚ್ಚಿಗೆ ನಾವು ಮಾಡಬೇಕಾದುದೇನು ? ಸ್ಪಷ್ಟವಾಗಿ ಹೇಳುವುದಾದರೆ ಅಂತರ್‌ರಾಷ್ಟ್ರೀಯ ಪರಿಸ್ಥಿತಿಯಲ್ಲಿ ಬದಲಾವಣೆಯಾಗದಿದ್ದರೆ—ಎಂದರೆ ರಶಿಯ ಜರ್ಮನಿಯ ನಡುವೆ ಒಪ್ಪಂದ, ಚೀನ ಜಪಾನ್ ನಡುವೆ ಶಾಂತಿ, ಬ್ರಿಟಿಷ್ ಸೈನ್ಯಕ್ಕೆ ವಿಷಮಪರಿಸ್ಥಿತಿ, ಭಾರತವೇ ರಣಭೂಮಿಯಾಗುವುದು ಇಂತಹ ಯಾವುದೂ ನಡೆಯದಿದ್ದರೆ—ನಾವು ಯಾವ ದೊಡ್ಡ ಕಾರ್ಯವನ್ನು ಮಾಡುವುದೂ ಸಾಧ್ಯವಿಲ್ಲ. ಹೋರಾಡುವವರು ಆತ್ಮವಂಚನೆಮಾಡಿಕೊಳ್ಳುವುದರಲ್ಲಿ ಪ್ರಯೋಜನವಿಲ್ಲ. ತೀವ್ರ ಫಲಾಪೇಕ್ಷೆ ಇಲ್ಲದೆ ಹಾಗೆಯೇ ಹೋರಾಡುತ್ತ ಮುಂದೆ ಸಾಗುವವರಿಗೆ ಗೆಲುವು ಖಂಡಿತ. ಹೋರಾಟದಲ್ಲಿ ಹಿಂದೆ ಉಳಿದವರು ತಮ್ಮ ಸ್ಥಾನಗಳಿಂದ ಓಡಿಹೋದಂತಾಗುವುದು—ಮಹಾ ಚಾಣಾಕ್ಷರಂತೆ, ರಾಜನೀತಿಜ್ಞರಂತೆ ಬಡಬಡಿಸಿದಂತಾಗುವುದು. ಆದರೆ ಇವರೆಲ್ಲ ಕರ್ತವ್ಯ ಪರಾನ್ಮುಖರೆಂದೂ ಪುಕ್ಕರೆಂದೂ ದೃಢವಿಶ್ವಾಸವಿಲ್ಲದವರೆಂದೂ ಧೈರ್ಯಗೇಡಿಗಳೆಂದೂ ಇತಿಹಾಸವು ಸಾರುವುದು. ಸತ್ಯಾಗ್ರಹದ ಮೂಲಕ, ಸಂಪಿನ ಮೂಲಕ, ಇಲ್ಲವೆ ವ್ಯಾಪಾರ ವ್ಯವಹಾರಗಳಲ್ಲಿ ಅಸ್ತವ್ಯಸ್ತತೆಯನ್ನು ಹುಟ್ಟಿಸುವ ಮೂಲಕ ನಾವು ಪ್ರತೀಕಾರವನ್ನೊಡ್ಡಿದರೆ ಅದು ವಿಫಲವಾಗುವುದೆಂದು ಕೆಲ ಮಿತ್ರರು ಖಿನ್ನರಾಗಿದ್ದಾರೆ. ಇಂಥ ಪ್ರತೀಕಾರದ ಶಕ್ತಿ ಬ್ರಿಟಿಷ್ ಆಡಳಿತವನ್ನು ಕುಂದಿಸಲು ಸಮರ್ಥವಾಗುವುದಿಲ್ಲವೆಂಬುದು ನಿಜ. ಆದರೆ ಇದರ ಪರಿಣಾಮವು ಉಪಯುಕ್ತವಾದ ಮತ್ತೊಂದು ರೀತಿಯಲ್ಲಿ ಆಗದಿರದು. ಇದು ಅತಿ ಪರಿಣಾಮಕಾರಿಯಾದ ಪ್ರಚಾರಕಾರ್ಯವಾಗಬಲ್ಲುದು. ಇದರಿಂದ ಜನತೆಯ ಧೈರ್ಯ ಸ್ಥೈರ್ಯಗಳು ಕುಗ್ಗದೆ ಸ್ಥಿರವಾಗಿ ಉಳಿಯುವವು. ಇದಕ್ಕಿಂತಲೂ ಹೆಚ್ಚಿನ ಕಾರ್ಯವಾಗಬಹುದೆಂಬ ಆಸೆ ಇದರಿಂದ ಅಂಕುರಿಸುವುದು. ಹೋರಾಡುವವರಿಗೆ ಇದರಿಂದ ಯೋಗ್ಯ ಶಿಕ್ಷಣ ದೊರೆಯುವುದು. ಅಲ್ಪ ಪ್ರಮಾಣದಲ್ಲಿಯೇ ಆಗಲಿ—ಹೋರಾಟವು ಮುಂದೆ

ಸಾಗುವುದಲ್ಲದೆ ನಮ್ಮನ್ನು ಸದೆಬಡೆಯುವ ಪ್ರಯತ್ನವು ನಿಷ್ಫಲವಾಯಿತೆಂದು ಶತ್ರುವಿಗೆ ಮನವರಿಕೆಯಾಗುವುದು. ಮುಂಬರುವ ಪರಿಣಾಮಕಾರಿಯಾದ ಪ್ರತೀಕಾರಕ್ಕೆ ಇದು ಸಹಾಯಕಾರಿಯಾಗುವುದು. ಆದುದರಿಂದ ನಮಗೆ ಸರಿದೋರಿದ ರೀತಿಯಿಂದ ಬ್ರಿಟಿಷರ ಸಾಮರ್ಥ್ಯವನ್ನು ಎದುರಿಸಲು ನಾವು ಸಿದ್ಧರಿರಬೇಕು.

ಸಂಘಟನೆ, ಪ್ರಚಾರಕಾರ್ಯ, ಪ್ರತೀಕಾರ ಇವು ನಮ್ಮ ಕನಿಷ್ಠ ಮಟ್ಟದ ಕಾರ್ಯಕ್ರಮವೆಂದು ನನ್ನ ಅಭಿಪ್ರಾಯ. ನಾವು ಎಲ್ಲರನ್ನೂ ಕೆಲಸಕ್ಕೆ ಸಜ್ಜುಗೊಳಿಸಬೇಕಾದ ವಿಶಾಲ ಕಾರ್ಯಕ್ಷೇತ್ರವಿದೆ. ವಿದ್ಯಾರ್ಥಿಗಳೊಡನೆ, ಕೂಲಿಕಾರರೊಡನೆ ಸಂಪರ್ಕ ಬೆಳೆಯಬೇಕು. ದಂಡಿನೊಡನೆ, ಸರಕಾರದ ಸೇವಕರೊಡನೆ ನಮ್ಮ ಸಂಬಂಧ ಬೆಳೆಯಬೇಕು. ಸರಕಾರದ ಕೆಲಸವು ಸುಗಮವಾಗಿ ನಡೆಯದಂತೆ ನಾವು ಪ್ರಯತ್ನಿಸಬೇಕು. ಆಗಸ್ಟ ೯ ರಿಂದ ತಲೆದೋರಿದ ಪ್ರತೀಕಾರವನ್ನು ನಾವು-ಅದಕ್ಕೂ ಹೆಚ್ಚಿನ ಪ್ರಮಾಣದಲ್ಲಿ ಸುವ್ಯವಸ್ಥಿತವಾಗಿ ಸಾಗಿಸಬೇಕು. ಅದೇ ನಮ್ಮ ಧ್ಯೇಯವಾಗಿರಬೇಕು ಪ್ರತಿಯೊಂದು ಹೆಜ್ಜೆ ನಮ್ಮನ್ನು ನಮ್ಮ ಧ್ಯೇಯದೆಡೆಗೆ ಕರೆದೊಯ್ಯಬೇಕು.

ನಾನು ಆಹಾರ ಪರಿಸ್ಥಿತಿಯನ್ನು ಕುರಿತು ಒಂದೆರಡು ಮಾತುಗಳನ್ನು ಹೇಳಬೇಕೆನ್ನುತ್ತೇನೆ. ಅದು ಎಷ್ಟು ಭೀಕರವಾಗಿದೆ ಎಂಬುದನ್ನು ನಾನೇನೂ ಹೇಳಬೇಕಾದುದಿಲ್ಲ. ಅದು ಎಲ್ಲರಿಗೂ ಚೆನ್ನಾಗಿ ತಿಳಿದ ಮಾತು. ಆದರೆ ಈ ಪರಿಸ್ಥಿತಿಯನ್ನು ಹೋಗಲಾಡಿಸಲು ಸ್ವರಾಜ್ಯದ ಆಡಳಿತವೇ ಅವಶ್ಯವೆಂಬುದು ಮಾತ್ರ ನಮಗೆ ಇನ್ನೂ ತಿಳಿದಿಲ್ಲ. ಬ್ರಿಟಿಷರು ಕೊಂಚಮಟ್ಟಿಗೆ ತಿಳಿಗೇಡಿತನದಿಂದಲೂ ಬಹುಮಟ್ಟಿಗೆ ಬುದ್ಧಿಪೂರ್ವಕವಾಗಿಯೂ ಇಂಥ ಪರಿಸ್ಥಿತಿಯನ್ನು ನಿರ್ಮಿಸಿದ್ದಾರೆ. ಅವರು ಇಲ್ಲಿರುವ ವರೆಗೆ ನಾವು ಬರಿ ಹೊಟ್ಟೆಯಿಂದ ಸಾಯಲೇಬೇಕಾಗಿದೆ. ಆದುದರಿಂದ ಸ್ವಾತಂತ್ರ್ಯದ ಹೋರಾಟವೆಂದರೆ ಆಹಾರದ ನಿಜವಾದ ಹೋರಾಟ. ಇಷ್ಟೇ ಹೇಳಿದರೆ ಸಾಲದು. ಆಹಾರದ ಹೋರಾಟವು ಸ್ವಾತಂತ್ರ್ಯ ಸಂಗ್ರಾಮದ ಒಂದು ಅಂಗವೂ ಆಗಬೇಕು. ಈಗಿನ ಇಂತಹ ಸಂದರ್ಭದಲ್ಲಿ ಸಾರ್ವಜನಿಕರು ಕೊಡುಗೈ ದೊರೆಗಳಾದರೆ ಮಾತ್ರ ಆಹಾರ ಸಮಸ್ಯೆ ಕೊನೆಗೊಳ್ಳಬಹುದು. ಪರರ

ದಾನದ ಬಲದಿಂದ ಬದುಕುವುದನ್ನು ಸಾಮ್ಯವಾದಿಯಾದ ನಾನು ಶಾಸ್ತ್ರೀಯ ವಾಗಿ ಹಳಿದರೂ, ಇಂಥ ಸಂದರ್ಭದಲ್ಲಿ, ಹಸಿವೆಯಿಂದ ಸಾಯುವವರನ್ನು ತಮ್ಮ ತ್ಯಾಗಬುದ್ಧಿಯಿಂದ ಉಳಿಸಲು ಪ್ರಯತ್ನಿಸುವ ವಿಶಾಲಹೃದಯದ ಮಹನೀಯರನ್ನು ಕೊಂಡಾಡದಿರಲಾರೆ. ಇಂಥ ಸಾರ್ವಜನಿಕ ಪ್ರಯತ್ನವು ಶ್ಲಾಘನೀಯವಾದುದು. ಆದರೆ ಬರಿಯ ದಾನದಿಂದ ಈ ಕೆಲಸ ಮುಗಿ ಯುವಂತಿಲ್ಲ. ಇಂಥ ಪರಿಸ್ಥಿತಿಗೆ ಕಾರಣವಾದ ಪರಕೀಯ ಸರಕಾರದ ವಿಷಯದಲ್ಲಿ ಜನತೆಗೆ ಅಸಂತುಷ್ಟಿಯೂ ದ್ವೇಷವೂ ಹುಟ್ಟುವಂತೆ ಮಾಡಲು ಕೆಲಸಗಾರರು ಯತ್ನಿಸಬೇಕು. ಹಸಿವೆಯಿಂದ ಬಳಲುತ್ತಿರುವ ಜನತೆ ಸರಕಾರದ ಆಡಳಿತೆಯು ಸುಖವಾಗಿ ಸಾಗದಂತಹ ಪರಿಸ್ಥಿತಿಯನ್ನು ನಿರ್ಮಿಸ ಬೇಕು. ಆಹಾರವು ಎಲ್ಲಿಯೇ ಸಿಕ್ಕಲಿ, ಅಲ್ಲಿಂದ ಅದನ್ನು ದೊರಕಿಸುವಂತೆ ನಾವು ಅವರಿಗೆ ನೆರವಾಗಬೇಕು. ಹಳ್ಳಿಗಳಿಂದ ಕಾಳು ಹೊರಗೆ ಹೋಗ ದಂತೆಯೂ ಪಂಚರ ಮುಖಾಂತರ ಅದನ್ನು ಅಲ್ಲಿಯೇ ಎಲ್ಲರಲ್ಲಿ ಹಂಚು ವಂತೆಯೂ ಪ್ರಯತ್ನಿಸಬೇಕು. ಸರಕಾರದ ಸಂಗ್ರಹಗಳಿಂದ ಕಾಳನ್ನು ಸೆಳೆದು ಕೊರತೆಯಿದ್ದವರಿಗೆ ಒದಗಿಸಬೇಕು. ಸರಕಾರವು ಬೆಳೆಯನ್ನು ಒತ್ತಾಯದಿಂದ ಕಸಿದುಕೊಳ್ಳುವುದನ್ನು ವಿರೋಧಿಸಬೇಕು. ಪಟ್ಟಣ ಗಳಲ್ಲಿಯೂ ಅಷ್ಟೆ—ಹೊಟ್ಟೆಗಿಲ್ಲದವರ ಹಸಿವು, ಕ್ರೋಧ ದ್ವೇಷಗಳ ರೂಪ ದಿಂದ ಆಳರಸರ ಮುಂದೆ ತಾಂಡವವಾಡಬೇಕು. ಸ್ವಾತಂತ್ರ್ಯಯೋದ್ಧರು ತಮ್ಮ ಕಾರ್ಯಕ್ರಮವೇನೆಂದು ನನ್ನನ್ನು ಯಾವಾಗಲೂ ಕೇಳುತ್ತಾರೆ. ನಮ್ಮ ಮುಂದಿರುವ ಕಾರ್ಯಕ್ರಮವೆಂದರೆ ಇದೇ. ಕುದಿಯುತ್ತಿರುವ ಇಂತಹ ದ್ವೇಷದ ಅಗ್ನಿಕುಂಡದಲ್ಲಿ ಸರಕಾರವು ಕುದಿದು ಬೆಂದುಹೋಗ ದಿರದು.

ಸಂಘಟನೆಯ ವಿಷಯದಲ್ಲಿ ನಾನು ಮಾತನಾಡಿದ್ದು ಕಾಂಗ್ರೆಸ್ಸನ್ನು ಕುರಿತು ಮಾತ್ರ. ಕಾಂಗ್ರೆಸ್ಸಿನ ನಿರ್ಬಂಧಗಳಿಗೆ ಒಳಗಾಗುವ ಮನಸ್ಸಿಲ್ಲ ದವರು ಬೇರೆ ಸಂಘಟನೆಗಳನ್ನೂ ಚಟುವಟಿಕೆಗಳನ್ನೂ ಯೋಜಿಸಿಕೊಳ್ಳ ಬಹುದು. ಇದಕ್ಕಾಗಿ ನಾನು ಕೂಟಯುದ್ಧಗಳ ರೀತಿಯನ್ನು ಈಗಾಗಲೇ ಸೂಚಿಸಿದ್ದೇನೆ. ಇಂತಹ ಕೆಲಸವು ಕೂಡ ಈಗ ಎಷ್ಟೋ ಮಟ್ಟಿಗೆ ನಡೆದಿದೆ. ಈ ವಿಷಯದಲ್ಲಿ ಇದಕ್ಕಿಂತ ಹೆಚ್ಚಿಗೆ ಹೇಳುವುದು ನನಗೆ ಸಾಧ್ಯವಿಲ್ಲ.

ಹೆಚ್ಚಿನ ತಿಳಿವಳಿಕೆ ಬೇಕಾದವರು ಈಗಾಗಲೇ ಸ್ಥಾಪಿತವಾದ ಇಂತಹ ಸಂಘಟನೆಗಳೊಂದಿಗೆ ಸಂಪರ್ಕಬೆಳಸಿಕೊಳ್ಳಬಹುದು.

ಗೆಳೆಯರೇ, ಈ ಕೆಲವೊಂದು ಮಾತುಗಳಿಂದ ನನ್ನ ಹೇಳಿಕೆಯನ್ನು ಮುಗಿಸುತ್ತೇನೆ. ಈಗಿನ ಪರಿಸ್ಥಿತಿಯನ್ನು ನಿರ್ವಿಕಾರವಾಗಿ, ಸ್ಪಷ್ಟವಾಗಿ ನಿಮ್ಮ ಮುಂದಿರಿಸಿದೆ. ಇದರಲ್ಲಿ ಗ್ರಾಹ್ಯವಾದುದು ಯಾವುದೆಂಬುದನ್ನು ನೀವೇ ನಿರ್ಧರಿಸಬೇಕು. ನಾನು ಯಾವಾಗಲೂ ನಿಮ್ಮ ಅಡಿಯಾಳು. 'ಮಾಡು ಇಲ್ಲವೆ ಮಡಿ' ಎಂಬುದು ನಿಮಗೆ ಹೇಗೋ ಹಾಗೆ ನನಗೂ ಮಾರ್ಗದರ್ಶಿಯಾಗಿದೆ. ಆದುದರಿಂದ ನಾವು ಮಾಡೋಣ ಇಲ್ಲವೆ ಮಡಿಯೋಣ.

ಭಾರತದ ಒಂದು ಅಜ್ಞಾತ ಸ್ಥಳ.
೧ನೇ ಸಪ್ಟಂಬರ್ ೧೯೪೩

ಜಯಪ್ರಕಾಶ ನಾರಾಯಣ



## ೩

# ಭಾರತದಲ್ಲಿರುವ ಅಮೇರಿಕೆಯ ಅಧಿಕಾರಿಗಳಿಗೆ ಮತ್ತು ಸೈನಿಕರಿಗೆ

ಗೆಳೆಯರೇ,

ನಾನು ನನ್ನ ದೇಶದ ತರುವಾಯ ಅಮೇರಿಕೆಯನ್ನೇ ಹೆಚ್ಚಾಗಿ ಪ್ರೀತಿಸುವವರಲ್ಲಿ ಒಬ್ಬನು ಎಂಬುದಾಗಿ ಈ ಕೆಲವು ಮಾತುಗಳನ್ನು ಹೇಳುತಿದ್ದೇನೆ. ನನ್ನ ತಾರುಣ್ಯದ ಅತ್ಯುತ್ತಮ ಭಾಗವನ್ನು—ಸುಮಾರು ಏಳು ವರುಷಗಳನ್ನು—ನಾನು ನಿಮ್ಮ ನಾಡಿನಲ್ಲಿ ಕಳೆದಿದ್ದೇನೆ. ನಾನು ಅಲ್ಲಿಗೆ

ಹೋದದ್ದು ವಿದ್ಯಾರ್ಥಿಯಾಗಿ. ಅಲ್ಲಿಯ ವಿಶ್ವವಿದ್ಯಾಲಯಗಳಿಂದಲೂ, ಸ್ವಾವಲಂಬಿಯಾಗುವುದಕ್ಕಾಗಿ ಕಾರಖಾನೆ ಹೊಲಗಳಲ್ಲಿ ದುಡಿಯುವುದರಿಂದಲೂ ನಾನು ಅನೇಕ ವಿಷಯಗಳನ್ನು ಕಲಿತುಕೊಂಡಿದ್ದೇನೆ. ಕ್ಯಾಲಿಫೋರ್ನಿಯಾ, ಅಯೋವಾ, ವಿಸ್ಕಾನ್ಸಿನ್ ಮುಂತಾದ ವಿಶ್ವವಿದ್ಯಾಲಯಗಳಲ್ಲಿ ಕಲಿತು, ಓಹಿಯೊ ವಿಶ್ವವಿದ್ಯಾಲಯದ ಪದವೀಧರನಾದೆ. ನಿಮ್ಮೊಳಗಿನ ಅನೇಕರು ಈ ವಿಶ್ವವಿದ್ಯಾಲಯಗಳ ಪದವೀಧರರಾಗಿರಬಹುದು. ಅಂತಹರಿಗೆ ನನ್ನ ಒಲುಮೆಯ ಪ್ರಣಾಮಗಳು.

ನಾನು ನಿಮ್ಮನ್ನು ಕುರಿತು ಮಾತನಾಡುತ್ತಿರುವುದು ಸ್ವಾತಂತ್ರ್ಯಪ್ರಿಯನೆಂದು, ಸ್ವಾತಂತ್ರ್ಯಕ್ಕಾಗಿ ನಿಮ್ಮಂತೆ ಪ್ರಾಣಾರ್ಪಣೆಗೆ ಸಿದ್ಧನಿರುವವನೆಂದು. ನಾನು ಸಮತಾವಾದಿಯಾದುದರಿಂದ, ಸಮಾಜದಿಂದ ಯುದ್ಧವನ್ನು ದೂರೀಕರಿಸುವುದು ಸಾಮ್ಯವಾದದಿಂದಲೇ ಸಾಧ್ಯವೆಂದು ನನ್ನ ಮತ. ನಮಗೆ ಗೆಲುವು ದೊರೆಯುವುದು ಅದರಿಂದಲೇ. ಈಗಿನ ಯುದ್ಧದ ಕೊನೆಗೆ ಉಂಟಾಗುವ ಶಾಂತಿಯ ಉದ್ದೇಶಗಳು ಇವೇ ಎಂದು ನಿಮ್ಮ ಅಧ್ಯಕ್ಷರು ಸಾರಿದ್ದಾರೆ.

ಯುದ್ಧಕೈದಿಯಾಗಿದ್ದ ನಾನು ಶತ್ರುವಿನ ಕೈಯಿಂದ ಸ್ವಶಕ್ತಿಯಿಂದ ತಪ್ಪಿಸಿಕೊಂಡು ಹೊರಗೆ ಬಂದಿದ್ದೇನೆ. ನಾನು ಹಜಾರೀಬಾಗ್ ಕೇಂದ್ರ ಕಾರಾಗೃಹದಿಂದ, ಸ್ವಾತಂತ್ರ್ಯದ ಕಾರ್ಯವನ್ನು ಹೆಚ್ಚು ರಭಸದಿಂದ ಮುಂದುವರಿಸಬೇಕೆಂದು ಹೊರಗೆ ಬಂದಿದ್ದೇನೆ. ನಾನು ತಪ್ಪಿಸಿಕೊಂಡು ಓಡಿಹೋದ ಅಪರಾಧಿಯೇನೋ ಎಂಬಂತೆ ನನ್ನ ಹಗೆ-ಬ್ರಿಟಿಷ್ ಸರಕಾರ-ನನ್ನನ್ನು ಹಿಡಿದು ಕೊಟ್ಟವರಿಗೆ ಪಾರಿತೋಷಕವನ್ನು ಇಟ್ಟಿದ್ದಾರೆ. ನಿಮ್ಮೊಳಗಿನ ಪ್ರತಿ ಒಬ್ಬನೂ ಶತ್ರುವಿನ ಸೆರೆಯಾಳಾಗಿ ಪ್ರಸಂಗವಶಾತ್ ತಪ್ಪಿಸಿಕೊಂಡು ಖಂಡಿತವಾಗಿಯೂ ಓಡಿಹೋಗಬಹುದು. ಆಗ ನಿಮ್ಮ ಗೆಳೆಯರೂ ದೇಶಬಾಂಧವರೂ ನಿಮ್ಮನ್ನು ವೀರರೆಂದು ಮನ್ನಿಸುವುದರಲ್ಲಿ ಸಂದೇಹವಿಲ್ಲ. ನಾನೇನೂ ವೀರನಲ್ಲ; ಆದರೆ ಅಪರಾಧಿಯೂ ಅಲ್ಲ. ನನ್ನ ಜನರ ಸ್ವಾತಂತ್ರ್ಯಕ್ಕಾಗಿ ದುಡಿಯಬೇಕೆಂಬುದೇ ನನ್ನ ಬಯಕೆ.

ಈಗ ಜಗತ್ತಿನಲ್ಲಿ ಅನೇಕರು ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಲಿದ್ದಾರೆ—ಮಡಿಯುತ್ತಲಿದ್ದಾರೆ. ಆದರೆ ಸ್ವಾತಂತ್ರ್ಯವೆಂಬ ಶಬ್ದವು ತೀರ

ಸಂದಿಗ್ಧವಾಗಿದೆಯೆಂದು ನನ್ನ ತಿಳಿವಳಿಕೆ. ನನ್ನ ಮಟ್ಟಿಗೆ ಸ್ವಾತಂತ್ರ್ಯವೆಂದರೆ ಒಂದು ವಾಸ್ತವಿಕವಾದ ವಸ್ತು. ಆಕಾಶದಲ್ಲಿ ಆಕಾಶವಾಣಿಯಿಂದ ಶಬ್ದವರ್ಣಿತವಾಗುವ ಕಾಲ್ಪನಿಕ ವಿಚಾರವಲ್ಲ-ಅದು. ಸ್ವಾತಂತ್ರ್ಯದ ಸ್ಪಷ್ಟ ಅರ್ಥವೆಂದರೆ ಮೊದಲು ನನ್ನ ದೇಶದ ವಿಮೋಚನೆ-ಬ್ರಿಟಿಷ್ ಆಡಳಿತದಿಂದ ಕೋಟಿಗಟ್ಟಲೆ ಜನರ ವಿಮೋಚನೆ.

ನೀವು ಸ್ವಾತಂತ್ರ್ಯಕ್ಕಾಗಿ ಹೋರಾಡುವ ದಂಡಾಳುಗಳು. ಈಗ ನಿಮಗೆ ನಮ್ಮ ದೇಶದೊಡನೆ ನಿಕಟಸಂಬಂಧವುಂಟಾಗಿದೆ. ಆದುದರಿಂದ ನೀವು ನಮ್ಮ ಸ್ವಾತಂತ್ರ್ಯದ ಹೋರಾಟವನ್ನು ಅರಿತುಕೊಳ್ಳುವುದೂ ಅನುಮತಿಸುವುದೂ ಅತ್ಯಗತ್ಯ.

ನಾಜೀ ಸುಳ್ಳುಗಳನ್ನು ನೀವೆಲ್ಲರೂ ಬಲ್ಲಿರಿ. ಡಾ. ಗೋಬೆಲ್ಸನೆಂದರೆ ಅಸತ್ಯದ ಮೂರ್ತಿ. ಆದರೆ ಸಾಮ್ರಾಜ್ಯವಾದಿಗಳಾದ ಚರ್ಚಿಲ್, ಅಮೆರಿ, ಹ್ಯಾಲಿಫಾಕ್ಸ್ ಮುಂತಾದವರ ಸೂಕ್ಷ್ಮ ಸುಳ್ಳುಗಾರಿಕೆಯ ಮಾದರಿಯನ್ನು ನೀವಿನ್ನೂ ಅರಿತಿಲ್ಲ. ಹಿಂದುಸ್ಥಾನವನ್ನು ಕುರಿತು ಕೊಂಚ ಯೋಚಿಸ ತೊಡಗಿದರೆ ಇವರ ವಿಚಿತ್ರ ಸುಳ್ಳುಗಳ ಅರಿವು ನಿಮಗುಂಟಾಗುತ್ತದೆ. ಮೊಟ್ಟಮೊದಲಿನ ಸುಳ್ಳೆಂದರೆ ಬ್ರಿಟಿಷರು ಭಾರತವನ್ನು ಸ್ವರಾಜ್ಯಕ್ಕಾಗಿ ಸಜ್ಜುಗೊಳಿಸುತ್ತಲಿದ್ದಾರೆಂದೂ ಹಿಂದೀಯರು ತಕ್ಕ ಅನುಭವವನ್ನು ಪಡೆದೊಡನೆ ಬ್ರಿಟಿಷರು ಇಲ್ಲಿಂದ ತಳಕೀಳುವರೆಂದೂ ಹೇಳುವುದು. ಎರಡನೆಯದೆಂದರೆ ಹಿಂದೀಯರಲ್ಲಿ ಐಕ್ಯವಾದೊಡನೆ ಬ್ರಿಟಿಷರು ಭಾರತಕ್ಕೆ ಸ್ವಾತಂತ್ರ್ಯವನ್ನು ಕೊಟ್ಟುಬಿಡುವರೆಂಬುದು.

ಇದಕ್ಕಿಂತ ದೊಡ್ಡ ಸುಳ್ಳು ಇತಿಹಾಸದಲ್ಲಿ ನಮಗೆ ಎಲ್ಲಿಯೂ ಸಿಗುವುದಿಲ್ಲ. ಇದು ಗೋಬೆಲ್ಸನ ಸುಳ್ಳುಗಳಂತೆಯೂ ಇಲ್ಲ; ಮದೋನ್ಮತ್ತ ನಾಜೀ ಆಡಳಿತಗಾರರ ಬಾಯಿಯಿಂದ ಬಂದ ಸುಳ್ಳುಗಳಂತೆಯೂ ಇಲ್ಲ. ಆದುದರಿಂದ ಇವು ನಿಮ್ಮ ಕಿವಿಗಳಿಗೆ ಕರ್ಕಶವಾಗಿ ಕೇಳುವುದಿಲ್ಲ. ಇವು ಬಹುಕಾಲದಿಂದ ನಡೆದು ಬಂದಂಥವು; ಬ್ರಿಟಿಷ್ ಸಂಸ್ಕೃತಿಯ ಮೆರುಗು ಬಳಿದುಕೊಂಡಂಥವು; ಮತ್ತು ದೊಡ್ಡ ದೊಡ್ಡ ಸರದಾರರ, ಸಿರಿವಂತರ ಬಾಯಿಯಿಂದ ಬಂದಂಥವು. ಆದುದರಿಂದ ಇವು ಕಾವ್ಯಮಯವಾಗಿಯೂ ಸಶಾಸ್ತ್ರೀಯವಾಗಿಯೂ ಕಾಣುತ್ತವೆ; ಮತ್ತು ಎಂಥ ಸರಳ ಮನಸ್ಸಿನ ಬ್ರಿಟಿಷರೂ ಇವುಗಳಿಗೆ ಬಲಿ ಬೀಳುತ್ತಾರೆ.

ಸಾಮ್ರಾಜ್ಯವಾದಿಗಳು ಹಿಂದುಳಿದ ರಾಷ್ಟ್ರಗಳಿಗೆ ಸ್ವಾತಂತ್ರ್ಯವನ್ನೀಯಲು ಹುಟ್ಟಿದ್ದಾರೆಂದು ಹೇಳುವುದು ಹುರುಳಿಲ್ಲದ ಮಾತು, ಸಾಮ್ರಾಜ್ಯಗಳು ಕೊಳ್ಳೆ, ಕೊಲೆ, ಸುಲಿಗೆಗಳನ್ನು ಮಾಡಲು ಹುಟ್ಟಿವೆ ಎಂಬುದನ್ನು ನೀವು ಬಲ್ಲಿರಿ. ನಿಮ್ಮ ದೇಶದ ಆಯುವ್ಯಯದ ಭವ್ಯವಾದ ಅಂಕೆ ಸಂಖ್ಯೆಗಳನ್ನು ನೋಡಿದ ನಿಮ್ಮನ್ನೂ ಭಾರತದ ಸುಲಿಗೆಯ ಅಂಕೆ ಸಂಖ್ಯೆಗಳು ದಂಗುಗೊಳಿಸುತ್ತವೆ.

ಬ್ರಿಟಿಷರು ಬರುವುದಕ್ಕಿಂತ ಮೊದಲು ಭಾರತವು ಸ್ವತಂತ್ರವಾಗಿತ್ತು; ಅದು ಆಡಳಿತದ ಪಾಠಗಳನ್ನು ಯಾರಿಂದಲೂ ಕಲಿಯುವ ಅಗತ್ಯವಿರಲಿಲ್ಲ. ಆಗ ದೇಶದಲ್ಲಿ ಅಲ್ಲಲ್ಲಿ ಸಣ್ಣ ಪುಟ್ಟ ಹೋರಾಟಗಳು ನಡೆದದ್ದೇನೋ ನಿಜ. ಆದರೆ ಅದು ಭಾರತೀಯರಿಗೆ ಆಡಳಿತದ ರೀತಿನೀತಿಗಳು ಗೊತ್ತಿರಲಿಲ್ಲವೆಂದು ಸೂಚಿಸಲಾರದು. ಹಾಗಿದ್ದರೆ ಇಂದು ಯುರೋಪ್ ಖಂಡವೆಲ್ಲ ಯುದ್ಧಭೂಮಿಯಾಗಿದೆ. ಅಷ್ಟು ಮಾತ್ರಕ್ಕೆ ಯುರೋಪು ಆಡಳಿತಕ್ರಮದ ಪಾಠವನ್ನೆಲ್ಲ ಅಮೇರಿಕೆಯಿಂದ ಕಲಿತುಕೊಳ್ಳಬೇಕೆಂದು ಹೇಳುವುದು ಸರಿಯೆ? ಸ್ವಾತಂತ್ರ್ಯವನ್ನು ಕಸಿದುಕೊಂಡು ಆಮೇಲೆ ಸ್ವರಾಜ್ಯ ಸಂಪಾದನೆಯ ಪಾಠ ಹೇಳಿಕೊಡುತ್ತೇನೆಂದು ಜಂಬಕೊಚ್ಚಿಕೊಳ್ಳುವುದು ಇತಿಹಾಸ ತತ್ವಕ್ಕೆ ವಿರುದ್ಧವಾದುದು. ಇದು ಶುದ್ಧ ಸಾಮ್ರಾಜ್ಯವಾದಿಗಳ ಕೈವಾಡ. ಇಂಥ ಮಾತುಗಳನ್ನು ಸಾಮ್ರಾಜ್ಯವಾದಿಗಳಲ್ಲದೆ ಇನ್ನಾರೂ ಆಡರು.

ರಾಜ್ಯದ ಆಡಳಿತದಲ್ಲಿ ಬ್ರಿಟಿಷರು ನಮ್ಮನ್ನು ಹೇಗೆ ಪಳಗಿಸುತ್ತಿದ್ದಾರೆ? ಅವರು ಇಲ್ಲಿಗೆ ಬಂದು ೧೫೦ ವರುಷಗಳಾದುವು. ಇವರ ಕೈಯಲ್ಲಿಯೆ ಸಿಕ್ಕಿಕೊಂಡಿದ್ದ, ತೀರ ಹಿಂದುಳಿದ ವಸಾಹತುಗಳ ಗುಂಪಾಗಿದ್ದ ನಿಮ್ಮ ರಾಷ್ಟ್ರವು, ಸ್ವಾತಂತ್ರ್ಯವನ್ನು ಸಂಪಾದಿಸಿದ ಮೇಲೆ, ಇದಕ್ಕಿಂತ ಸ್ವಲ್ಪ ಅವಧಿಯಲ್ಲಿ, ಜಗತ್ತಿನೊಳಗಿನ ಅತಿಪ್ರಬಲ ಮತ್ತು ಮುಂದುವರಿದ ರಾಷ್ಟ್ರವಾಗಿ ರೂಪಾಂತರಹೊಂದಿತು. ಈ ಸುದೀರ್ಘಕಾಲದಲ್ಲಿ ಈ ಬ್ರಿಟಿಷ್ ಬುದ್ಧಿವಾದಿಗಳು ನಮಗೆ ಮಾಡಿದ ಹಿತವು ಯಾವುದೆಂಬುದನ್ನು ನೀವು ಕಂಡುಕೊಳ್ಳಬಹುದು. ನೂರಕ್ಕೆ ಹತ್ತಕ್ಕಿಂತ ಹೆಚ್ಚಿನವರಿಗೆ ಶಿಕ್ಷಣವಿಲ್ಲ. ದೇಶದ ಸಂಪತ್ತಿನ ಪ್ರಮಾಣವೂ ಅದಕ್ಕಿಂತ ಹೆಚ್ಚಾಗಿಲ್ಲ. ಯುದ್ಧಕಾಲದ ಈ ಮೂರು ವರ್ಷಗಳಲ್ಲಿ ಕೂಡ ಬ್ರಿಟಿಷರ ಬುದ್ಧಿವಾದವನ್ನು ಕೇಳು

ತ್ತಲಿರುವ ಭಾರತವು ಯುದ್ಧಕ್ಕೆ ಉಪಯುಕ್ತವಾದ ಸಾಮಾನುಗಳನ್ನೆಷ್ಟು ಹುಟ್ಟಿಸುತ್ತಿದೆಯೆಂಬುದನ್ನು ನೀವು ಬಲ್ಲಿರಿ. ಇದು ತೀರ ನಿಂದಾಸ್ಪದವಾಗಿದೆ. ಡಾ|| ಗ್ರೇಡಿಯವರ ನೇತೃತ್ವದಲ್ಲಿ ಅಮೆರಿಕೆಯ ಔದ್ಯೋಗಿಕ ಸಮಿತಿಯು ಭಾರತದ ಔದ್ಯೋಗಿಕ ನಿರ್ಮಾಣವನ್ನು ಕುರಿತು ಹೇಳಿದ ಮಾತುಗಳನ್ನು ಪ್ರಕಟಿಸಲು ಭಾರತ ಸರಕಾರಕ್ಕೆ ಧೈರ್ಯವಿಲ್ಲ. ರಾಜಕೀಯ, ಆರ್ಥಿಕ, ಶೈಕ್ಷಣಿಕ ಕ್ಷೇತ್ರಗಳಲ್ಲಾದ ಕಿಂಚಿತ್‌ಪ್ರಗತಿಯು ಕೂಡ ಜನತೆ ಬ್ರಿಟಿಷರ ವಿರುದ್ಧ ಹೋರಾಡಿದಾಗ ಮಾತ್ರ ಉಂಟಾಗಿದೆ. ಎಂದಮೇಲೆ ಬ್ರಿಟಿಷರು ನಮ್ಮ ಪ್ರಗತಿಗಾಗಿ ಎಷ್ಟೊಂದು ತವಕಪಡುತ್ತಿದ್ದಾರೆ ನೋಡಿರಿ! ಬ್ರಿಟಿಷರು ನಮ್ಮ ಕುತ್ತಿಗೆಗೆ ಹಾಕಿದ ಗಾಣದಿಂದ ಪಾರಾಗುವುದೇ ನಮ್ಮ ಕೊನೆಯ ಹೋರಾಟ.

ಕ್ರಿಪ್ಸ್ ಸಂಧಾನ ಮತ್ತು ಕ್ರಿಪ್ಸ್ ಕೊಡುಗೆಯ ಬಗೆಗೆ ಬಹಳ ಕೊಚ್ಚಿಕೊಳ್ಳುತ್ತಿದ್ದಾರೆ. ಆದರೆ ಕ್ರಿಪ್ಸ್ ಕೊಡಬಯಸಿದುದೇನು? ಯುದ್ಧಾನಂತರ ಸ್ವತಂತ್ರ ರಾಷ್ಟ್ರಗಳೊಡನೆ ಸರಿಸಮಾನತೆ—ಆದರೆ ಈಗಮಾತ್ರ ಏನೂ ಇಲ್ಲ. ವಚನ ಪಡೆಯುವುದರಲ್ಲಿ ಭಾರತಕ್ಕೆ ಆಸ್ಥೆ ಇಲ್ಲ. ನಮಗೆ ಸ್ವಾತಂತ್ರ್ಯ ಈಗಲೇ ಬೇಕಾಗಿದೆ. ಇದಕ್ಕೆ ಬ್ರಿಟಿಷ್ ಸಾಮ್ರಾಜ್ಯವಾದೀ ಪ್ರಚಾರಕರು "ನಿಮ್ಮಲ್ಲಿ ಒಕ್ಕಟ್ಟಿದ್ದರೆ ಮಾತ್ರ ನಿಮಗೆ ಸ್ವಾತಂತ್ರ್ಯ" ವೆನ್ನುತ್ತಿದ್ದಾರೆ.

ಒಂದು ರಾಷ್ಟ್ರವು ಇಬ್ಭಾಗವಾದ ಮಾತ್ರದಿಂದ ಅದರ ಸ್ವಾತಂತ್ರ್ಯವನ್ನು ಅಪಹರಿಸಲು ಅನ್ಯ ರಾಷ್ಟ್ರಕ್ಕೆ ಅಧಿಕಾರವೇನಿದೆ? ಇಬ್ಬರು ಸಹೋದರರು ಕಾದಾಡುತ್ತಿದ್ದರೆ, ಕಳ್ಳನು ಅವರ ಮನೆಹೊಕ್ಕು ಒಡೆಯನಾಗುವುದು ನ್ಯಾಯ ಸಮ್ಮತವೇ? ಬ್ರಿಟಿಷರು ಇಲ್ಲಿ ಕಳ್ಳನ ನೆಲೆಯಲ್ಲೇ ಇದ್ದಾರೆ. ಹಿಂದೂ ಮುಸಲ್ಮಾನರು ಕಾದಾಡುತ್ತಿರುವರೆಂದು ಯೋಚಿಸೋಣ. ಆದರೆ ಬ್ರಿಟಿಷರು ನಮ್ಮ ಮನೆಹೊಕ್ಕು ಅದನ್ನು ವಶಪಡಿಸಿಕೊಳ್ಳುವುದು ನ್ಯಾಯ ಸಮ್ಮತವೆ? ಕಾದಾಡುವವರ ಮನೆಯನ್ನು ಒಬ್ಬ ಕಳ್ಳನು ಹಸ್ತಗತಮಾಡಿಕೊಳ್ಳದಿದ್ದರೆ ಬೇರೊಬ್ಬನು ಮಾಡಿಕೊಳ್ಳುವನೆಂದು ಹೇಳುವ ವಿಚಾರಸರಣಿ ಕಳ್ಳರಿಗೆ ಮಾತ್ರ ಒಪ್ಪುವಂತಹದು. ಕಾವಲು ಇಲ್ಲದ ಮನೆಯನ್ನು ತಾನಲ್ಲದಿದ್ದರೆ ಮತ್ತೊಬ್ಬ ಸುಲಿಗೆಗಾರನು ವಶಪಡಿಸಿಕೊಳ್ಳಬಹುದೆಂಬ ಕಾರಣದಿಂದ ಅದನ್ನು ಯಾವ ಸಂಪನ್ನನೂ ಆಕ್ರಮಿಸಿಕೊಳ್ಳಲಾರನು.

ಬ್ರಿಟಿಷರ ಈ ಹೇಳಿಕೆಯಲ್ಲಿ ಎಳ್ಳಷ್ಟೂ ಸತ್ಯವಿಲ್ಲ. ಜನತೆಯಲ್ಲಿ ಐಕ್ಯವಿದ್ದರೂ ಅಷ್ಟೆ, ಇಲ್ಲದಿದ್ದರೂ ಅಷ್ಟೆ—ಬ್ರಿಟಿಷರು ಹಿಂದೀಯರಿಗೆ ನಿಜವಾದ ಅಧಿಕಾರವನ್ನು ಕೊಡಲು ಸಿದ್ಧರಿಲ್ಲ. ಬ್ರಿಟಿಷರ ಅಪೇಕ್ಷೆಯಂತೆ ಭಾರತೀಯರಲ್ಲಿ ಸಂಪೂರ್ಣ ಐಕ್ಯವಿದ್ದರೂ, ವೈಸ್ರಾಯ್ ಕೌನ್ಸಿಲ್ಲಿನ ಆಡಳಿತದ ಬದಲು ಜನತೆಗೆ ಹೊಣೆಯುಳ್ಳ ಮಂತ್ರಿಮಂಡಲವು ನಿರ್ಮಾಣವಾಗಿ ಅದರ ಕೈಯಲ್ಲಿ ಅಧಿಕಾರ ಸಿಕ್ಕೀತೆಂಬ ಆಸೆ ಕ್ರಿಪ್ಸ್ ಸಂಧಾನದಲ್ಲಿ ಮಣ್ಣುಗೂಡಿತು. "ರಾಷ್ಟ್ರೀಯ ಸರಕಾರ"ದಲ್ಲಿ ವೈಸ್‌ರಾಯನಿಗೂ ಅವನ ಕೌನ್ಸಿಲ್ ಸದಸ್ಯರಿಗೂ ಮತಭೇದವುಂಟಾದರೆ ಕೌನ್ಸಿಲ್ ಸದಸ್ಯರು ಬೇಕಾದಾಗ ರಾಜೀನಾಮೆಕೊಟ್ಟು ಹೊರಬೀಳಬಹುದೆಂದು ಸರ್ ಕ್ರಿಪ್ಸರು ಸ್ಪಷ್ಟೀಕರಿಸಿದರು. ಕ್ರಿಪ್ಸ್ ಕೊಡುಗೆಯಿಂದ ದೊರೆಯಬಹುದಾದ ಸ್ವಾತಂತ್ರ್ಯವೆಂದರೆ ಸಾಮ್ರಾಜ್ಯವಾದದ ಪ್ರತಿನಿಧಿಯಾದ ವೈಸ್‌ರಾಯನಿಗೂ ಜನತೆಯ ಪ್ರತಿನಿಧಿಗಳಾದ ಕಾರ್ಯಕಾರೀ ಮಂಡಲದ ಸದಸ್ಯರಿಗೂ ಭಿನ್ನಾಭಿಪ್ರಾಯವುಂಟಾದರೆ ಈ ಸದಸ್ಯರಿಗೆ ರಾಜೀನಾಮೆ ಕೊಡಲು ಸ್ವಾತಂತ್ರ್ಯವಿದೆ ಎಂಬುದಿಷ್ಟೇ ಸರಿ! ಇದೆಂಥ ಅಪರಿಮಿತ ಸ್ವಾತಂತ್ರ್ಯವೆಂಬುದನ್ನು ನೀವು ತಿಳಿದುಕೊಳ್ಳಬಹುದು.

ಸ್ವಾತಂತ್ರ್ಯಕ್ಕೂ ಭಾರತೀಯರ ಒಕ್ಕಟ್ಟಿಗೂ ಏನೂ ಸಂಬಂಧವಿಲ್ಲ. ನಮ್ಮ ದೃಷ್ಟಿ ಮುಖ್ಯವಿಷಯದಿಂದ ಬೇರೆ ಕಡೆಗೆ ಹೊರಳಬೇಕೆಂದೇ ಈ ಬಿಕ್ಕಟ್ಟಿನ ಪ್ರಶ್ನೆ ಮುಂದೆ ಬಂದಿದೆ. ತನ್ನ ಸಾಮ್ರಾಜ್ಯವು ಕರಗುವುದನ್ನು ಸಹಿಸಲು ಬ್ರಿಟನ್ನು ಸಿದ್ಧವಿದೆಯೋ ಎಂಬುದೇ ಮುಖ್ಯ ಪ್ರಶ್ನೆ. ಈ ಪ್ರಶ್ನೆಗೆ ಕ್ರಿಪ್ಸ್ ಸಂಧಾನದಿಂದ ದೊರೆಯುವ ಉತ್ತರ 'ಇಲ್ಲ' ಎಂದು. 'ನಾನು ಸಾಮ್ರಾಟರ ಮುಖ್ಯಮಂತ್ರಿಯಾದದ್ದು ಸಾಮ್ರಾಜ್ಯದ ದಿವಾಳಿಯ ಕಾರ್ಯಕ್ರಮಕ್ಕೆ ಅಧ್ಯಕ್ಷನಾಗಲಿಕ್ಕಲ್ಲ' ಎಂದು ಚರ್ಚಿಲ್ಲರು ಮೊನ್ನೆ ಮೊನ್ನೆ ಹೇಳಿದ ಮಾತುಗಳಿಂದ ಇದೇ ಸೂಚಿತವಾಗುತ್ತದೆ.

ಭಾರತಕ್ಕೆ ಸ್ವಾತಂತ್ರ್ಯಕೊಡಲು ಬ್ರಿಟನ್ನಿಗೆ ಒಪ್ಪಿಗೆ ಇದೆ ಎಂಬ ಮಾತಿನ ಒರೆಹತ್ತುವುದು ಬ್ರಿಟನ್ನಿನ ಸಿದ್ಧತೆಯಿಂದಲೇ ಹೊರತು ದೊಡ್ಡ ದೊಡ್ಡ ವಚನಗಳಿಂದಲ್ಲ. ವಚನಕೊಡುವುದೇನೋ ಬಹು ಸುಲಭ—ಆಳರಸರಿಗಂತೂ ಇಂತಹ ಬರಿಯ ದೊಡ್ಡ ದೊಡ್ಡ ವಚನಗಳಿಗೆ ಯುದ್ಧ

ಕಾಲವು ಒಂದು ದೊಡ್ಡ ಸುಸಂದರ್ಭ. ಹಿಂದಿನ ಯುದ್ಧದಲ್ಲಿ ಕೊಟ್ಟ ವಚನಗಳು ಎಷ್ಟರ ಮಟ್ಟಿಗೆ ಪರಿಪಾಲಿಸಲ್ಪಟ್ಟವೆಂಬುದನ್ನು ನೀವು ಬಲ್ಲಿರಿ. ಈಗಿನ ವಚನಗಳ ಹಣೆಬರಹವೂ ಇದೇ. ಯುದ್ಧಾನಂತರ ಸುಖಕರವಾದ ಜಗತ್ತು ನಿರ್ಮಿತವಾದರೆ, ಅದು ಈ ಆಳರಸರ ವಚನಗಳಿಂದಲ್ಲ—ಆದರೆ ನಮ್ಮ ನಿಮ್ಮ ಪ್ರಯತ್ನ [illegible]ವ ಎಂಬುದನ್ನು ಮರೆಯಕೂಡದು.

ಬ್ರಿಟಿಷರ ಸುಳ್ಳಿನ ಪರಿಮಿತಿಯನ್ನು ತೋರಿಸಲು ನಿಮಗೆ ಇನ್ನೆರಡು ದೃಷ್ಟಾಂತಗಳನ್ನು ಹೇಳುತ್ತೇನೆ. ಈ ವಿಷಯದಲ್ಲಿ ನಾವು ನಮ್ಮ ದೃಷ್ಟಿಯನ್ನು ಹಿಂದುಸ್ಥಾನ ಸರಕಾರದಿಂದ ಪ್ರಾಂತೀಯ ಸರಕಾರದೆಡೆಗೆ ಹೊರಳಿಸೋಣ. ಭಾರತದ ಅನೇಕ ಪ್ರಾಂತಗಳ ಆಡಳಿತವು ಇನ್ನೂ ಜನತೆಯ ಸರಕಾರದ ಕೈಯಲ್ಲಿದೆಯೆಂದು ಬಹಳವಾಗಿ ಕೊಚ್ಚಿಕೊಳ್ಳುತ್ತಾರೆ. ಆದರೆ ಈ ಪ್ರಾಂತಗಳಲ್ಲಿ ಯಾವ ತರದ ಸ್ವತಂತ್ರ ಸರಕಾರಗಳಿವೆ ಬಲ್ಲಿರಾ? ಸಿಂಧು ಪ್ರಾಂತದ ಮುಖ್ಯಮಂತ್ರಿ ಅಲ್ಲಾಬಕ್ಷರನ್ನು ಅಲ್ಲಿಯ ಗವರ್ನರ್ ಮನೆಗೆ ಕಳುಹಿಸಿದ. ಅವರ ತಪ್ಪೇನಿತ್ತು? ಅವರು ತಮ್ಮ 'ಖಾನ್‌ಬಹದ್ದೂರ್' ಬಿರುದನ್ನು ಬಿಟ್ಟುಕೊಟ್ಟು ಬ್ರಿಟಿಷರ ಭಾರತದ ಧೋರಣೆಯನ್ನು ಟೀಕಿಸಿ ವೈಸ್‌ರಾಯನಿಗೆ ಒಂದು ಪತ್ರ ಬರೆದಿದ್ದರು. ತನ್ನ ವಿಧಿಮಂಡಲದ, ತನ್ನ ಜನತೆಯ ವಿಶ್ವಾಸಕ್ಕೆ ಪಾತ್ರನಾದ ಒಬ್ಬ ಮುಖ್ಯಮಂತ್ರಿಯನ್ನು ಕೆಲಸದಿಂದ ತಳ್ಳಲು ಇದು ಒಬ್ಬ ಗವರ್ನರನಿಗೆ ಸಾಕಷ್ಟು ಕಾರಣವಾಯಿತು. ಬಂಗಾಲದಂಥ ದೊಡ್ಡ ಪ್ರಾಂತದಲ್ಲಿ ಬಹು ಯೋಗ್ಯತೆಯುಳ್ಳ, ಜನತೆಗೆ ಅತ್ಯಂತ ಪ್ರಿಯರಾಗಿದ್ದ ಮಂತ್ರಿ ಶಾಮಪ್ರಸಾದ ಮುಕರ್ಜಿಯವರು, ಆ ಪ್ರಾಂತದ ಗವರ್ನರನು ಅನಾವಶ್ಯಕವಾಗಿ ಆಡಳಿತದಲ್ಲಿಯೂ ಮಂತ್ರಿಗಳ ಧೋರಣೆಯಲ್ಲಿಯೂ ಕೈಹಾಕಿದ್ದನ್ನು ವಿರೋಧಿಸಿ ರಾಜೀನಾಮೆಕೊಟ್ಟರು. ಪ್ರಾಂತೀಯ ಸ್ವಾಯತ್ತತೆ ಅಪ್ರಯೋಜಕವಾದದ್ದೆಂದು ಸಾರ್ವಜನಿಕವಾಗಿ ಘೋಷಿಸಿದರು.

ಭಾರತದ ಸ್ವಾತಂತ್ರ್ಯಕ್ಕೆ ಭಾರತೀಯರಲ್ಲಿ ಒಕ್ಕಟ್ಟು ಅವಶ್ಯ ಎಂದು ಬ್ರಿಟಿಷರು ಈಗ ಹೇಳುತ್ತಲಿದ್ದಾರೆ. ಆಗಲಿ. ಬಂಗಾಲದಲ್ಲಿಯೂ ಸಿಂಧುವಿನಲ್ಲಿಯೂ ಒಕ್ಕಟ್ಟು ಇದ್ದೇ ಇತ್ತು. ಮಂತ್ರಿಮಂಡಲಕ್ಕೆ ಇಡಿಯ ಜನತೆಯ ಬೆಂಬಲವಿದ್ದಿತು. ಪ್ರತಿಪಕ್ಷಗಳಿದ್ದಿರಬಹುದಾದರೂ ಅದೇನು ಆಶ್ಚರ್ಯ

ವಲ್ಲ. ಪ್ರಜಾಪ್ರಭುತ್ವವಿದ್ದಲ್ಲೆಲ್ಲ ಪ್ರತಿಪಕ್ಷಗಳಿರುವುದು ಸ್ವಾಭಾವಿಕ. ಎಂದ ಮೇಲೆ ಇಷ್ಟು ಸಂಕುಚಿತಕ್ಷೇತ್ರದಲ್ಲಿಯೂ ಸ್ವಾಯತ್ತತೆಯನ್ನು ಏಕೆ ನಡೆಯು ಗೊಡಲಿಲ್ಲ? ಬ್ರಿಟನ್ನು ತನ್ನ ಸಾಮ್ರಾಜ್ಯದ ಭಾಗಗಳನ್ನು ಕಳೆದುಕೊಳ್ಳಲು ಸಿದ್ಧವಿಲ್ಲ ಎಂಬುದನ್ನು ತೋರಿಸಲು ಇದಕ್ಕಿಂತ ಹೆಚ್ಚಿಗೆ ಹೇಳುವ ಅಗತ್ಯವಿಲ್ಲ.

ಇಂಥ ಸಂದರ್ಭದಲ್ಲಿ ನಾವು ಮಾಡಬೇಕಾದುದೇನು? ಇಡಿಯ ಭಾರತವು ನಾಜೀವಾದಕ್ಕೂ ಫಾಸಿಸ್ಟ್‌ವಾದಕ್ಕೂ ವಿರೋಧಿಯಾಗಿದೆ. ಈ ಪಾಶವೀ ಪದ್ಧತಿಗಳಿಗೆ ವಿರುದ್ಧವಿರುವುದಾಗಿ ಕಾಂಗ್ರೆಸ್ಸೂ ಕಾಂಗ್ರೆಸ್ ಸಮತಾವಾದೀ ಪಕ್ಷವೂ ಘಂಟಾಘೋಷವಾಗಿ ಸಾರಿವೆ. ಈ ಯುದ್ಧವು ಆರಂಭವಾಗುವ ಮೊದಲೇ ಮತ್ತು ಪ್ರಜಾಪ್ರಭುತ್ವವಾದಿಗಳೆಂದು ಜಂಬಕೊಚ್ಚಿಕೊಳ್ಳುತ್ತಿರುವ ಎಷ್ಟೋ ರಾಷ್ಟ್ರಗಳು ಫಾಸಿಸ್ಟ್‌ವಾದವನ್ನು ವಿರೋಧಿಸುವ ಮೊದಲೇ, ರಾಷ್ಟ್ರೀಯ ಭಾರತವೂ ಸಮತಾವಾದೀ ಭಾರತವೂ ಜರ್ಮನಿ, ಇಟಲಿ, ಜಪಾನುಗಳ ವಿರುದ್ಧವಿರುವ ಸ್ಪೇನ್ ಪ್ರಜಾಪ್ರಭುತ್ವಕ್ಕೂ ಚಿಯಾಂಗನ ಚೀನ ಪ್ರಜಾಪ್ರಭುತ್ವಕ್ಕೂ ಬೆಂಬಲವಿತ್ತಿದ್ದವು. ಭಾರತವು ಸ್ವತಂತ್ರವಾಗಿದ್ದರೆ ಅದು ಈ ಅಂತರ್ ರಾಷ್ಟ್ರೀಯ ಚಿಕ್ಕಾಟದಲ್ಲಿ ಬಹು ಮಹತ್ವದ ಕೆಲಸವನ್ನು ಮಾಡಬಹುದಾಗಿದ್ದಿತು. ಭಾರತವು ನಡುವೆ ಕೈ ಹಾಕಿದ್ದರೆ ಈ ಯುದ್ಧವೇ ನಿಲ್ಲುವ ಸಂದರ್ಭವಿದ್ದಿತು—ಕೊನೆಯ ಪಕ್ಷಕ್ಕೆ ಏಶಿಯಕ್ಕೆ ಹಬ್ಬದಂತೆಯಾದರೂ ಪ್ರಯತ್ನಿಸಬಹುದಾಗಿದ್ದಿತು. ಸ್ವತಂತ್ರ ಭಾರತವೂ ಸ್ವತಂತ್ರ ಚೀನವೂ ಒಟ್ಟುಗೂಡಿದರೆ ಎಂಥ ದಾಳಿಯನ್ನೂ ಎದುರಿಸಬಲ್ಲುವು. ಈ ಎರಡೂ ಪ್ರಾಚೀನ ರಾಷ್ಟ್ರಗಳಿಗೆ ಕೂಡಿಕೊಂಡು ಕೆಲಸ ಮಾಡುವ ಸ್ವಾತಂತ್ರ್ಯವಿದ್ದರೆ ನಮ್ಮ ಕಾಲದ ಇತಿಹಾಸದ ರೀತಿಯೇ ಬೇರೆಯಾದೀತು.

ಫಾಸಿಸ್ಟ್‌ವಾದವನ್ನು ನಾವು ಸಂಪೂರ್ಣನಾಗಿ ವಿರೋಧಿಸುವಂತೆ ಸಾಮ್ರಾಜ್ಯವಾದವನ್ನೂ ವಿರೋಧಿಸುತ್ತೇವೆ. ಇನ್ನು ಸ್ವಲ್ಪಕಾಲವಾದರೂ ನಾವು ಅದಕ್ಕೆ ಅಡಿಯಾಳಾಗಿ ನಿಲ್ಲಲಾರೆವು. ಅದನ್ನು ಬೇರು ಕೊಂಬೆಗಳ ಸಹಿತವಾಗಿ ಕಿತ್ತು ಬಿಸಾಡುವೆವು. ತಾವು ಹೋರಾಡುತ್ತಿರುವುದು ಸಂತ್ರಸ್ತ ಜನರ ವಿಮೋಚನೆಗಾಗಿ ಎಂದು ಇವರು ಹೇಳಿಕೊಳ್ಳುತ್ತಿರುವಾಗ ನಮ್ಮ ವಿಮೋಚನೆಗಾಗಿ ನಾವು ಹೋರಾಡಲೇಬೇಕು. ನಮಗೆ ಸ್ವಾತಂತ್ರ್ಯವೇಕೆ

ಬೇಕು, ಅದಕ್ಕಾಗಿ ಹೋರಾಡುವ ಕಾರಣಗಳು ಯಾವುವು, ಎಂಬುದನ್ನು ನಾವು ಪರರಿಗೆ ತಿಳಿಸಿಕೊಡುವ ಅಗತ್ಯವಿಲ್ಲ.

ನಾವು ಬ್ರಿಟಿಷರ ವಿರುದ್ಧ ಯುದ್ಧಹೂಡಿದರೆ ಅಚ್ಚಿನ ರಾಷ್ಟ್ರಗಳೊಡನೆ ಹೋರಾಡುತ್ತಿರುವ ಮಿತ್ರರಾಷ್ಟ್ರಗಳ ಶಕ್ತಿ ಕುಗ್ಗಬಹುದೆಂದು ನೀವು ಸಂದೇಹಪಡಬಹುದು. ಹಾಗಿದ್ದರೆ ಅದರ ಹೊಣೆ ಇರುವುದು ನಮ್ಮ ಮೇಲಲ್ಲ, ಅವರ ಮೇಲೆ. ಮಿತ್ರರಾಷ್ಟ್ರಗಳು ಇದನ್ನು ಚೆನ್ನಾಗಿ ಯೋಚಿಸಬೇಕು. ನಮ್ಮ ಮಟ್ಟಿಗೆ ಹೇಳುವುದಾದರೆ ಮಿತ್ರರಾಷ್ಟ್ರಗಳಿಗೆ ಅಡ್ಡಿ ಆತಂಕಗಳನ್ನು ಒಡ್ಡುವ ಬಯಕೆ ನಮಗಿಲ್ಲ. ಆದರೆ ನಮ್ಮ ಸ್ವಾತಂತ್ರ್ಯದ ಹೋರಾಟ ಅವರಿಗೆ ಅಡ್ಡಬಂದರೆ ಅದನ್ನು ನಾವು ಲೆಕ್ಕಿಸುವುದಿಲ್ಲ. ತಾವು ಹೋರಾಡುತ್ತಿರುವುದು ಅಖಿಲ ಮಾನವವಂಶದ ಸ್ವಾತಂತ್ರ್ಯಕ್ಕಾಗಿ ಎಂದು ಅವರು ಹೇಳಿಕೊಳ್ಳುತ್ತಾರೆ. ಹಾಗಿದ್ದರೆ ಮಾನವವಂಶದ ಐದನೇ ಒಂದು ಭಾಗದ ಸ್ವಾತಂತ್ರ್ಯಸಮರವು ಅವರಿಗೇಕೆ ಅಡ್ಡಬರಬೇಕು? ಮಿತ್ರರಾಷ್ಟ್ರಗಳು ಜಂಬಕೊಚ್ಚುವುದರಲ್ಲಿ ತಥ್ಯಾಂಶವೇನಾದರೂ ಇದ್ದರೆ, ಭಾರತೀಯ ಸ್ವಾತಂತ್ರ್ಯ ಸಮರವು ಅವರಿಗೆ ಅಡ್ಡತಡೆಯನ್ನುಂಟುಮಾಡುವುದರ ಬದಲು ಸಹಾಯಕಾರಿಯಾಗಬೇಕು. ನಮ್ಮ ಸ್ವಾತಂತ್ರ್ಯಸಮರವು ಅವರಿಗೆ ಪ್ರತಿಕೂಲವೆನಿಸಿದರೆ, ಅವರು ಹೂಡಿದ ಯುದ್ಧದ ತಳಹದಿಯ ತತ್ವವೇ ದೋಷಯುಕ್ತವಾಗಿದೆಯೆಂಬುದು ಸ್ಪಷ್ಟ; ಅವರ ಮಾತಿಗೂ-ಕೃತಿಗೂ, ಧ್ಯೇಯಕ್ಕೂ-ಆಚರಣೆಗೂ ಮಹದಂತರವಿದೆಯೆಂಬುದು ಸ್ಪಷ್ಟ. ಆದುದರಿಂದ ನಮ್ಮ ಹೋರಾಟವು ನ್ಯಾಯಯುಕ್ತವಾದ ಶಾಂತಿಸ್ಥಾಪನೆಗೆ ಅವರಿಗೆ ಸಹಾಯಕವಾಗುತ್ತದೆ

ಆದುದರಿಂದ ಸ್ವಾತಂತ್ರ್ಯ ಸಮರದ ದಂಡಾಳುಗಳಾದ ನಿಮ್ಮ ಸಂಪೂರ್ಣ ಬೆಂಬಲವನ್ನು ಸ್ವಾತಂತ್ರ್ಯಕ್ಕಾಗಿ ಹೋರಾಡುವ ನಮಗೆ ಕೊಡಿರೆಂದು ಬೇಡಿಕೊಳ್ಳುತ್ತೇನೆ. ನೀವು ನಮಗೆ ನಿಮ್ಮ ಬೆಂಬಲವನ್ನು ಮೂರು ವಿಧವಾಗಿ ಕೊಡಬಹುದು. ಮೊದಲನೆಯದು, ಬ್ರಿಟನ್ನು ನಮ್ಮ ವಿರುದ್ಧವಾಗಿ ಹೂಡಿದ ಯುದ್ಧದಲ್ಲಿ ಸಹಕರಿಸಲು ನೀವು ಒಪ್ಪಬಾರದು. ಎರಡನೆಯದು, ಭಾರತದ ವಿಷಯದಲ್ಲಿ ನಿಮ್ಮ ಜನರಿಗೂ ಮುಂದಾಳುಗಳಿಗೂ ನಿಜವಾದ ಸಂಗತಿಗಳನ್ನು ತಿಳಿಸುವುದು. ನೀವು ಈಗ ನಮ್ಮೊಡನೆ ಇದ್ದೀರಿ.

ಆದುದರಿಂದ ನಮ್ಮಿಂದ ದೂರವಿರುವ ನಿಮ್ಮ ಜನಸಾಮಾನ್ಯರಿಗೆ ಇಲ್ಲಿಯ ವಸ್ತುಸ್ಥಿತಿಯನ್ನು ತಿಳಿಸಿಹೇಳುವುದು ನಿಮಗೆ ಸಾಧ್ಯವಿದೆ. ನಿಮ್ಮ ಜನತೆಯ ಬೆಂಬಲ ನಮಗೆ ದೊರೆಯುವಂತೆ ನೀವು ಯತ್ನಿಸಿದರೆ, ಸ್ವಾತಂತ್ರ್ಯದ ಹೋರಾಟವನ್ನು ನೀವು ಮುಂದುವರಿಸಿದಂತಾಗುತ್ತದೆ. ಮೂರನೆಯದು, ನೀವು ಬ್ರಿಟಿಷ್ ಸೈನಿಕರಿಗೂ ಅಧಿಕಾರಿಗಳಿಗೂ ಭಾರತದ ಬಗೆಗೆ ನಿಜವಾದ ಸಂಗತಿಗಳನ್ನು ತಿಳಿಸಿಹೇಳುವುದು. ಬ್ರಿಟಿಷ್ ಸೈನಿಕನು ಶೂರನೂ ಪ್ರಾಮಾಣಿಕನೂ ಇರುತ್ತಾನೆ. ವಸ್ತುಸ್ಥಿತಿಯನ್ನು ಅವನು ಅರಿತರೆ, ನಾವು ಕೈಕೊಂಡ ಕೆಲಸ ನ್ಯಾಯವಾದದ್ದೆಂಬುದನ್ನು ಮನಗಾಣುವನು. ಸದ್ಯಕ್ಕೆ ಅವನಿಗೆ ತಪ್ಪು ತಿಳಿವಳಿಕೆ ಉಂಟಾಗಿದೆ. ವರ್ಣದ್ವೇಷವೂ ಭಾರತದ ಬಗೆಗೆ ಅಜ್ಞಾನವೂ ಅವನಲ್ಲಿ ಮನೆಮಾಡಿಕೊಂಡಿವೆ. ಆದುದರಿಂದ ಅವನು ನಮಗೂ ತನಗೂ ಅಪಾಯವನ್ನು ತರುತ್ತಾನೆ. ಬ್ರಿಟಿಷ್ ಸೈನಿಕರಲ್ಲನೇಕರು ಸಾಮಾನ್ಯ ಕೆಲಸಗಾರರು. ಅವರೂ ಸಾಮ್ರಾಜ್ಯವಾದಿಗಳ ಸುಲಿಗೆಗೆ ತುತ್ತಾಗಿದ್ದಾರೆ. ಅವರ ಸಮಸ್ಯೆಯೂ ನಮ್ಮ ಸಮಸ್ಯೆಯೂ ಒಂದೇ ಎಂಬುದನ್ನು ಅವರು ಅರಿತುಕೊಳ್ಳುವುದವಶ್ಯ. ಸಾಮ್ರಾಜ್ಯವು ಒಡೆದುಹೋಗಿ ನಾಶವಾಗದಿದ್ದರೆ ಬ್ರಿಟಿಷ್ ಜನತೆಯೂ ಸುಲಿಗೆ ಬಡತನಗಳಿಂದ ಪಾರಾಗಲಾರದು. ಯುದ್ಧಾನಂತರದ ಹೊಸ ಸಮಾಜರಚನೆಯ ಮಾತು ಬ್ರಿಟನ್ನಿನಲ್ಲಿ ಈಗಲೇ ನಡೆದಿದೆ. ಆದರೆ ಸಾಮ್ರಾಜ್ಯದ ಹಳೆಯ ತಳಹದಿಯ ಮೇಲೆ ಹೊಸ ಪದ್ಧತಿಯನ್ನು ಕಟ್ಟಲು ಸಾಧ್ಯವಿಲ್ಲ.

ಆದುದರಿಂದ ಅವರು ಸಂಪತ್ತು ಸುಸಂಧಿ, ಅಧಿಕಾರ ಗೌರವ, ಸುಖಕರವಾದ ಜೀವನಕ್ಕೆ ಅವಶ್ಯವಾದ ಸೌಕರ್ಯ ಮುಂತಾದವು ಸಮಾನವಾಗಿ ವಿಭಾಗಿಸಲ್ಪಡಬಹುದಾದ ಹೊಸ ಜಗತ್ತನ್ನು ನಿರ್ಮಿಸಲು ಹೋರಾಡುತ್ತಿದ್ದರೆ, ಇದು ಆ ಹೋರಾಟದ ಸರಿಯಾದ ರೀತಿಯಲ್ಲವೆಂಬುದನ್ನು ಅವರಿಗೆ ತಿಳಿಹೇಳಿರಿ. ನಿರಪರಾಧಿ ಸ್ತ್ರೀಯರನ್ನೂ ಚಿಕ್ಕ ಮಕ್ಕಳನ್ನೂ ಗುಂಡಿನಿಂದ ಹೊಡೆಯುವುದರಿಂದಲೂ ಮನೆಮಾರುಗಳನ್ನು ಕೊಳ್ಳೆಹೊಡೆದು ಸುಲಿಯುವುದರಿಂದಲೂ ನಮ್ಮ ಸ್ವಾತಂತ್ರ್ಯಸಮರವನ್ನು ಸದೆಬಡೆಯಲು ಹವಣಿಸಿದರೆ ಅವರಿಗೂ ಸರ್ವಾಧಿಕಾರಿಗಳಿಗೂ ಭೇದವೇನಿದೆ? ಅವರ ವಿರುದ್ಧ ಹೋರಾಡುವ ಉದ್ದೇಶವಾಗಲಿ ಅವರಿಗೆ ಅಪಾಯಮಾಡುವ ಇಚ್ಛೆ

ಯಾಗಲಿ ನಮಗೆ ಇಲ್ಲವೆಂದು ಅವರಿಗೆ ತಿಳಿಹೇಳಿರಿ. ಬ್ರಿಟಿಷರಿಗೆ ಯಾವ ಕೇಡನ್ನೂ ಬಗೆಯುವುದಿಲ್ಲವೆಂದು ಹೇಳಿರಿ. ನಮ್ಮ ಗುರಿ, ನಮ್ಮ ಸ್ವಾತಂತ್ರ್ಯಕ್ಕೆ ವಿರೋಧಿಯಾದ ಸಾಮ್ರಾಜ್ಯವನ್ನು ಹೊಡೆದುಹಾಕುವುದು ಮಾತ್ರ. ನಾವು ಸ್ವತಂತ್ರರಾದ ಬಳಿಕ, ಎಂತಹ ಅನ್ಯಾಯದ ಆಘಾತವನ್ನು ಸದೆಬಡೆಯಲಿಕ್ಕೂ ಅವರೊಡನೆ ಭುಜಕ್ಕೆ ಭುಜಹಚ್ಚಿ ಮುಂದೆಸಾಗುವೆವು. ಹೊಸ ಜಗತ್ತಿನ ನಿರ್ಮಾಣ ಆಗ ಮಾತ್ರ ಆಗುವುದು. ಕೊನೆಯದಾಗಿ, ಬಿಚ್ಚು ಮನಸ್ಸಿನಿಂದ ಯೋಚಿಸಲು ಅವರಿಗೆ ಹೇಳಿರಿ. ಇದನ್ನೆಲ್ಲ ಕೇಳಿಯೂ ಅವರು ತಮ್ಮ ಆಳರಸರ ಸುಳ್ಳುಪ್ರಚಾರಕ್ಕೆ ಬಲಿಯಾಗಿ ಪಶುಗಳಂತೆ ನಡೆದರೆ ಅವರ ಹೋರಾಟ ವ್ಯರ್ಥವಾಗುವುದು. ಅವರ ಸಂತತಿಯೂ ಕೊಲೆ ಸುಲಿಗೆಗಳ, ಅಸಮತೆಯ, ಬಡತನದ, ಸಾವುನೋವುಗಳ ಜಗತ್ತನ್ನೇ ಕಾಣಬೇಕಾಗುವುದು.

ಗೆಳೆಯರೆ, ಇದು ನನ್ನ ಚಿಕ್ಕ ಬೇಡಿಕೆ. ಇದು ನಿಮ್ಮ ಅಂತರಂಗದಲ್ಲಿ ಬಿಂಬಿಸುವುದೆಂದು ನನ್ನ ಆಸೆ.

ಸ್ವಾತಂತ್ರ್ಯಸಮರವು ಚಿರಾಯುವಾಗಲಿ !
ಭಾರತೀಯ ಕ್ರಾಂತಿಯು ಚಿರಾಯುವಾಗಲಿ !

ಭಾರತದ ಒಂದು ಅಜ್ಞಾತಸ್ಥಳ. ಜಯಪ್ರಕಾಶ ನಾರಾಯಣ

೨

# ಸಾಮ್ಯವಾದವೇ ಏಕೆ ?

- ಸಾಮ್ಯವಾದ: ಸಾಮಾಜಿಕ ಪುನರ್ರಚನೆಯ ಒಂದು ಪದ್ಧತಿ.
- ಅಸಮತೆ: ಸಮಾಜದ ಒಂದು ಮುಖ್ಯ ಸಮಸ್ಯೆ.
- ದ್ರವ್ಯದ ನಿರ್ಮಾಣ ಮತ್ತು ಸಂಚಯ.
- ಈ ಸಮಸ್ಯೆಗೆ ಸಾಮ್ಯವಾದೀ ಪರಿಹಾರ.

# ಸಾಮ್ಯವಾದವೇ ಏಕೆ?

## ಸಾಮ್ಯವಾದ: ಸಾಮಾಜಿಕ ಪುನರ್ರಚನೆಯ ಒಂದು ಪದ್ಧತಿ

ಸಾಮ್ಯವಾದದ ಬಗೆಗೆ ಮೊಟ್ಟಮೊದಲು ನೆನಪಿನಲ್ಲಿಡತಕ್ಕ ಮಾತೆಂದರೆ, ಅದು ಸಾಮಾಜಿಕ ಪುನರ್ರಚನೆಯ ಒಂದು ರೀತಿ ಎಂಬುದು. ಸಾಮ್ಯವಾದವೆಂದರೆ ಒಬ್ಬ ವ್ಯಕ್ತಿಯ ನಡೆವಳಿಕೆಯನ್ನು ನಿಯಂತ್ರಿಸುವ ನಿಯಮಾವಳಿಯಲ್ಲ. ನಾನು ಅಥವಾ ನೀವು ರೂಢಿಯಲ್ಲಿ ತರಬೇಕಾದ ವಿಷಯವಲ್ಲ ಅದು. ಭಾರತಕ್ಕೆ ಸಾಮ್ಯವಾದವನ್ನು ಅನ್ವಯಿಸಬೇಕೆಂದು ಹೇಳಿದರೆ ಇಡೀ ದೇಶದ ಆರ್ಥಿಕ, ಸಾಮಾಜಿಕ ಪದ್ಧತಿಯನ್ನೇ ಪುನರ್ರಚಿಸಬೇಕೆಂದು ಅರ್ಥ. ದೇಶದಲ್ಲಿರುವ ಹೊಲ ಮನೆಗಳೂ ಕಾರಖಾನೆಗಳೂ ಶಾಲೆ ಕಾಲೇಜುಗಳೂ ನಾಟಕಮಂದಿರಗಳೂ ಈ ಪದ್ಧತಿಗೆ ಒಳಗಾಗಬೇಕು. ಒಂದು ಹಳ್ಳಿಯ, ಇಲ್ಲವೆ ಒಂದು ಕಾರಖಾನೆಯ ಜೀವನಕ್ರಮವನ್ನು ಸಾಮಾಜಿಕ ಪದ್ಧತಿಗನುಗುಣವಾಗಿ ನಡೆಸಬಹುದು. ಆದರೆ ಅದು ಸಾಮ್ಯವಾದವಾಗಲಾರದು. ಪ್ರಯೋಗಶಾಲೆಯ ಗೋಡೆಯ ಮೇಲೆ ಬಿದ್ದ ತ್ರಿಕೋಣಾಕೃತಿಯ ಲೋಲಕ (Prism) ದ ಛಾಯೆಯಲ್ಲಿ ಏಳು ಬಣ್ಣಗಳು ಕಾಣಬಹುದು. ಆದರೆ ಅದಕ್ಕೆ ಕಾಮನ ಬಿಲ್ಲು ಎನ್ನಲಾದೀತೇ?

ಆದ್ದರಿಂದ ಸಾಮ್ಯವಾದಕ್ಕನುಗುಣವಾದ ಸಮಾಜವನ್ನು ಕಟ್ಟುವವರು ಯೋಗ್ಯ ಅಧಿಕಾರ, ಶಕ್ತಿಯುಳ್ಳವರಾಗಿರಬೇಕಾಗುತ್ತದೆ. ಕೈಯಲ್ಲಿ ಅಧಿಕಾರವಿಲ್ಲದ ಯಾವ ಧ್ಯೇಯವಾದಿ ಗುಂಪೂ ಸಾಮ್ಯವಾದವನ್ನು ಕಟ್ಟಲಾರದು.

ಶಕ್ತಿ ಅಥವಾ ಅಧಿಕಾರವೆಂದರೇನು? ಒಂದು ಗುಂಪು, ಪಕ್ಷ ಇಲ್ಲವೇ ವ್ಯಕ್ತಿ, ತನ್ನ ಯೋಜನೆಯನ್ನು ಅಥವಾ ವಿಚಾರಸರಣಿಯನ್ನು ಒಂದು ಸಂಘ ಇಲ್ಲವೆ ರಾಷ್ಟ್ರದ ಮೇಲೆ ಪ್ರತಿಬಿಂಬಿಸಬೇಕಾದರೆ ಒಂದು ಸರಕಾರದ ಮುಖಾಂತರ ಮಾತ್ರ ಸಾಧ್ಯವೆಂಬುದನ್ನು ನಾವು ಇಂದಿನ ಜಗತ್ತನ್ನು ನಿರೀಕ್ಷಿಸಿದರೆ ಕಾಣಬಹುದು. ಸರಕಾರವು ನಿಮ್ಮ ಕೈಯಲ್ಲಿದ್ದರೆ ನೀವು

ಕಟ್ಟಳೆಗಳನ್ನು ಮಾಡಬಹುದು. ಪ್ರಚಾರಕಾರ್ಯಕ್ಕೆ ಅವಶ್ಯವಿದ್ದ ಸೌಕರ್ಯಗಳನ್ನೆಲ್ಲ ಉಪಯೋಗಿಸಿಕೊಳ್ಳಬಹುದು. ಶಿಕ್ಷಣದ ಮೂಲಕ ನಿಮ್ಮ ಧ್ಯೇಯವನ್ನು ಯುವಕರ ಮನಸ್ಸಿನಲ್ಲಿ ಪ್ರತಿಬಿಂಬಿಸಬಹುದು. ಇದಕ್ಕೆ ಪ್ರತೀಕಾರ ಉಂಟಾದರೆ ಅದನ್ನು ಕುಗ್ಗಿಸಲು ಸರಕಾರದ ಪೋಲೀಸ್, ದಂಡು ಮುಂತಾದ ಶಕ್ತಿಸಾಧನಗಳನ್ನು ಉಪಯೋಗಿಸಬಹುದು. ಸರಕಾರದ ಪ್ರತಿಯೊಂದು ಕಟ್ಟಳೆಯ ಹಿಂದೆ ಮನವೊಲಿಸುವ ಶಕ್ತಿಯೂ ಅದು ತಪ್ಪಿದರೆ ಒತ್ತಾಯಪಡಿಸುವ ಶಕ್ತಿಯೂ ಇದ್ದೇ ಇರುತ್ತದೆ.

ತನ್ನ ಕೈಯಲ್ಲಿ ರಾಜ್ಯಸೂತ್ರಗಳಿಲ್ಲದೆ ಯಾವ ಪಕ್ಷವೂ ಸಾಮ್ಯವಾದವನ್ನು ಕಾರ್ಯರಂಗಕ್ಕೆ ತರಲಾರದು. ಈ ರಾಜ್ಯಸೂತ್ರಗಳು ಮತದಾರರ ಬೆಂಬಲದಿಂದ ಚುನಾವಣೆಯ ಮೂಲಕ ದೊರೆತಿರಲಿ, ಇಲ್ಲವೆ ಪ್ರಚಂಡ ಶಕ್ತಿಯಿಂದ ದೊರಕಿರಲಿ, ಅದೇನೂ ಮಹತ್ವದ್ದಲ್ಲ.

ಇದಕ್ಕೆ ಆನುಷಂಗಿಕವಾಗಿ ಇನ್ನೊಂದು ಮಾತನ್ನು ಹೇಳಬಹುದು. ಅಧಿಕಾರದಲ್ಲಿದ್ದ ಪಕ್ಷವು ಸಾಮ್ಯವಾದದ ಸ್ಥಾಪನೆಗಾಗಿ ದಬ್ಬಾಳಿಕೆಮಾಡಲು ಸಾಕಷ್ಟು ಶಕ್ತಿಯುಳ್ಳದ್ದಾಗಿರಬೇಕು, ಇಲ್ಲವೆ ಪ್ರತಿಪಕ್ಷವನ್ನು ಎದುರಿಸಲು ಜನತೆಯ ಬೆಂಬಲವನ್ನು ಸಾಕಷ್ಟು ಪಡೆದಿರಬೇಕು. ಇವೆರಡು ಸಾಧನಗಳೂ ಒಂದೇ. ಸಾಮ್ಯವಾದೀ ಸರಕಾರದ ದಬ್ಬಾಳಿಕೆಯ ಶಕ್ತಿ ಜನತೆಯ ಬೆಂಬಲದಿಂದಲೇ ಉಂಟಾಗಬೇಕು. ಏಕೆಂದರೆ ಬಂಡವಲುಗಾರರ ಶಕ್ತಿಯೆಲ್ಲ ಪ್ರತಿಪಕ್ಷದಲ್ಲಿ ಕೇಂದ್ರೀಕೃತವಾಗಿರುತ್ತದೆ.

ಅಧಿಕಾರದಲ್ಲಿದ್ದ ಪಕ್ಷವು, ತಾನು ಬಯಸಿದರೆ, ಸಾಮ್ಯವಾದದ ಇಂದ್ರಲೋಕವನ್ನು ಧರೆಗಿಳಿಸಬಹುದೆಂದು ನಾನು ಹೇಳಿದ್ದೇನೆ. ಇದನ್ನು ಸಾಧಿಸಬೇಕಾದರೆ ಮಾಡಬೇಕಾದ ಕೆಲಸವಾದರೂ ಏನು? ಎಲ್ಲ ಸುಲಿಗೆಗಾರರನ್ನೂ ಡೊಳ್ಳು ಹೊಟ್ಟೆಯ ಸಾಹುಕಾರರನ್ನೂ ತೋಫಿನ ಬಾಯಿಗೆ ಗುರಿಮಾಡಬೇಕೇ? ಪಂಡಿತ್ ಜವಾಹರಲಾಲರು ಸಾಮ್ಯವಾದೀ ಭಾರತದ ಮುಖ್ಯಮಂತ್ರಿಯಾದರೆ, ಅಧ್ಯಕ್ಷರಾದರೆ, ಅವರು ಸಂಯುಕ್ತಪ್ರಾಂತದ ತಾಲೂಕುದಾರರನ್ನೆಲ್ಲಾ ಮದ್ದುಗುಂಡುಗಳಿಂದ ನಾಶಗೊಳಿಸಬೇಕೇ? ರಾಜರ, ಮಹಾಜನರ ಸಂಪತ್ತನ್ನೆಲ್ಲಾ ಕಸಿದುಕೊಂಡು ಅದನ್ನು ಜನಸಾಮಾನ್ಯರಲ್ಲಿ ಸಮನಾಗಿ ಹಂಚಿಬಿಡಬೇಕೇ? ದೇಶದಲ್ಲಿದ್ದ ಭೂಮಿಯು

ನ್ನೆಲ್ಲಾ ತುಂಡು ತುಂಡುಮಾಡಿ ಪ್ರತಿಯೊಬ್ಬನಿಗೂ ಸಮನಾಗಿ ಹಂಚಿಕೊಡ ಬೇಕೇ ? ಇದೆಲ್ಲ ಸಾಮ್ಯವಾದವೇ ?

ಅಲ್ಲ. ಸಾಮ್ಯವಾದವೆಂದರೆ ಇದಕ್ಕಿಂತಲೂ ಸಮಂಜಸವಾದುದು, ಸಶಾಸ್ತ್ರೀಯವಾದುದು, ಸುಸಂಸ್ಕೃತವಾದುದು.

ಹಾಗಾದರೆ ಪಂ. ಜವಾಹರಲಾಲರು ಮಾಡಬೇಕಾದುದೇನು ?

ಈ ದೇಶದ ಮತ್ತು ಪರದೇಶಗಳ ಸಮಾಜವನ್ನು ಪರಿಶೀಲಿಸಿದರೆ ಈ ಪ್ರಶ್ನೆಗೆ ತಕ್ಕ ಉತ್ತರವು ದೊರೆಯಬಹುದು.

## ಅಸಮತೆ : ಸಮಾಜದ ಒಂದು ಮುಖ್ಯ ಸಮಸ್ಯೆ

ಮೊಟ್ಟಮೊದಲು ನಮ್ಮ ದೃಷ್ಟಿಗೆ ಗೋಚರವಾಗುವುದೆಂದರೆ, ಬಹು ವಿಚಿತ್ರವಾದ ಅತ್ಯಂತ ದುಃಖದಾಯಕವಾದ ಅಸಮತೆ—ಸ್ಥಾನಮಾನಗಳ ಅಸಮತೆ, ಸಂಸ್ಕೃತಿ ಸುಸಂಧಿಗಳ ಅಸಮತೆ ಜೀವನದ ಸೌಕರ್ಯಗಳು ಅಸಮಾನವಾಗಿ ಹಂಚಿಹೋಗಿವೆ. ಬಹುಸಂಖ್ಯಾಕರ ಪಾಲಿಗೆ ಬಡತನ, ಹಸಿವು, ಬೇನೆ, ಅಜ್ಞಾನ ಮುಂತಾದ ಕಷ್ಟಗಳ ಪರಂಪರೆಯೇ ಬಂದಿದೆ. ಸೌಖ್ಯ, ದುಂದುಗಾರಿಕೆ, ಸಂಸ್ಕೃತಿ, ಸ್ಥಾನಮಾನ, ಅಧಿಕಾರ ಮುಂತಾದುವು ಆಯ್ದ ಕೆಲವರಿಗೆ ಮಾತ್ರ. ನಮ್ಮ ದೇಶದಲ್ಲಿಯೂ ಬೇರೆ ದೇಶಗಳಲ್ಲಿಯೂ ಇದೇ ಸ್ಥಿತಿ. ಅಥವಾ ಈ ಪರಿಸ್ಥಿತಿ ಉಳಿದ ದೇಶಗಳಿಗಿಂತ ನಮ್ಮಲ್ಲಿಯೇ ಹೆಚ್ಚಾಗಿದೆ ಎನ್ನಬಹುದು. ಭಾರತವನ್ನು ಬಿಟ್ಟರೆ ಇನ್ನೆಲ್ಲಿಯೂ ಸಂಪತ್ತು–ದಾರಿದ್ರ್ಯಗಳ, ದರ್ಪ- ಅವಮಾನಗಳ ವೈಷಮ್ಯವನ್ನು ಕಾಣುವುದು ಅಪರೂಪ.

ಸಾಮಾಜಿಕ ಅನಿಷ್ಟವನ್ನು ಉಂಟುಮಾಡುವ ಈ ಅಸಮತೆಯ ಸಮಸ್ಯೆಯೇ ನಮ್ಮ ಸಮಾಜದ ಮುಖ್ಯ ಸಮಸ್ಯೆಯಾಗಿದೆ. ಇದರ ಪರಿಹಾರಕ್ಕಾಗಿ ನಮ್ಮೊಳಗಿನ ನರವೀರರು ಪ್ರಯತ್ನಿಸುತ್ತಲಿದ್ದಾರೆ. ದಾನ, ಜನಹಿತ, ಬಡವರಿಗೆ ದಯೆತೋರಿಸಲು ಸಿರಿವಂತರಿಗೆ ಬಿನ್ನಹ, ಸಿರಿವಂತರ ಧಿಕ್ಕಾರ, ಬಡವರ ಸ್ತುತಿ ಇವೆಲ್ಲ ಅಸಮತಾದೋಷದ ಪ್ರತಿಕ್ರಿಯೆ.

ಸಾಮ್ಯವಾದಿಯ ಪ್ರತಿಕ್ರಿಯೆ ಇದರಿಂದ ಭಿನ್ನವಾಗಿದೆ. ಅವನು ಈ ಸಮಸ್ಯೆಯನ್ನು ಬಿಡಿಸುವ ರೀತಿ ವೈದ್ಯನು ರೋಗವನ್ನು ನಿವಾರಿಸುವ

ರೀತಿಯಂತಿದೆ. ಅಸಮತೆಯನ್ನು ಗ್ರಹೀತವಾಗಿಟ್ಟುಕೊಂಡು ಆ ಬಳಿಕ ಸಮತೆಯನ್ನುಂಟುಮಾಡಲು ಅವನು ಪ್ರಯತ್ನಿಸುವುದಿಲ್ಲ. ಅವನು ಅಸಮತೆಯ ಈ ಸಮಸ್ಯೆ ಬೆಳೆಯುದಂತೆ ಅದನ್ನು ಬೇರು ಸಹಿತ ಕಿತ್ತೊಗೆಯುವ ಉಪಾಯದಲ್ಲಿಯೇ ತೊಡಗುತ್ತಾನೆ.

## ಹುಟ್ಟಿನಲ್ಲಿಯೇ ಕೆಂಡುಬರುವ ಅಸಮತೆ

ಈ ದೋಷದ ಉಗಮವನ್ನು ಗುರುತಿಸಲು ಹೊರಟ ಸಾಮ್ಯವಾದಿ ಪ್ರಾಣಿಜೀವನ ಶಾಸ್ತ್ರಜ್ಞನನ್ನು ಎದುರಿಸಬೇಕಾಗುತ್ತದೆ. ಮಾನವರಲ್ಲಿ ಅಸಮತೆ ಹುಟ್ಟಿನಿಂದಲೇ ಕಂಡುಬರುತ್ತದೆಂದು ಕೆಲವರ ಹೇಳಿಕೆ. ನಮ್ಮ ಆಂತರಿಕ ಶಕ್ತಿಯು ಪರಿಮಿತಿ (quantity) ಯಲ್ಲಿ ಮತ್ತು ಗುಣದಲ್ಲಿ ಜನ್ಮದಾರಭ್ಯವೂ ಅಭ್ಯಂತರವಿರುತ್ತದೆ. ಇದು ಖಂಡಿತವಾಗಿಯೂ ಸತ್ಯ.

ಸಾಮಾಜಿಕ ಅಸಮತೆಯನ್ನು ಪರೀಕ್ಷಿಸುವ ಸಾಮ್ಯವಾದಿ, ಜನ್ಮತಃ ಕಂಡುಬರುವ ಈ ಅಸಮತೆಯನ್ನು ಹೇಗೆ ಎದುರಿಸುವನೆಂಬುದನ್ನು ನೋಡುವಾ. ಸಮಾಜದಲ್ಲಿ ಪ್ರತಿಭಾಸಂಪನ್ನರ, ಅದರಂತೆಯೇ ವಿಚಾರ ಶೂನ್ಯರ ಸಂಖ್ಯೆ ಅತ್ಯಲ್ಪವಾಗಿದೆ. ಮಾನವರಲ್ಲಿ ಬಹುಸಂಖ್ಯಾಕರು ಯೋಗ್ಯತೆಯಲ್ಲಿ ಸರಿಸಮಾನರಾಗಿರುತ್ತಾರೆ.

ಜನ್ಮಸಿದ್ಧವಾಗಿರುವ ಈ ಅಭ್ಯಂತರಗಳು ಸಮಾಜದ ಅನೇಕ ರೀತಿ ನೀತಿಗಳಲ್ಲಿ ತಲೆದೋರುತ್ತವೆ. ಕಲೆಯ, ವಿಜ್ಞಾನದ ಕಲಿಕೆಯಲ್ಲಿಯೂ ಅವುಗಳ ಧ್ಯೇಯಸಾಧನೆಯಲ್ಲಿಯೂ ಅಸಮತೆಯನ್ನು ನಾವು ಕಾಣುತ್ತೇವೆ. ಸ್ಥಾನ, ಸಂಪತ್ತು, ಅಧಿಕಾರ, ಸುಸಂಧಿ ಇವುಗಳಲ್ಲಿ ಅಸಮತೆ ಇದೆ. ಠಾಕೂರರು, ರಾಮನ್ನರು ಸಮಾಜದಲ್ಲಿ ಜನಿಸುವುದನ್ನು ಸಾಮ್ಯವಾದಿಯು ಪ್ರತಿಭಟಿಸುವುದಿಲ್ಲ. ಇಂಥವರು ಜನಿಸಿದರೆ ಅವನಿಗೆ ಸಂತೋಷವೇ. ಆದರೆ ಎಷ್ಟೋ ಠಾಕೂರರು, ರಾಮನ್ನರು ಸುಸಂಧಿ ಸೌಕರ್ಯಗಳು ದೊರಕದ್ದರಿಂದ ಅಜ್ಞಾತವಾದ ಜೀವನಯಾತ್ರೆಯನ್ನು ಮುಗಿಸುವುದನ್ನು ಕಂಡು ಸಾಮ್ಯವಾದಿಗೆ ಅತ್ಯಂತ ಕಳವಳವಾಗುತ್ತದೆ. ಕೆಲವರು ಮಾತ್ರ ದೊಡ್ಡ ಕವಿಗಳಾಗುವುದು, ಕೆಲವರು ಮಾತ್ರ ಮಹಾ ವಿಜ್ಞಾನಿಗಳಾಗುವುದು ಪ್ರಕೃತಿಯ ಪ್ರಸಾದದಿಂದ ಎಂಬುದರಲ್ಲಿ ಅಸಮತೆಯ

ದೋಷವಿದೆಯೆಂದು ಯಾವ ಸಾಮ್ಯವಾದಿಯೂ ಹೇಳುವುದಿಲ್ಲ. ಸಾಮ್ಯವಾದಿಯ ದೂರು ಸ್ಥಾನ-ಮಾನ ದ್ರವ್ಯವಿಭಾಗಗಳಲ್ಲಿ ಅಸಮತೆಯ ದೋಷವಿದೆಯೆಂದು, ಮತ್ತು ಇದು ಅಳಿಯಲೇಬೇಕೆಂದು. ಸಮಾಜದಲ್ಲಿ ಸಂಪತ್ತು ಮಹತ್ವದ ವಿಷಯವಾಗಿರುವುದರಿಂದ ಸಂಪತ್ತಿನ ಅಸಮಾನ ವಿಭಾಗವೇ ಸಾಮಾಜಿಕ ಸಮಸ್ಯೆಯ ಮುಖ್ಯಾಂಶವಾಗಿದೆ.

## ಸಂಪತ್ತಿನ ಅಸಮತೆಗೆ ಹುಟ್ಟಿನ ಅಸಮತೆ ಕಾರಣವಲ್ಲ

ಹಾಗಾದರೆ ದ್ರವ್ಯವು ಅಸಮಾನವಾಗಿ ವಿಭಾಗಿಸಲ್ಪಟ್ಟಿದ್ದೇಕೆ? ಇದರಲ್ಲಿ ಪ್ರಾಣಿಜೀವನ ಶಾಸ್ತ್ರದ ಕೈವಾಡ ಉಂಟೆಂದು ಕೆಲವರು ಸೂಚಿಸಬಹುದು. ನಮ್ಮೊಳಗಿನ ಜಾಣರು ಜಾಣತನದಿಂದ ಕೆಲಸಮಾಡಿ ಉಳಿದವರಿಗಿಂತ ಸಿರಿವಂತರಾಗುತ್ತಾರೆ. ಇದನ್ನು ನಾವು ಒಪ್ಪಿಕೊಂಡರೂ ಪರಂಪರಾಗತವಾದ ಆಸ್ತಿಯ ವಿಷಯವಾಗಿ ಇವರ ಉತ್ತರವೇನು? ತಂದೆಯಿಂದ ಮಗನಿಗೆ ಬರುವ ಆಸ್ತಿಯ ವಿಷಯದಲ್ಲಿ ಮಗನ ಗುಣಾತಿಶಯದ ತತ್ವವೇನೂ ಇರುವುದಿಲ್ಲ. ಒಬ್ಬ ಧನಿಕನ ಮಗನು ತಿಳಿಗೇಡಿಯಾಗಿರಲಿ ಪ್ರತಿಭಾಶಾಲಿಯಾಗಿರಲಿ, ತನ್ನ ಹಿರಿಯರ ಲಕ್ಷಾಂತರ ರೂಪಾಯಿಗಳ ಆಸ್ತಿಯನ್ನು ಪಡೆಯದಿರುವುದಿಲ್ಲ. ಹಕ್ಕುದಾರರಿಗೆ ಆಸ್ತಿ ದೊರೆಯುವುದಕ್ಕೆ ಸಮಾಜದ ಒಂದು ರೂಢಿಯೇ ಕಾರಣ. ಈ ರೂಢಿಯನ್ನು ಬದಲಾಯಿಸಿದರೆ ಈಗಿನ ಎಷ್ಟೋ ಧನಿಕರು ಒಮ್ಮಿಂದೊಮ್ಮೆ ಬಡವರಾಗುವರು.

ಆದರೆ ಸ್ವತಃ ಸಂಪತ್ತನ್ನು ಗಳಿಸಿದವರ ವಿಷಯವನ್ನೀಗ ನಾವು ತೆಗೆದುಕೊಳ್ಳೋಣ. ಅವರು ಈ ಹಣವನ್ನು ಸಂಪಾದಿಸಿದ್ದು ತಮ್ಮ ಅಧಿಕ ಯೋಗ್ಯತೆಯಿಂದಲ್ಲವೆ?

ಉದ್ಯಮದಲ್ಲಿ ಯಶಸ್ವಿಯಾಗಬೇಕಾದರೆ ಒಂದು ವಿಶಿಷ್ಟ ಯೋಗ್ಯತೆ ಅವಶ್ಯ. ಆದರೆ ಕೆಲವೊಂದು ವರ್ಗದವರಿಗೆ ಮಾತ್ರ ಈ ಯೋಗ್ಯತೆ ದೊರೆಯುತ್ತಿರುವುದೂ ಉಳಿದವರೆಲ್ಲ ಈ ಧನವಂತರ ಕೈಯಲ್ಲಿ ದುಡಿದು ಹೊಟ್ಟೆಹೊರೆದುಕೊಳ್ಳುತ್ತಿರುವುದೂ ಈಶ್ವರ ನಿರ್ಮಿತವಾದ ಈ ಸೃಷ್ಟಿಯ ನಿಯಮಕ್ಕೆ ವಿರುದ್ಧವಾದುವಲ್ಲವೆ? ಒಬ್ಬ ಪ್ರತಿಭಾಶಾಲಿಯಾದ ಗಣಿತಶಾಸ್ತ್ರಜ್ಞನು ತನ್ನ ಸಂಶೋಧನೆಯಿಂದ ಅತ್ಯಂತ ಪ್ರಖ್ಯಾತನೂ ಅಮರನೂ

ಆಗಬಹುದು. ಆದರೆ ಇವುಗಳಿಂದ ಅವನಿಗೆ ಹಣಸಿಕ್ಕಲಾರದು. ಸಾಮಾನ್ಯ ನಿಯಮಗಳಿಗನುಸರಿಸಿ ವ್ಯಾಪಾರದಲ್ಲಿ ಅಪಾರ ದ್ರವ್ಯ ಗಳಿಸುತ್ತಿರುವ ಒಬ್ಬ ಸಾಮಾನ್ಯ ಉದ್ಯಮಗಾರನ ಬೆಲೆಯು ಕೂಡ ಆ ಶಾಸ್ತ್ರಜ್ಞನ ಪ್ರತಿಭೆಗೆ ಇರ ಕೂಡದೆ? ವಿಜ್ಞಾನಿ ಎಷ್ಟು ನಿಪುಣನಾದರೇನು—ವ್ಯಾಪಾರೋದ್ಯಮಕ್ಕೆ ಕೈಹಾಕಿದ ಹೊರತು ತನ್ನ ಪ್ರಯೋಗಶಾಲೆಯಿಂದ ಹಣಗಳಿಸಲಾರ. ಈ ಉದ್ಯಮಗಾರನ ಪ್ರಯೋಗಶಾಲೆ ಮಾತ್ರ ತಪ್ಪದೆ ಹಣವನ್ನು ಹುಟ್ಟಿಸುತ್ತದೆ.

ಈ ಪ್ರಯೋಗಶಾಲೆ ಯಾವುದು, ದ್ರವ್ಯವು ಹುಟ್ಟುವುದೆಂತು ಸಂಚಯು ವಾಗುವುದೆಂತು, ಎಂಬುದನ್ನು ನೋಡೋಣ.

## ದ್ರವ್ಯದ ನಿರ್ಮಾಣ ಮತ್ತು ಸಂಚಯು

ಜಗತ್ತಿನಲ್ಲಿ ನಾವು ಒಂದು ಕಡೆ ಜನರನ್ನು ಇನ್ನೊಂದು ಕಡೆ ಸೃಷ್ಟಿ ಯನ್ನು ಕಾಣಬಹುದು. ಎಲ್ಲ ಸಂಪತ್ತು ಇರುವುದು ಸೃಷ್ಟಿದೇವಿಯ ಹೊಟ್ಟೆ ಯಲ್ಲಿ. ಈ ಸಂಪತ್ತನ್ನು ಪಡೆಯಬೇಕಾದರೆ ಸೃಷ್ಟಿಯ ಉಪಯೋಗವನ್ನು ಸರಿಯಾಗಿ ಮಾಡಿಕೊಳ್ಳಬೇಕು. ಸಂಪತ್ತು ಎಂದರೆ ಉಪಯುಕ್ತವಾದ ಎಲ್ಲ ವಸ್ತುಗಳ ಸಮುದಾಯ. ಆದುದರಿಂದ ಸೃಷ್ಟಿಯೇ ಸಂಪತ್ತಿನ ಉಗಮ ಸ್ಥಾನ. ಮಾನವನ ಪರಿಶ್ರಮವೇ ಈ ಸಂಪತ್ತನ್ನು ನಿರ್ಮಿಸುವ ಶಕ್ತಿ. ಇದೆಲ್ಲವೂ ಅರ್ಥಶಾಸ್ತ್ರದ ತಳಹದಿ.

ಸಂಪತ್ತು ಸಂಚಯವಾಗುವುದೆಂತು? ಸೃಷ್ಟಿಯೊಳಗಿಂದ, ಜೀವನಕ್ಕೆ ಅತ್ಯಗತ್ಯವಾದುದನ್ನಷ್ಟೇ ಬಳಸಿಕೊಂಡರೆ ಸಂಚಯಕ್ಕೆ ಏನೂ ಉಳಿಯು ವುದಿಲ್ಲವೆಂಬುದು ಸ್ಪಷ್ಟ. ಮನುಷ್ಯನು ಸೃಷ್ಟಿಯೊಳಗಿಂದ ಸೆಳೆದುಕೊಳ್ಳಬಹು ದಾದ ಸಂಪತ್ತಿನ ಪರಿಮಾಣವು ಅವನ ನಿರ್ಮಾಣಶಕ್ತಿಯನ್ನವಲಂಬಿಸಿದೆ. ನಿರ್ಮಾಣಶಕ್ತಿ ಎಂದರೆ ಅವನು ಉಪಯೋಗಿಸುವ ಉಪಕರಣಗಳು, ಅವನು ಕೆಲಸಮಾಡುವ ಪದ್ಧತಿ ಮುಂತಾದುವು. ಸಂಚಯುವು ಸಾಧ್ಯ ವಾಗಬೇಕಾದರೆ ಮಾನವನು ತನಗೆ ಬೇಕಾಗುವುದಕ್ಕಿಂತ ಹೆಚ್ಚನ್ನು ನಿರ್ಮಿ ಸಲು ತನ್ನ ನಿರ್ಮಾಣಶಕ್ತಿಯನ್ನು ಬೆಳೆಸಿಕೊಳ್ಳಬೇಕಾಗುವುದು ಇದು ಸಂಚಯದ ಮೂಲತತ್ತ್ವ. ಬೇಟೆ, ಮೀನುಗಾರಿಕೆ, ಸಾಗುವಳಿ ಮುಂತಾದ ಕಲೆಗಳು ಸಾಮಾನ್ಯಜೀವನಕ್ಕೆ ಬೇಕಾದುದಕ್ಕಿಂತ ಹೆಚ್ಚನ್ನು ನಿರ್ಮಿಸು

ವಷ್ಟು ಪ್ರಗತಿಯನ್ನು ಹೊಂದಿದಾಗ ಮಾತ್ರ ಸಂಚಯವು ಸುಲಭಸಾಧ್ಯ ವಾಗುತ್ತದೆ.

ತಮ್ಮ ಅವಶ್ಯಕತೆಗಿಂತ ಹೆಚ್ಚನ್ನು ನಿರ್ಮಿಸಬಹುದಾದ ಸಮಾಜದಲ್ಲಿ ಪ್ರತಿ ಒಬ್ಬನೂ ಸ್ವಲ್ಪ ಸಂಪತ್ತನ್ನು ಸಂಚಯಿಸಬಹುದು. ಆದರೆ ಅವನು ತನ್ನ ಕೆಲಸವನ್ನು ತಾನೇಮಾಡಲು ಸ್ವತಂತ್ರನಾಗಿರಬೇಕು. ತನ್ನ ಉಪ ಕರಣಗಳ ಮೇಲಿನ ಒಡೆತನ ತನ್ನದೇ ಆಗಿರಬೇಕು. ಸೃಷ್ಟಿಯ ಸಂಪತ್ತನ್ನು ಉಪಯೋಗಿಸುವ ಸ್ವಾತಂತ್ರ್ಯ ಅವನಿಗಿರಬೇಕು. ಒಬ್ಬನ ಸಂಚಯದ ಪರಮಾವಧಿ, ಅವನು ಎಷ್ಟು ಹೆಚ್ಚು ಬೆಳೆಸಬಲ್ಲನೋ ಮತ್ತು ಎಷ್ಟು ಕಡಿಮೆ ಬಳಸಬಲ್ಲನೋ ಎಂಬುದನ್ನೇ ಹೊಂದಿಕೊಂಡಿದೆ. ಕೆಲವೊಂದು ಕುಟುಂಬಗಳು ತಾವು ಬೆಳೆಸಿದುದರಲ್ಲಿ ತೀರ ಕಡಿಮೆ ತಿನ್ನುವುದರ ಬದಲು ಎಲ್ಲವನ್ನೂ ತಿಂದುಹಾಕಿಬಿಡಬಹುದು. ಇಂತಹ ಕುಟುಂಬಗಳು ಯಾವ ಸಂಚಯವನ್ನೂ ಮಾಡಲಾರವು. ಅವು ಬರಿಯ ಹೊಟ್ಟೆಯಿಂದ ಬಳಲು ವುದೂ ಇಲ್ಲ. ಏಕೆಂದರೆ ಅವುಗಳ ನಿರ್ಮಾಣಶಕ್ತಿ ಅವುಗಳ ಕೊರತೆ ಯನ್ನು ಪೂರೈಸುವಷ್ಟಿರುತ್ತದೆ.

ಈ ಸಮಾಜದಲ್ಲಿ ಅತಿ ಚತುರರಾದವರು ಕೆಲವರೂ ಇರಬಹುದು. ಅವರು ಉಳಿದವರಿಗಿಂತ ಹೆಚ್ಚು ನಿರ್ಮಿಸಬಹುದು. ಮತ್ತು ಮಿತವ್ಯಯಿ ಗಳಾಗಿದ್ದರೆ ಉಳಿದವರಿಗಿಂತ ಹೆಚ್ಚು ಉಳಿತಾಯವನ್ನು ಮಾಡಬಹುದು. ಇದರ ವಿರುದ್ಧವಾಗಿ, ಮಂದಮತಿಗಳ ಉಳಿತಾಯ ತೀರ ಕಡಿಮೆಯಾಗಿರ ಬಹುದು, ಇಲ್ಲವೆ ಏನೂ ಇರಲಾರದು. ಇಂಥ ಸಮಾಜದಲ್ಲಿ ದುಡಿ ತದ ಸ್ವಾತಂತ್ರ್ಯವಿದ್ದ, ಸ್ವಂತ ಉಪಕರಣಗಳಿದ್ದ, ನೈಸರ್ಗಿಕ ಸಂಪತ್ತನ್ನು ಅನಿರ್ಬಂಧವಾಗಿ ಬಳಸುವ ಹಕ್ಕುಳ್ಳ, ತನ್ನ ಹುಟ್ಟುವಳಿಯ ಮೇಲೆ ತನ್ನದೇ ಹಕ್ಕುಳ್ಳ ಪ್ರತಿ ಒಬ್ಬ ಸಶಕ್ತನೂ ದನಸಂಚಯ ಮಾಡಬಲ್ಲ.

ಇಂಥ ಕಾಲ್ಪನಿಕ ಸಮಾಜವನ್ನು ಬಿಟ್ಟು ಈಗಿನ ವಾಸ್ತವಿಕ ಸಮಾಜದ ಕಡೆ ಹೊರಳೋಣ. ನಮ್ಮ ಸಮಾಜದಲ್ಲಿ ಒಕ್ಕಲುತನದ ಮತ್ತು ಇನ್ನಿತರ ಔದ್ಯೋಗಿಕ ಬೆಳವಣಿಗೆಯ ಸಾಧನಗಳು ಅತ್ಯಂತ ಪ್ರಗತಿಯನ್ನುಹೊಂದಿವೆ. ಬುನಾದಿಯ ಮಾನವನ ಜೀವನದ ಮಟ್ಟಕ್ಕಿಂತಲೂ ಈಗಿನವನ ಜೀವನದ ಮಟ್ಟ ಬಹು ಮೇಲ್ತರಗತಿಯದಾಗಿದ್ದರೂ, ಪ್ರತಿ ಒಬ್ಬನೂ ತನಗೆ ಬೇಕಾ

ದುದಕ್ಕಿಂತ ಹೆಚ್ಚು ನಿರ್ಮಿಸಬಲ್ಲ. ಭಾರತದ ಒಕ್ಕಲಿಗನು ಹಳೆಯ ಪದ್ಧತಿ ಮತ್ತು ಉಪಕರಣಗಳನ್ನು ಬಳಸುತ್ತಿದ್ದರೂ ತನ್ನ ಉಪಜೀವನದ ಆವಶ್ಯಕತೆಗಿಂತ ಹೆಚ್ಚು ಬೆಳೆಗಳನ್ನು ತೆಗೆಯುತ್ತಾನೆ. ಆದರೂ ಲಕ್ಷಾಂತರ ಜನರಿಗೆ ದಿನಕ್ಕೆ ಹೊಟ್ಟೆತುಂಬ ಒಂದು ಊಟವೂ ದೊರೆಯುವುದಿಲ್ಲ. ಕೆಲವರು ಮಾತ್ರ ತಮ್ಮ ಆಸೆ ಆಕಾಂಕ್ಷೆಗಳನ್ನು ಯಥೇಚ್ಛವಾಗಿ ಈಡೇರಿಸಿಕೊಳ್ಳುವುದಲ್ಲದೆ ದುಂದಿನಿಂದಲೂ ಕಾಲಕಳೆಯುತ್ತಾರೆ. ಒಂದು ಕಡೆ ತೀರ ಬಡತನ, ಮತ್ತೊಂದು ಕಡೆ ಸಂಪತ್ತು, ಸುಖಲೋಲುಪತೆ. ಈ ಪರಿಸ್ಥಿತಿ ನಿರ್ಮಾಣವಾದುದು ಹೇಗೆ ?

ಮೊದಲು ಬಡವರ ಸ್ಥಿತಿಯನ್ನು ಪರಿಶೀಲಿಸೋಣ. ಬಹು ಪ್ರಗತಿ ಹೊಂದಿದ ನಿರ್ಮಾಣಸಾಧನಗಳನ್ನು ನೋಡಿದರೆ ಪ್ರತಿಯೊಬ್ಬ ಹಿಂದೀಯನೂ ತನ್ನ ಉಪಜೀವನವನ್ನು ಸುಲಭವಾಗಿ ಸಾಗಿಸಿಕೊಳ್ಳಬಹುದಲ್ಲದೆ ಕೊಂಚ ಮಟ್ಟಿಗೆ ಸಂಚಯವನ್ನೂ ಮಾಡಬಹುದು. ನಿಜಸ್ಥಿತಿಯೆಂದರೆ ಎಷ್ಟೋ ಹಿಂದೀಯರಿಗೆ ತಮ್ಮ ಹೊಟ್ಟೆಹೊರೆದುಕೊಳ್ಳುವುದೇ ಕಷ್ಟವಾಗಿದೆ. ಅದೇಕೆ ? ಮೇಲೆ ಹೇಳಿದ ಸಿದ್ಧಾಂತಗಳು ಕಣ್ಮರೆಯಾಗಿರುವುದೇ ಇದಕ್ಕೆ ಕಾರಣ. ಜನರೆಲ್ಲರೂ ತಾವಾಗಿಯೇ ಕೆಲಸಮಾಡುವುದಿಲ್ಲ. ಸೃಷ್ಟಿಯ ಸಂಪತ್ತೆಲ್ಲ ಅವರಿಗೆ ಸುಲಭವಾಗಿ ದೊರೆಯುವುದಿಲ್ಲ. ಎಷ್ಟೋ ಜನರಿಗೆ ತಮ್ಮ ಉಪಕರಣಗಳ ಮೇಲೆ ಒಡೆತನವಿಲ್ಲ. ತಮ್ಮ ಎಲ್ಲ ಹುಟ್ಟುವಳಿಯನ್ನು ತಮಗಾಗಿ ಇರಿಸಿಕೊಳ್ಳುವ ಅಧಿಕಾರವಿಲ್ಲ. ಇದೆಲ್ಲ ಹೇಗೆ ಸಂಭವಿಸಿತೆಂಬುದನ್ನು ಹೇಳಬೇಕಾದರೆ ಅದೊಂದು ದೊಡ್ಡ ಕತೆಯೇ ಆಗುತ್ತದೆ. ವಸ್ತುಸ್ಥಿತಿ ಹೀಗಿದೆ ಎಂಬುದು ಮಾತ್ರ ಸ್ಪಷ್ಟವಾದ ಮಾತು.

ನಮ್ಮ ಜನರ ಬಡತನದ ಮುಖ್ಯ ಕಾರಣವೆಂದರೆ, ಹುಟ್ಟುವಳಿಯ ಸಾಧನಗಳು-ಉಪಕರಣಗಳು, ಭೂಮಿ ಮುಂತಾದ ಸಾಹಿತ್ಯ-ಜನರ ಕೈಯಲ್ಲಿ ಇಲ್ಲದಿರುವುದು. ಇವೆಲ್ಲವುಗಳಿಗೂ ಅವರು ಹಣ ತೆರಬೇಕಾಗುತ್ತದೆ. ಹೆಚ್ಚು ಹಣ ತೆತ್ತಂತೆ ಅವರ ಉಳಿತಾಯ ಕಡಿಮೆಯಾಗುವುದು, ಬಡತನ ಬೆಳೆಯುವುದು. ಇದೆಲ್ಲಕ್ಕೂ ತೆತ್ತಲು ಅನೇಕರಲ್ಲಿ ಹಣವಿರುವುದಿಲ್ಲ ; ಆದುದರಿಂದ ತಮ್ಮ ಪರಿಶ್ರಮವನ್ನು ಪರರಿಗೆ ಮಾರಿಕೊಳ್ಳದೆ ಗತ್ಯಂತರವಿಲ್ಲ ಹುಟ್ಟುವಳಿಯ ಸಾಧನಗಳು ಜನರ ಕೈಯಲ್ಲಿದ್ದರೆ ಅವರಿಗೆ

ಬಡತನದ ಬಾಧೆ ತಪ್ಪುವುದು. ಉತ್ಪತ್ತಿಸಾಧನಗಳ ಶಕ್ತಿ ಇಂದು ಇದ್ದಂತೆಯೇ ಇದ್ದು, ದೇಶದ ಜನಸಂಖ್ಯೆ ವಿಪರೀತವಾಗಿ ಬೆಳೆದಲ್ಲಿ ಇದು ಅಸಾಧ್ಯವಾದ ಮಾತೆನ್ನಬಹುದು. ಆದರೆ ಭಾರತದಲ್ಲಿ ಇನ್ನೂ ಇಂತಹ ಪರಿಸ್ಥಿತಿ ಬಂದಿಲ್ಲ, ಬೇಗನೆ ಬರುವ ಲಕ್ಷಣವೂ ಇಲ್ಲ.

ಇನ್ನು ಸಿರಿವಂತರ ವಿಷಯವನ್ನು ವಿವೇಚಿಸೋಣ. ಒಬ್ಬೊಬ್ಬ ಸಿರಿವಂತನಲ್ಲಿ ಬಡವನಿಗಿಂತ ಸಾವಿರಪಾಲು, ಲಕ್ಷಪಾಲು ಧನಸಂಚಯವಾದುದು ಹೇಗೆ? ಎಲ್ಲರೂ ಹುಟ್ಟುವಳಿಯ ಒಂದೇಬಗೆಯ ಸಾಧನಗಳನ್ನು ಉಪಯೋಗಿಸುತ್ತಿರುವಾಗ ಒಬ್ಬ ವ್ಯಕ್ತಿಯು, ಎಷ್ಟೇ ಚತುರನಾಗಿದ್ದರೂ, ಒಮ್ಮಿಂದೊಮ್ಮೆ ಉಳಿದವರಿಗಿಂತ ಸಾವಿರ ಮಡಿ ಸಿರಿವಂತನಾಗುವುದು ಶಕ್ಯವಿಲ್ಲ. ಧನವಂತರ ಅಪಾರ ಸಂಪತ್ತು ಅವರ ಶುದ್ಧ ದುಡಿಮೆಯಿಂದ ಬಂದುದಲ್ಲ. ಒಂದೇ ತರದ ಸಮಾಜದಲ್ಲಿರುವ ಜನರ ಹುಟ್ಟುವಳಿಯಲ್ಲಿ ಇಂಥ ವ್ಯಸ್ತಪ್ರಮಾಣವು ಉಂಟಾಗುವುದು ಸಾಧ್ಯವಿಲ್ಲ. ಹಣಗಳಿಸುವ ನಿಜವಾದ ರೀತಿ ಸೃಷ್ಟಿಯ ಸಂಪತ್ತಿನ ಉಪಯೋಗವೇ ಎಂದೂ, ಹಣಗಳಿಸಬೇಕಾದರೆ ತಾನು ನಿರ್ಮಿಸಿದುದಕ್ಕಿಂತ ಕಡಿಮೆ ವೆಚ್ಚಮಾಡಬೇಕೆಂದೂ ಮೇಲೆ ಹೇಳಿದ್ದೇವೆ. ಸಮಾಜದ ಬೆಳೆವಣಿಗೆಯಲ್ಲಿ ಉತ್ಪತ್ತಿಸಾಧನಗಳ ವಿಕಾಸದ ಪರಿಮಿತಿಯೇ ಉತ್ಪತ್ತಿಮಾಡಲು ಇರುವ ಪರಿಮಿತಿ. ಈ ತತ್ವ, ಯಂತ್ರಗಳ ಮೂಲಕವಾಗಿ ಹುಟ್ಟುವಳಿಯನ್ನು ಹೆಚ್ಚಿಸಿಕೊಂಡ ಪಾಶ್ಚಿಮಾತ್ಯ ರಾಷ್ಟ್ರಗಳಿಗೂ ಅನ್ವಯಿಸುತ್ತದೆ. ಇಂದು ಉತ್ಪತ್ತಿಸಾಧನಗಳ ಬೆಳೆವಣಿಗೆ–ವಿಶೇಷತಃ ಔದ್ಯೋಗಿಕ ಪದ್ಧತಿ–ತುಂಬಾ ಬೆಳೆದಿದೆ. ಇವುಗಳ ಉಪಯೋಗವನ್ನು ಯಾವ ವ್ಯಕ್ತಿಯೂ ತಾನೊಬ್ಬನೇ ಮಾಡಿಕೊಳ್ಳಲಾರ. ಇದು ಭಾರತಕ್ಕೂ, ಅದಕ್ಕೂ ಹೆಚ್ಚಾಗಿ ಪಾಶ್ಚಿಮಾತ್ಯ ರಾಷ್ಟ್ರಗಳಿಗೂ ಅನ್ವಯಿಸುತ್ತದೆ. ಆದರೆ ಈ ತರ್ಕಸರಣಿಯಿಂದ ನನ್ನ ವಾದಕ್ಕೆ ಅಡ್ಡಿಯಾಗುವುದಿಲ್ಲ. ಉತ್ಪತ್ತಿಯಲ್ಲಿ ತೊಡಗಿದವರಿಗೆ ತಮ್ಮ ತಮ್ಮ ಪಾಲು ಸಿಕ್ಕಿದರೆ ನಾವು ಮೇಲೆ ಚಿತ್ರಿಸಿದ ಸಮಾಜದಲ್ಲಿದ್ದ ಪರಿಸ್ಥಿತಿಯೇ ನಿರ್ಮಾಣವಾಗದಿರದು. ಇದರಿಂದ ಪ್ರತಿ ಒಂದು ವ್ಯಕ್ತಿಯಲ್ಲಿಯೂ ತಕ್ಕಷ್ಟು ಧನಸಂಚಯವಾಗಿ ಬಡತನವಾಗಲಿ, ಕೆಲವೊಂದು ವ್ಯಕ್ತಿಗಳ ಕೈಯಲ್ಲಿ ಅಪಾರ ಧನಸಂಗ್ರಹವಾಗಲಿ ಉಂಟಾಗುವುದಿಲ್ಲ.

ಈಗಿನ ಸಮಾಜದಲ್ಲಿ ಕೆಲವೇ ವ್ಯಕ್ತಿಗಳಲ್ಲಿ ಅಪಾರ ಧನಸಂಚಯ ವಾದುದು ಹೇಗೆ? ಇದು ಉದ್ಯೋಗೀ ಜನರು ತಮ್ಮ ಆದಾಯದಲ್ಲಿ ಉಳಿತಾಯಮಾಡಿದುದರ ಫಲ ಎಂದು ವಾದಿಸಬಹುದು. ಮಿತವ್ಯಯ, ಪರಿಶ್ರಮ ಮುಂತಾದವು ಒಂದೇ ಕುಟುಂಬದಲ್ಲಿ ತಲೆಯಿಂದ ತಲೆಗೆ ಇಳಿದು ಬರುವುದಿಲ್ಲವೆಂದೂ ಮಿತವ್ಯಯ ಪರಿಶ್ರಮಗಳಿಂದ ಅಪಾರ ಸಂಪತ್ತನ್ನು ಒಮ್ಮಿಂದೊಮ್ಮೆ ಸಂಚಯಿಸುವುದು ಅಸಾಧ್ಯವೆಂದೂ ಹೇಳಬಹುದು. ಉದ್ಯೋಗದಿಂದ ದೊರೆತ ಸಂಪತ್ತು ಪೂರ್ವಜರಿಂದ ಬಂದದ್ದಾಗುವುದಿಲ್ಲ. ಹಣಗಳಿಸುವ ರಹಸ್ಯವು ಧನಿಕರ ವಂಶದಲ್ಲಿ ಜನ್ಮವೆತ್ತುವುದರಲ್ಲಿಯೂ ಇಲ್ಲ, ವಿಶಿಷ್ಟ ಬುದ್ಧಿವಂತಿಕೆಯಲ್ಲಿಯೂ ಇಲ್ಲ.

## ಸಂಪತ್ತು ಮತ್ತು ಸುಲಿಗೆ

ಹಣಗಳಿಸುವ ರಹಸ್ಯವು ಅದರ ರೀತಿಯನ್ನು ಪರಿಶೀಲಿಸಿದರೆ ಗೊತ್ತಾಗುತ್ತದೆ. ಒಂದು ಸಮಾಜದಲ್ಲಿ ವೆಚ್ಚಕ್ಕಿಂತ ಹುಟ್ಟುವಳಿ ಹೆಚ್ಚಾಗಿದೆಯೆಂದು ಭಾವಿಸುವಾ. ಮತ್ತು ಒಬ್ಬ ವ್ಯಕ್ತಿ ಹತ್ತು ಜನರನ್ನು ತನಗಾಗಿ ದುಡಿಯಲು ತೊಡಗಿಸಿ, ಅವಶ್ಯವಿದ್ದುದನ್ನಷ್ಟೇ ಅವರಿಗೆ ಕೊಟ್ಟು, ಉಳಿದುದನ್ನು ತಾನೇ ಇಟ್ಟುಕೊಳ್ಳುತ್ತಾನೆಂದು ತಿಳಿಯುವಾ. ಇಂಥ ವ್ಯಕ್ತಿ ತನ್ನ ಸಲುವಾಗಿ ತಾನೇ ದುಡಿಯುವವನಿಗಿಂತ ಹತ್ತು ಮಡಿ ತೀವ್ರವಾಗಿ ಸಿರಿವಂತನಾಗುತ್ತಾನೆ. ಅವನು ಹೆಚ್ಚು ಜನರನ್ನು ಕೆಲಸದಲ್ಲಿ ತೊಡಗಿಸಿದಂತೆ ಅವನ ಸಂಪತ್ತು ಹೆಚ್ಚುವುದು.

ಅದೇ ಸಮಾಜದೊಳಗಿನ ಮತ್ತೊಬ್ಬನು ಭೂಮಿಯ ಗುತ್ತಿಗೆಯನ್ನು ಪಡೆದಿದ್ದಾನೆಂದು ತಿಳಿಯುವಾ. ತನ್ನ ಈ ಅಧಿಕಾರದ ಮೂಲಕ, ತನಗೆ ಬೆಳೆಯ ಯೋಗ್ಯ ವಿಭಾಗವು ದೊರೆಯದಿದ್ದರೆ ಅದನ್ನು ಸಾಗುಮಾಡಲು ಅವನು ಯಾರಿಗೂ ಬಿಡುವುದಿಲ್ಲ. ಹೀಗೆ ಅವನೂ ಹಣಸಂಪಾದಿಸಿ ಉಳಿದವರಿಗಿಂತ ತೀವ್ರವಾಗಿ, ಹೆಚ್ಚಾಗಿ ಧನಿಕನಾಗುತ್ತಾನೆ. ಅವನ ಕೈಯಲ್ಲಿ ಭೂಮಿ ಹೇಗೆ ಹೆಚ್ಚಾಗುವುದೋ ಹಾಗೆ ಅವನ ಬೊಕ್ಕಸವೂ ದೊಡ್ಡದಾಗುತ್ತದೆ. ಉಳಿದ ಸೃಷ್ಟಿಸಂಪತ್ತಿನ ವಿಷಯವೂ ಹೀಗೆಯೇ.

ಸಂಪತ್ತಿನ ಅಸಮತೆಯು ನಿಜವಾದ ಗುಟ್ಟು ಇದೇ. ಇದಕ್ಕೇ ಸುಲಿಗೆ ಎನ್ನುತ್ತಾರೆ.

ಒಬ್ಬನು ಮತ್ತೊಬ್ಬನಿಗಾಗಿ ದುಡಿಯುವುದೇಕೆ, ತಾನು ದುಡಿದು ಸಂಪಾದಿಸಿದ ಹಣವನ್ನು ತಾನೇ ಬಳಸಿಕೊಂಡು ಅವನೇಕೆ ಜೀವಿಸುವುದಿಲ್ಲ ಎಂದು ಕೇಳಬಹುದು. ಇದಕ್ಕೆ ಸರಿಯಾದ ಉತ್ತರವನ್ನರಿಯಬೇಕಾದರೆ ಮಾನವವಂಶದ ರಾಜಕೀಯ, ಸಾಮಾಜಿಕ ಇತಿಹಾಸವನ್ನು ಸಮಗ್ರವಾಗಿ ಪರಿಶೀಲಿಸಬೇಕಾಗುವುದು. ಸಂಕ್ಷೇಪವಾಗಿ ಹೇಳುವುದಾದರೆ, ಒಬ್ಬನು ಮತ್ತೊಬ್ಬನಿಗಾಗಿ ದುಡಿಯುವ ಆವಶ್ಯಕತೆ ಇಲ್ಲ—ಎಂಬುದು ಇತಿಹಾಸದಿಂದ ನಿದರ್ಶನಕ್ಕೆ ಬರುವ ಮಾತು.

ಎಲ್ಲ ಮಾನವಸಮಾಜಗಳಲ್ಲಿ ಕಾಡುಗಳನ್ನು ಕಡಿದು, ನೆಲವನ್ನು ಸಾಗುಮಾಡಿಕೊಂಡು, ತಮ್ಮ ತಮ್ಮ ಆಹಾರವನ್ನು ಬೆಳೆಸಿಕೊಂಡು ಹೊಟ್ಟೆ ತುಂಬಿಕೊಳ್ಳುವ ಸ್ವಾತಂತ್ರ್ಯವು ಪ್ರತಿ ಒಬ್ಬನಿಗೂ ಇದ್ದಿದ್ದರೆ ಒಬ್ಬನು ಮತ್ತೊಬ್ಬನಿಗಾಗಿ ಎಂದಿಗೂ ದುಡಿಯುತ್ತಿರಲಿಲ್ಲ. ಸೃಷ್ಟಿಯ ಸಂಪತ್ತು ಮೊಟ್ಟಮೊದಲು ಕೆಲವೇ ಜನರ ಸೊತ್ತು ಆಯಿತು. ಆರಂಭದಲ್ಲಿ ಮಾನವನು ಇದನ್ನು ಸಾಧಿಸಿಕೊಂಡದ್ದು ಪಾಶವೀಶಕ್ತಿಯಿಂದ. ಕೆಲವೊಂದು ಬಲಿಷ್ಠ ಜನರು ಅಲ್ಲಲ್ಲಿ ಗುಂಪುಗಳಾಗಿ, ಭೂಮಿಯನ್ನೆಲ್ಲ ವಶಪಡಿಸಿಕೊಂಡು ಉಳಿದವರನ್ನು ಗುಲಾಮರನ್ನೋ ದಾಸರನ್ನೋ ಮಾಡಿಕೊಂಡರು.

ಜನರು ಉದ್ಯೋಗಗಳಲ್ಲಿ ಪರಿಶ್ರಮದಿಂದ ವ್ಯಕ್ತಿಶಃ ಸ್ವತಂತ್ರವಾಗಿ ತಮ್ಮ ತಮ್ಮ ಉದ್ಯೋಗಗಳ ಹುಟ್ಟುವಳಿಯನ್ನು ಸಾಗಿಸುವವರೆಗೆ ಔದ್ಯೋಗಿಕ ಸುಲಿಗೆಗಾಗಲಿ ಹುಟ್ಟುವಳಿಯಲ್ಲಿ ಒಮ್ಮಿಂದೊಮ್ಮೆ ತೀವ್ರ ಹೆಚ್ಚು ಕಡಿಮೆಯಾಗುವುದಕ್ಕಾಗಲಿ ಆಸ್ಪದವಿರಲಿಲ್ಲ. ಆದರೆ ಹುಟ್ಟುವಳಿಯಲ್ಲಿ ಪ್ರಗತಿಯಾದಂತೆ, ಪಟ್ಟಣಗಳು ಬೆಳೆದಂತೆ, ಗುಲಾಮರು ಇಲ್ಲವೆ ಕೈಗಾರಿಕೆಗಳಲ್ಲಿ ನುರಿತವರು ಗುಂಪುಗೂಡಿ ಯಜಮಾನನೊಬ್ಬನಿಗೆ ವಿಧೇಯರಾಗಿ ದುಡಿಯುವಂತಹ ಪರಿಸ್ಥಿತಿ ಉಂಟಾಯಿತು. ಇವರ ಗಳಿಕೆಯಲ್ಲಿ ಅಸಮತೆಯೂ ಉಂಟಾಗತೊಡಗಿತು. ಔದ್ಯೋಗಿಕ ಕ್ಷೇತ್ರಗಳಲ್ಲಿ ಉಗಿ ಯಂತ್ರಗಳು ಬಳಕೆಗೆ ಬಂದಂದಿನಿಂದ ಔದ್ಯೋಗಿಕ ಸಂಪತ್ತಿನ ತೀವ್ರ ಅಭಿ

ವೃದ್ಧಿಯಾಗತೊಡಗಿತು. ಮತ್ತು ಕೆಲಸಗಾರರನ್ನು ಸುಲಿಯುವುದು ಅಂದಿನಿಂದಲೇ ಆರಂಭವಾಯಿತು.

ಸಮಾಜದಲ್ಲಿ ಇನ್ನೂ ಕೆಲವು ಗುಂಪುಗಳಿವೆ, ವರ್ಗಗಳಿವೆ. ಈ ವರ್ಗಗಳು ಬೇರೆಯವರನ್ನು ಕೆಲಸಕ್ಕೆ ಇಟ್ಟುಕೊಳ್ಳುವುದಿಲ್ಲ; ಬೇರೆಯವರಿಂದ ಗೇಣಿಯನ್ನೂ ಪಡೆಯುವುದಿಲ್ಲ, ಇಲ್ಲವೆ ಕಪ್ಪಕಾಣಿಕೆಗಳನ್ನೂ ಸ್ವೀಕರಿಸುವುದಿಲ್ಲ. ಆದರೂ ಇದು ಬಹು ಸಿರಿವಂತ ವರ್ಗವಾಗಿದೆ. ವ್ಯಾಪಾರಸ್ಥರು, ದಲ್ಲಾಲಿಗಳು, ಬ್ಯಾಂಕಿನವರು ಮುಂತಾದವರೆಲ್ಲ ಈ ವರ್ಗಕ್ಕೆ ಸೇರಿದವರು. ಇವರು ಸ್ವತಃ ಹಣದ ಉತ್ಪಾದನೆಮಾಡುವುದಿಲ್ಲ. ಉತ್ಪಾದಿಸುವವರ ಸುಲಿಗೆ ಮಾಡುವುದೂ ಇಲ್ಲ. ಹೇಗಿದ್ದರೂ ಇವರ ಸಂಪಾದನೆ, ಸಮಾಜವು ಉತ್ಪಾದಿಸಿದ ಸಂಪತ್ತಿನಿಂದಲೇ ಬಂದದ್ದೆಂಬುದು ಸ್ಪಷ್ಟ.

ಪರಿಶ್ರಮವೇ ಹಣದ ಉತ್ಪಾದನೆಯ ಮೂಲ. ಹೀಗಿದ್ದರೂ, ಪರಿಶ್ರಮಪಡುವ ಕೂಲಿಕಾರನಿಗೆ ಸಲ್ಲುವ ಅಲ್ಪಭಾಗವನ್ನು ಬಿಟ್ಟು ಉಳಿದುದೆಲ್ಲವೂ ದುಡಿಸಿಕೊಳ್ಳುತ್ತಿರುವ ಯಜಮಾನನಿಗೂ ಸುಲಿಗೆಗಾರನಿಗೂ ಸೇರುತ್ತದೆ. ಆದರೆ ಈ ವರ್ಗವು ಕೂಲಿಗಳಿಂದ ನಿರ್ಮಿತವಾದ ಎಲ್ಲ ವಸ್ತುಗಳನ್ನೂ ತಾನೇ ಉಪಯೋಗಿಸಿಕೊಳ್ಳಲಾರದು. ಅವುಗಳನ್ನು ಮಾರಲೇಬೇಕಾಗುವುದು; ಮತ್ತು ಇನ್ನುಳಿದುವುಗಳನ್ನು ಕೊಳ್ಳಲೇಬೇಕಾಗುವುದು. ದಲ್ಲಾಲಿಗಳೂ ವ್ಯಾಪಾರಿಗಳೂ ತಲೆದೋರುವುದು ಹೀಗೆ. ಇವರ ಕೈಯಲ್ಲಿಯೂ ಸ್ವಲ್ಪ ಹಣ ಉಳಿದುಕೊಳ್ಳುವುದು. ಬ್ಯಾಂಕುಗಳ ಒಡೆಯರೂ ಹೀಗೆಯೇ. ತಾವು ಸಾಲಕೊಟ್ಟ ಹಣಕ್ಕಾಗಿ ಇವರು ಬಡ್ಡಿಯನ್ನು ಪಡೆಯುತ್ತಾರೆ. ಆದರೆ ಈ ಬಡ್ಡಿಯನ್ನೂ ಅಷ್ಟೇ-ವಿಶೇಷ ಉಳಿತಾಯ (Surplus wealth)ದ ಹಣದಿಂದಲೇ ಕೊಡಲಾಗುತ್ತದೆ. ಲಾಭ, ಬಡ್ಡಿ, ಮಧ್ಯಸ್ಥನ ದಲಾಲಿ–ಇದೆಲ್ಲವೂ ಬರುವುದು ಈ ಉಳಿತಾಯದ ಹಣದಿಂದ. ಹೆಚ್ಚಾಗಿ ಉಳಿದ ಈ ಹಣವೇ ಕಾರಖಾನೆಗಳ ಒಡೆಯರ ಕೈಯಲ್ಲಿಯೂ ಉತ್ಪಾದನೆಯ ಗುತ್ತಿಗೆಗಾರರ ಕೈಯಲ್ಲಿಯೂ ಓಡಾಡುತ್ತದೆ. ಹಣವು ಹಣವನ್ನು ಎಂದಿಗೂ ಹುಟ್ಟಿಸಲಾರದು. ಕಂದಾಯ ಇಲ್ಲವೆ ವ್ಯಾಪಾರದ ಮಾಟಗಾರಿಕೆಯಿಂದ ದ್ರವ್ಯದ ಉತ್ಪಾದನೆಯಾಗಲಾರದು. ಬಂಡವಲುಗಾರರ ಆಟವೆಲ್ಲ ವಿಶೇಷ ಉಳಿತಾಯದ ಈ ಹಣವನ್ನು ಸ್ವಾಧೀಪಡಿಸಿಕೊಳ್ಳುವುದ

ರಲ್ಲಿದೆ. ಬಂಡವಲುಗಾರಿಕೆಯ ಸ್ಪರ್ಧೆಯ ಗುಟ್ಟು ಇರುವುದು ಇಲ್ಲಿ. ಇಂಥ ವ್ಯವಹಾರದ ಸೂಕ್ಷ್ಮರೀತಿಗಳನ್ನೇ ನಮ್ಮ ವಿಶ್ವವಿದ್ಯಾಲಯಗಳು ಇಷ್ಟೊಂದು ಪರಿಶ್ರಮದಿಂದ ಕಲಿಸುತ್ತವೆ.

ಇದನ್ನು ಇನ್ನೊಂದು ಸಲ ವಿವರಿಸುವಾ-ಏಕೆಂದರೆ ಈ ವಿವರಣೆ ಆಗತ್ಯ. ಜನತೆಯ ಶ್ರಮದ ಸುಲಿಗೆಯಾಗುವುದು ಉತ್ಪತ್ತಿಸಾಧನದ ಒಡೆತನದ ಮೂಲಕ. ಬಡವರನ್ನು ಸುಲಿವ ಈ ದುಡಿಮೆಯೇ ವಿಶೇಷ ಉಳಿತಾಯ—ಬಂಡವಲುಗಾರ ಸಮಾಜದ ಲಾಭ. ಬಂಡವಲುಗಾರ ಸಮಾಜದ ವಿವಿಧ ದಲ್ಲಾಲಿಗಳಿಗೆ ಇಂದಿನ ಸಮಾಜದ ಸೂಕ್ಷ್ಮ ಆರ್ಥಿಕ ರಚನೆಯ ಮುಖಾಂತರ ಹಣ ಸಲ್ಲುವುದು ಈ ಲಾಭದಿಂದಲೇ. ಯಾವುದೇ ರೀತಿಯಲ್ಲಿ ಧನೋತ್ಪತ್ತಿಯನ್ನು ಈ ದಲ್ಲಾಲಿಗಳೇ ಮಾಡುವರೆಂದು ನಂಬುವುದು ಶುದ್ಧ ತಪ್ಪು. ಅವರ 'ಧನಸಂಚಯ'ವೆಂದರೆ ಈ ವಿಶೇಷ ಉಳಿತಾಯದ ನಿಧಿಯಿಂದ ಆದಷ್ಟು ಹೆಚ್ಚು ಧನವನ್ನು ತಮ್ಮ ಕಡೆಗೆ ಸೆಳೆಯುವುದೆಂಬುದೇ ಅರ್ಥ. ಪ್ರಾಧ್ಯಾಪಕರು, ಡಾಕ್ಟರುಗಳು, ವಕೀಲರು ಎಲ್ಲರೂ ಈ 'ಪ್ರಮುಖ ನಿಧಿ'ಯಿಂದಲೇ ಹಣ ದೋಚಿಕೊಳ್ಳುವರು. ಆದರೆ ಇಲ್ಲಿ ಒಂದು ಅಪವಾದ. ಇವರಿಗೆ ಸಲ್ಲುವ ಹಣದ ಒಂದು ಭಾಗ ಶ್ರಮಜೀವಿಗಳಿಗೆ ದೊರಕುವ ಕಿಂಚಿತ್ ದ್ರವ್ಯದಿಂದಲೂ ಬರುವುದು.

ಮೊದಮೊದಲು ಜನರು ಸೃಷ್ಟಿಯ ಸಂಪತ್ತನ್ನು ಒತ್ತಾಯದಿಂದ ವೈಯಕ್ತಿಕ ಒಡೆತನಕ್ಕೆ ಒಳಗಾಗುವಂತ ಪ್ರಯತ್ನಿಸಿದರು. ಬಲಿಷ್ಠನು ತನಗೆ ಬೇಕಾದ ಭೂಭಾಗವನ್ನೂ ಇನ್ನಿತರ ವಸ್ತುಗಳನ್ನೂ ಒತ್ತಾಯದಿಂದ ತನ್ನ ಕೈಯಲ್ಲಿಟ್ಟುಕೊಂಡನು. ಇದಕ್ಕೆ 'ಬುನಾದಿ ಸಂಚಯ'ವೆಂದು ಹೇಳಬಹುದು. ಇದು ಬರಬರುತ್ತ ಬೆಳೆದು ಒಂದು ವ್ಯಕ್ತಿಯ, ಒಂದು ಸಂಸ್ಥೆಯ ಶಕ್ತಿ ಹೆಚ್ಚಿದಂತೆ ಅವರ ಒಡೆತನದಲ್ಲಿರುವ ಸಂಪತ್ತು ಬೆಳೆಯಿತು. ಕೆಲವೊಂದು ಪಾಶ್ಚಾತ್ಯ ರಾಷ್ಟ್ರಗಳು ಯಂತ್ರಸಾಮಗ್ರಿಗಳ ಮೂಲಕ ಔದ್ಯೋಗಿಕ ಕ್ರಾಂತಿಯನ್ನೆಬ್ಬಿಸಿ ಭಾರತದಂತಹ ಅಸಹಾಯ, ಬಲಹೀನ ರಾಷ್ಟ್ರಗಳನ್ನು ವಶಪಡಿಸಿಕೊಂಡವು. ಕಾರಖಾನೆಗಳು ಬಳಕೆಗೆ ಬಂದೊಡನೆ ಒಂದೊಂದು ಕಾರಖಾನೆಯಲ್ಲಿ ಲಕ್ಷಾಂತರ ಕೂಲಿಗಳನ್ನು ಕೆಲಸಕ್ಕಿಟ್ಟುಕೊಳ್ಳಲು ಸಾಧ್ಯವಾಗಿ, ಬಡ ಕೂಲಿಕಾರರ ಸುಲಿಗೆಗೆ ಮೊದಲಾಯಿತು.

ಈಗಿನ ಸಾಂಪತ್ತಿಕ ಅಸಮತೆಗೆ ಇದೇ ಕಾರಣವಾಗಿರುವುದರಿಂದ ಇವುಗಳ ನಿವಾರಣೆಗೆ ಸಾಧ್ಯವಾದವು ಎಂತಹಉ ಪಾಯಗಳನ್ನು ಕೈಕೊಳ್ಳ ಬಹುದೆಂಬುದನ್ನು ಊಹಿಸುವುದು ಕಷ್ಟವಲ್ಲ.

## ಅಸಮತೆಯ ನಿವಾರಣೆ

ಅಸಮತೆಯನ್ನು ಹೋಗಲಾಡಿಸಲು ಎರಡು ಉಪಾಯಗಳಿವೆ. ಅವು ಗಳನ್ನು ಕೈಕೊಂಡರೆ ಸಮತೆ ಸೌಖ್ಯಗಳಿಂದ ತುಂಬಿದ ಸಮಾಜವು ನಿರ್ಮಾಣವಾಗುವುದೆಂಬುದರಲ್ಲಿ ಸಂದೇಹವಿಲ್ಲ. ಮೊದಲನೆಯದೆಂದರೆ ಪ್ರತಿಯೊಬ್ಬನೂ ತನಗಾಗಿ ಕೆಲಸಮಾಡಬಹುದಾದ ಸ್ವಾತಂತ್ರ್ಯವಿರುವಂತೆ ಸಮಾಜವನ್ನು ಪುನರ್ರಚಿಸುವುದು. ಅವನು ಬೇರೆಯಾರಿಗೂ ಗೇಣಿ ಪೊಗದಿ ಗಳನ್ನು ಕೊಡದೆ ತನ್ನ ಹೊಲವನ್ನು ಸಾಗುಮಾಡಬಹುದು. ಇಲ್ಲವೆ ತನ್ನ ಉಪಕರಣಗಳಿಂದ ತನ್ನ ಮನೆಯಲ್ಲಿ ತನಗೆ ಬೇಕಾದ ಕೆಲಸವನ್ನು ಮಾಡ ಬಹುದು. ತನ್ನ ಕೈಯಿಂದ ಉಪಯೋಗಿಸಬಹುದಾದ ಉಪಕರಣಗಳ ನ್ನಲ್ಲದೆ ಹೆಚ್ಚಿನ ಉಪಕರಣಗಳನ್ನು ಇಟ್ಟುಕೊಳ್ಳುವ ಅಧಿಕಾರ ಯಾರಿಗೂ ಇರಕೂಡದು.

ಮೇಲೆ ಸೂಚಿಸಿದ ಬದಲಾವಣೆಯನ್ನು ಮಾಡುವುದಾದರೆ ಬಹು ಉಗ್ರ ಉಪಾಯಗಳನ್ನು ಕೈಕೊಳ್ಳಬೇಕಾಗುವುದೆಂಬುದು ಸ್ಪಷ್ಟ. ಇಂಥ ಸಮಾ ಜದ ಕಾರ್ಯವು ಸುಗಮವಾಗಿ ಸಾಗಬೇಕಾದರೆ ಒಂದು ಬಗೆಯ ಸಾಮಾ ಜಿಕ ನಿಯಂತ್ರಣವೂ ಸುವ್ಯವಸ್ಥೆಯೂ ಅತ್ಯಾವಶ್ಯಕ. ಇಂಥ ಸಮಾಜದಲ್ಲಿ ಉಗಿಬಂಡಿ, ತಂತಿ ಮುಂತಾದ ಯಾವ ಸಾಧನ ಸೌಕರ್ಯಗಳೂ ಇರಲಾ ರವು ಕಾಲುನಡಿಗೆ, ಚಕ್ಕಡಿ ಮುಂತಾದ ತೀರ ಹಳೆಯ ಸಾಧನಗಳಿಂದಲೇ ಪ್ರವಾಸ ಮುಂತಾದ ಕಾರ್ಯವನ್ನು ಸಾಗಿಸಬೇಕಾಗುತ್ತದೆ. ಈಗಿನ ವೈಜ್ಞಾನಿಕ ಸಂಶೋಧನಬಲದಿಂದ ಮುಂದುವರಿದ ರಾಷ್ಟ್ರಗಳೊಡನೆ ಇಂಥ ಸಮಾಜವನ್ನು ಹೋಲಿಸಿದರೆ ಇದು ತೀರ ದುರ್ಬಲವಾದದ್ದೂ ಶತ್ರುವಿನ ಬಾಯಿಗೆ ಬಹು ಸುಲಭವಾಗಿ ತುತ್ತಾಗುವಂಥದೂ ಎಂದು ಕಂಡುಬರುತ್ತದೆ. ಇಂಥ ಸಮಾಜದ ಉತ್ಪಾದನಾಶಕ್ತಿ ತೀರ ಕಡಿಮೆಯಾಗಿರುವುದರಿಂದ, ಭಾರತದಂತಹ ವಿಪುಲ ಜನಸಂಖ್ಯೆಯ ರಾಷ್ಟ್ರದ ಜೀವನದ ಮಟ್ಟವು ತೀರ ಕೆಳತರಗತಿಯದಾಗುವುದು.

ಇಂಥ ಸಮಾಜವನ್ನು ನಿರ್ಮಿಸುವುದು ಸಾಧ್ಯವಾಗಬಹುದಾದರೂ, ಅನೇಕ ಕಾರಣಗಳಿಗಾಗಿ ವಿಹಿತವಾಗಲಾರದು.

ಈ ಸಮಸ್ಯೆಯನ್ನು ಹೀಗೆ ಬಿಡಿಸುವುದೂ ಅಸಾಧ್ಯ. ಇಂಥ ಸಮಾಜವನ್ನು ನಿರ್ಮಿಸುವುದು ಸರ್ವಾಧಿಕಾರಿಯ ಹೊರತು ಬೇರೊಬ್ಬನಿಂದ ಶಕ್ಯವಿಲ್ಲ. ಮತ್ತು ಇಷ್ಟು ಕನಿಷ್ಟ ಉತ್ಪಾದನೆಯುಳ್ಳ ದೇಶದ ಸಮಾಜದಲ್ಲಿ ಸರ್ವಾಧಿಕಾರಿತ್ವಕ್ಕೆ ಒಂದು ಸಾಮಾಜಿಕ ತಳಹದಿಯೂ ಸಿಕ್ಕಲಾರದು.

## ಈ ಸಮಸ್ಯೆಗೆ ಸಾಮ್ಯವಾದೀ ಪರಿಹಾರ

ಈ ಸಮಸ್ಯೆಗೆ ಸಾಮ್ಯವಾದೀ ಪರಿಹಾರವೆಂದರೆ, ಉತ್ಪಾದನೆಯ ಸಾಧನಗಳ ಮೇಲಿನ ವೈಯಕ್ತಿಕ ಒಡೆತನವನ್ನು ಕೊನೆಗೊಳಿಸಿ ಸಮಾಜದ ಒಡೆತನವನ್ನು ಪ್ರಸ್ಥಾಪಿಸುವುದು.

ಉತ್ಪಾದನೆಯ ಸಾಧನಗಳು ವೈಯಕ್ತಿಕ ಒಡೆತನದಲ್ಲಿರುವ ಬದಲು ಸಮಾಜದ ಸ್ವಾಮಿತ್ವಕ್ಕೇ ಅಧೀನವಾದರೆ ಆರ್ಥಿಕ ಮೋಸಗಾರಿಕೆಯೂ ಆರ್ಥಿಕ ಅಸಮತೆಯೂ ಮಣ್ಣು ಗೂಡುವವು. ಈಗಿನ ಸಮಾಜದ ಮೂಲ–ಭೂತ ದೋಷವನ್ನೇ ನಿವಾರಿಸಿದಂತಾಗುವುದು. ವ್ಯಕ್ತಿಗಳ ಕೈಯಲ್ಲಿ ಧನ ಸಂಚಯವಾಗುವುದೆಂದರೆ ನಾನು ಮೇಲೆ ಹೇಳಿದಂತೆ ಬಡ ಕೂಲಿಕಾರರ ಸುಲಿಗೆಗೆ ಆಸ್ಪದವಾದಂತೆ. ಸಮಾಜದ ಸ್ವಾಮಿತ್ವವು ಮೊದಲಾದರೆ ಜನರು ಕೆಲವೊಂದು ವ್ಯಕ್ತಿಗಳ ಹಿತಕ್ಕಾಗಿ ದುಡಿಯುವ ಅಗತ್ಯವು ಉಳಿಯುವುದಿಲ್ಲ. ಅವರೆಲ್ಲರೂ ಸಾಮೂಹಿಕವಾಗಿ ತಮ್ಮೆಲ್ಲರ ಹಿತಕ್ಕಾಗಿ ದುಡಿಯ ತೊಡಗುವರು. ಅವರ ಉತ್ಪಾದನೆ ಇರುವುದು ಸಾಹುಕಾರನ ಹಿತಕ್ಕಾಗಿ ಅಲ್ಲ; ತಮ್ಮ ಹಿತಕ್ಕಾಗಿ. ಸಾಮಾಜಿಕ ಸ್ವಾಮಿತ್ವವೆಂದರೆ ಸಮಾಜದೊಳಗಿನ ಎಲ್ಲ ಸಾಮಾನ್ಯ ಜನರ ಹಿತಕ್ಕಾಗಿ ಧನಸಂಚಯ. ಮೊದಮೊದಲು ಈ ಹಣವನ್ನು ಒಬ್ಬೊಬ್ಬನ ದುಡಿಮೆಗನುಸಾರವಾಗಿ ಹಂಚಬೇಕಾಗುವುದು. ಕೊನೆಗೆ ವ್ಯಕ್ತಿಗಳ ಕೊರತೆಯನ್ನನುಸರಿಸಿ ಹಂಚಬೇಕು. ಸಂರಕ್ಷಣೆ, ಆಡಳಿತ, ಶಿಕ್ಷಣ, ಔಷಧಾಲಯ, ಆರ್ಥಿಕ ಅಭಿವೃದ್ಧಿ ಮುಂತಾದ ಸಾರ್ವಜನಿಕ ಕಾರ್ಯಗಳಿಗಾಗಿ ಮಾತ್ರ ಹಣವನ್ನು ಮೀಸಲಿಡಬೇಕು.

ಇದು ಸಾಮ್ಯವಾದದ ಮೂಲಭೂತ ತತ್ವ—ಉತ್ಪಾದನೆಯನ್ನು ಸಮಾಜದ ಸ್ವಾಮಿತ್ವಕ್ಕೆ ಒಳಪಡಿಸುವುದು. ಸಾಮ್ಯವಾದದ ತಳಹದಿಯ ಮೇಲೆ ಸಮಾಜದ ಪುನರ್ರಚನೆಯಾಗಬೇಕಾಗಿದ್ದರೆ ವೈಯಕ್ತಿಕ ಸಾಹುಕಾರಿಕೆಯನ್ನು ನಾಶಗೊಳಿಸಬೇಕು.

ಒಂದು ಸಣ್ಣ ಸಂಸ್ಥಾನವು ಸಾಮ್ಯವಾದವನ್ನು ಕೂಡಲೇ ಬಳಕೆಗೆ ತರುವುದು ಸಾಧ್ಯವಾಗಲಿಕ್ಕಿಲ್ಲ. ಆದರೆ ಇಂಥ ಸಂಸ್ಥಾನವು ಅಪಾರ ಉತ್ಪಾದನೆಯ ಕಾರಖಾನೆಗಳನ್ನು ಮೊದಲು ವಶಪಡಿಸಿಕೊಳ್ಳಬೇಕು. ಜಯವು ಕ್ರಮವಾಗಿ ಅದರಿಂದಲೇ ದೊರಕುವುದು.

ಹೆಚ್ಚು ಮುಂದುವರಿದ ರಾಷ್ಟ್ರಗಳು ಹುಟ್ಟುವಳಿಯನ್ನು ವಶಪಡಿಸಿಕೊಳ್ಳುವುದರ ಜೊತೆಗೆ ಬ್ಯಾಂಕುಗಳನ್ನೂ, ವ್ಯಾಪಾರ ಸಂಘ ಸಂಸ್ಥೆಗಳನ್ನೂ, ಸಾರಿಗೆಯ ಸಾಧನಗಳನ್ನೂ ನಿಯಂತ್ರಿಸಬೇಕು. ಇವು ಒಂದು ವಿಧವಾಗಿ ಉತ್ಪಾದನೆಗೆ ಸಹಾಯಕಾರಿಯಾಗುತ್ತವೆ. ಹುಟ್ಟುವಳಿಯ ಕೆಲಸವು ಅನಿಯಂತ್ರಿತವಾಗಿ ಸಾಗಿಸುವುದು ಇವುಗಳ ಕೆಲಸ. ಸಾಮ್ಯವಾದವು ಈ ಎರಡೂ ಕ್ಷೇತ್ರಗಳಲ್ಲಿ ಕಾಲಿಡಬೇಕು.

ಪಂಡಿತ್ ಜವಾಹರಲಾಲರ ಕೈಯಲ್ಲಿ ಅಧಿಕಾರ ಬಂದರೆ ಅವರು ಏನು ಮಾಡಬಲ್ಲರೆಂಬುದನ್ನು ಈಗ ಮಾತ್ರ ನಾವು ಹೇಳಬಲ್ಲೆವು.

೩

# ಸಾಮ್ಯವಾದವೂ ಭಾರತವೂ

೧ ಸಾಮ್ಯವಾದ ಮತ್ತು ಭಾರತೀಯ ಹಿನ್ನೆಲೆ

೨ ಸಾಮ್ಯವಾದವು ಭಾರತೀಯ ಸಂಸ್ಕೃತಿಗೆ ಮಾರಕವೆ ?

೩ ಹಳ್ಳಿಗಳ ಸಮಸ್ಯೆ

೪ ಭಾರತದಲ್ಲಿ ಸಹಕಾರೀ ಮತ್ತು ಸಾಮೂಹಿಕ ಸಾಗುವಳಿ

# ಸಾಮ್ಯವಾದವೂ ಭಾರತವೂ

## ೧

## ಸಾಮ್ಯವಾದ ಮತ್ತು ಭಾರತೀಯ ಹಿನ್ನೆಲೆ

ನಾವು ಭಾರತದಲ್ಲಿ ಒಂದು ಪರಕೀಯ ಪದ್ಧತಿಯನ್ನು ಬಳಕೆಗೆ ತರುತ್ತಿದ್ದೇವೆಂದೂ, ಭಾರತದ ಸಮಸ್ಯೆಗಳೂ ಅವುಗಳನ್ನು ಬಿಡಿಸುವ ರೀತಿಗಳೂ ವಿಶಿಷ್ಟವಾಗಿವೆಯೆಂದೂ ಜನರು ನಮ್ಮ ಬಗೆಗೆ ದೂರುತ್ತಲಿದ್ದಾರೆ.

ಹಿಂದುಸ್ಥಾನದ ಸಮಸ್ಯೆಗಳನ್ನಾಗಲಿ, ಅದರ ಐತಿಹಾಸಿಕ ಹಿನ್ನೆಲೆಯನ್ನಾಗಲಿ ದುರ್ಲಕ್ಷಿಸಬೇಕೆಂದು ನಾವು ಬಯಸುವುದಿಲ್ಲವೆಂಬುದನ್ನು ನಾನು ಸ್ಪಷ್ಟೀಕರಿಸಬೇಕಾಗಿದೆ. ಹಾಗೆ ದುರ್ಲಕ್ಷಿಸುವುದೆಂದರೆ ಮಾರ್ಕ್ಸ್‌ವಾದದ ವಿರುದ್ಧವಾಗಿ ನಡೆದಂತೆ. ಈಗಿನ ಸಮಸ್ಯೆಗಳನ್ನು ಬಿಡಿಸುವ 'ಭಾರತೀಯ' ರೀತಿಗಳನ್ನೂ ನಾವು ತಕ್ಕಷ್ಟು ಪರಿಶೀಲಿಸಿದ್ದೇವೆ. ಸದ್ಯದ ಪರಿಸ್ಥಿತಿಗನುಸರಿಸಿ ಹೇಳುವುದಾದರೆ ಅವು ಸಾಮ್ಯವಾದಕ್ಕೆ ಒಪ್ಪುವಂತಹವಲ್ಲವೆಂದು ನಾವು ಮನಗಂಡಿದ್ದೇವೆ. ಹೀಗೆ ಹೇಳುವುದರಿಂದ ಪ್ರಾಚೀನ ಭಾರತದ ಸಾಮಾಜಿಕ ತತ್ವಜ್ಞಾನಿಗಳನ್ನು ಹೀಯಾಳಿಸಿದಂತಾಗುವುದಿಲ್ಲ. ದುರ್ದೈವದಿಂದ ಭಾರತದ ಸ್ಥಿತಿಗತಿಗಳು ಬಹಳವಾಗಿ ಮಾರ್ಪಟ್ಟಿವೆ. ನಮ್ಮ ಪೂರ್ವಜರ ವಿಚಾರಗಳಿಗೂ ಇಂದಿನ ಸಂಗತಿಗಳಿಗೂ ಸಂಬಂಧವಿಲ್ಲ. ಕೆಲವೊಂದು ವಿಶಾಲ ತತ್ವಗಳು ಯಾವ ಕಾಲದಲ್ಲಿಯೂ ಯಾವ ದೇಶದಲ್ಲಿಯೂ ಅಬಾಧಿತವಾಗಿ ಉಳಿಯುತ್ತವೆ. ಆದರೆ ವಿಶಿಷ್ಟವಾದ ದೋಷಗಳನ್ನು ಹೋಗಲಾಡಿಸಲು ವಿಶಿಷ್ಟ ರೀತಿಗಳೇ ಬೇಕಲ್ಲದೆ, ವಿಶಾಲ ತತ್ವಗಳಿಂದ ಉಪಯೋಗವಾಗಲಾರದು. ಹಳೆಯ ಪದ್ಧತಿಗಳಿಗೂ ಹೊಸ ವಿಚಾರಗಳಿಗೂ ತಾಳಮೇಳವಿಲ್ಲ.

ಹಳೆಯ ತತ್ವಗಳು ಪ್ರಚಾರವಾದದ್ದು ಮಾನವ ಸಂಸ್ಕೃತಿ ಈಗಿನಕಿಂತಲೂ ಸರಳವಾಗಿದ್ದಾಗ. ಆಗ ಈಗಿನಂತೆ ಒಕ್ಕಲುತನವಾಗಲಿ ಉದ್ಯೋಗಗಳಾಗಲಿ ಪರರ ದುಡಿತದ ದುರುಪಯೋಗಮಾಡಿಕೊಳ್ಳುವಷ್ಟು ಬೆಳೆದಿರಲಿಲ್ಲ. ಎಲ್ಲ ಹುಟ್ಟುವಳಿಯೂ ಚಿಕ್ಕಪ್ರಮಾಣದಲ್ಲಿ ವೈಯಕ್ತಿಕವಾಗಿ

ಉಂಟಾಗುತ್ತಿತ್ತು. ಜನವಸತಿ ಕಡಿಮೆಯಾಗಿದ್ದು, ಪ್ರಕೃತಿಯು ಸುಸಮೃದ್ಧವಾಗಿತ್ತು. ಸಶಕ್ತ ಮನುಷ್ಯನಿಗೆ ಕಾಡನ್ನು ಕಡೆದು ಬೈಲುಮಾಡಿಕೊಂಡು, ಅಲ್ಲಿ ತನ್ನ ಕುಟುಂಬದೊಂದಿಗೆ ಹಾಯಾಗಿರಲು ಸಾಧ್ಯವಿತ್ತು.

ಆ ಸ್ಥಿತಿಗೂ ಈಗಿನ ಒಕ್ಕಲುತನದ ಮತ್ತು ಔದ್ಯೋಗಿಕ ಸಮಸ್ಯೆಗಳಿಗೂ ಅಜ ಗಜಾಂತರವಿದೆ. ಭೂಮಿಯ ಒಡೆತನವು ಭಾರತೀಯ ರೀತಿಗೆ ವಿರುದ್ಧವಾದುದು. ಗಿರಣಿಗಳೂ ಕಾರಖಾನೆಗಳೂ ಭಾರತಕ್ಕೆ ಹೊಸವು. ಮೂಲಸಮಸ್ಯೆ—ಬಹು ಜನರ ದುಡಿಮೆಯನ್ನು ಸ್ವಲ್ಪ ಮಾತ್ರ ಜನರು ಸುಲಿಯುವುದು—ಮನುವಿನ ಕಾಲದಲ್ಲಿರಲಿಲ್ಲ. ಭೂಮಿ ಮತ್ತು ಹುಟ್ಟುವಳಿಯ ಇತರ ಸಾಧನಗಳ ಒಡೆತನವೇ ಇದರ ತಂದೆತಾಯಿ.

## ಸಾಮ್ಯವಾದ ಯಾವ ಒಂದು ರಾಷ್ಟ್ರದ ಸೊತ್ತೂ ಅಲ್ಲ

ಈ ಸಮಸ್ಯೆ ಭಾರತದ ಪ್ರಾಚೀನ ಗತಕಾಲಕ್ಕೆ ಸಂಬಂಧಿಸಿಲ್ಲ ಮಾತ್ರವಲ್ಲ, ಆಧುನಿಕ ಜಗತ್ತಿನ ಸಮಸ್ಯೆಗಳೊಂದಿಗೆ ಸಂಪೂರ್ಣವಾಗಿ ಕೂಡಿಕೊಂಡಿದೆ. ಚೀನ, ಜಪಾನ್, ಇಂಗ್ಲಂಡ್, ಫ್ರಾನ್ಸ್, ಜರ್ಮನಿ, ಅಮೇರಿಕೆಯ ಸಂಯುಕ್ತ ಸಂಸ್ಥಾನಗಳು ಮುಂತಾದ ಎಲ್ಲ ದೇಶಗಳ ಬಹುಜನ ಸಮಾಜವೂ ಈ ಸಮಸ್ಯೆಯನ್ನು ಎದುರಿಸಬೇಕಾಗಿದೆ. ಉತ್ಪಾದನಾಶಕ್ತಿ ಬೆಳೆದುದರಿಂದ—ಉಗೆಯಂತ್ರ, ವಿದ್ಯುತ್‌ಶಕ್ತಿ ಮುಂತಾದುವುಗಳ ಸಂಶೋಧನೆಯಿಂದ—ದುಡಿಯುವ ಬಡವರ ಶಕ್ತಿಯನ್ನು ಹಿಂಡಿ ಹೀರಿಕೊಳ್ಳುವ ಮಾನವನ ವಿಚಿತ್ರಕಾರ್ಯವು ಆರಂಭವಾಗಿದೆ. ಬಂಡವಲುಗಾರಿಕೆಯ ಏರಾಟ ಪ್ರಾರಂಭವಾದದ್ದು ಇದರಿಂದಲೇ.

ಸಾಮ್ಯವಾದವು ಇದಕ್ಕೆ ಸಹಜವಾದ ಪ್ರತಿಕ್ರಿಯೆ. ಇದಕ್ಕೆ ರಾಷ್ಟ್ರೀಯ ಮೇರೆಗಳ ಬಂಧನವಿಲ್ಲ. ಇದಕ್ಕೆ ಇಂಗ್ಲಂಡು ಎಷ್ಟೋ ಜಪಾನೂ ಅಷ್ಟೇ; ಜರ್ಮನಿ ಎಷ್ಟೋ ಚೀನವೂ ಅಷ್ಟೇ; ಅಮೇರಿಕೆಯ ಸಂಯುಕ್ತ ಸಂಸ್ಥಾನಗಳು ಎಷ್ಟೋ, ಭಾರತವೂ ಅಷ್ಟೇ. ಬಂಡವಲುಗಾರಿಕೆಯ ಉದ್ದಾಮತನವು ಕಂಡುಬರುವಲ್ಲೆಲ್ಲ ಸಾಮ್ಯವಾದವೂ ಹಬ್ಬುವುದು. ಹಿಂದುಸ್ಥಾನ ಇದಕ್ಕೆ ಅಪವಾದವೇನೂ ಅಲ್ಲವೆಂಬುದನ್ನು ಪರಿಸ್ಥಿತಿಯೇ ಸೂಚಿಸುತ್ತದೆ.

ಇಲ್ಲಿ ಬಂಡವಲುಗಾರಿಕೆಯ ಪ್ರಭಾವ ಅಷ್ಟೊಂದು ಬಲವತ್ತರವಾಗಿ ಕಂಡುಬರಲಿಕ್ಕಿಲ್ಲ. ಸಾಹುಕಾರಿಕೆಯ ರೀತಿಗಳು ಬೇರೆ ವಿಧವಾಗಿರ ಬಹುದು. ಸಾಮ್ಯವಾದದ ಮಹತ್ವ ಇಲ್ಲಿಯ ಜನಸಾಮಾನ್ಯರಿಗೆ ಅಷ್ಟೊಂದು ತೀವ್ರವಾಗಿ ತಿಳಿದುಬರಲಿಕ್ಕಿಲ್ಲ. ಆದರೆ ಬಂಡವಲುಗಾರಿಕೆ ನಮ್ಮ ದೇಶ ದಲ್ಲಿಯೂ ಬೇರೂರಿ ನಿಂತಿರುವುದರಿಂದ ಇಲ್ಲಿ ಸಾಮ್ಯವಾದದ ಬೆಳೆವಣಿಗೆಯೂ ಅಗತ್ಯ. ಈ ದೇಶದಲ್ಲಾಗಲಿ ಬೇರೆ ಬಂಡವಲುಗಾರ ದೇಶದಲ್ಲಾಗಲಿ ಸಾಮ್ಯವಾದವು ತತ್ವತಃ ಒಂದೇ ಬಗೆಯದಾಗಿದೆ

## ಭಾರತೀಯ ಯೋಜನೆ

ನಮ್ಮದು ಪಾಶ್ಚಾತ್ಯರ ಅನುಕರಣವೆಂದು ನಮ್ಮನ್ನು ದೂರುವವರು ನಮ್ಮನ್ನು ಎದುರಿಸುತ್ತಿರುವ ಸಮಸ್ಯೆಗಳಿಗೆ ಭಾರತೀಯ ಪದ್ಧತಿಯ ಪರಿ ಹಾರವನ್ನು ಕಂಡುಹಿಡಿಯಬೇಕು. ಹಿಂದೀ ಸಮಸ್ಯೆಗಳ ವೈಶಿಷ್ಟ್ಯಗಳ ಬಗ್ಗೆಗೂ ಅವುಗಳ ಯೋಗ್ಯವಾದ ಪರಿಹಾರಗಳ ಬಗೆಗೂ ಬೇಕಾದಷ್ಟು ವಾದವಿವಾದವಾಗುತ್ತಲಿದ್ದರೂ ಇವುಗಳನ್ನು ಸುಲಭವಾಗಿ ತಿಳಿಯುವಂತೆ ಹೇಳುವವರು ಒಬ್ಬರೂ ಇಲ್ಲ. ಇದಕ್ಕೆ ಒಬ್ಬರು ಮಾತ್ರ ಅಪವಾದ.

ನನಗೆ ತಿಳಿದ ಮಟ್ಟಿಗೆ ಈ ಸಮಸ್ಯೆಯ ಸಾರಾಸಾರ ವಿವೇಚನೆ ಮಾಡಿ ದವರಲ್ಲಿ ಡಾ. ಭಗವಾನ್‌ದಾಸರು ಒಬ್ಬರೇ ಒಬ್ಬರು. ಈ ಪ್ರಶ್ನೆಯನ್ನು ಅವರು ಆಳವಾಗಿ ಅಭ್ಯಸಿಸಿ, ತಮಗೆ ತೋರಿದ ಭಾರತೀಯ ಪರಿಹಾರ ಗಳನ್ನು ಜನತೆಯ ಮುಂದೆ ಇರಿಸಿದ್ದಾರೆ. ಅವರಿಗೆ ಹೊಳೆದ ಈ ಸಮಸ್ಯೆ ಗಳ ಉತ್ತರವೇನೇ ಇರಲಿ. ಸ್ವರಾಜ್ಯದ ಸ್ವರೂಪವು ಎಂಥದಿರಬೇಕೆಂಬು ದನ್ನು ವಿವೇಚಿಸುವುದು ಅಗತ್ಯವೆಂಬ ಅವರ ಸೂಚನೆ ಬಹಳ ಸಮಂಜಸ ವಾಗಿ ತೋರುತ್ತದೆ. ಸಾಮ್ಯವಾದಿಗಳನ್ನು ಬಿಟ್ಟರೆ ಈ ವಿಚಾರಸರಣಿ ಯುಳ್ಳವರು ಇವರು ಒಬ್ಬರು ಮಾತ್ರ.

ಉಳಿದ ಅನೇಕ ಹಿಂದೀ ಸಂಸ್ಕೃತಿಪ್ರೇಮಿಗಳು, ನಾವು ಬರಿಯ ಪಾಶ್ಚಾತ್ಯರ ಅನುಕರಣಕಾರರೆಂದು ನಮ್ಮನ್ನು ದೂಷಿಸಿದರೆ ತಮ್ಮ ಕೆಲಸ ವಾಯಿತೆಂದು ತಿಳಿಯುತ್ತಾರೆ. ನಾವು ಭವಿಷ್ಯದಲ್ಲಿ ಎಂದೋ ಆಗಬಹು ದಾದ ವಿಷಯದ ಬರಿಯ ಕನಸನ್ನು ಕಾಣುತ್ತಲಿದ್ದೇವೆಂದು ತಿಳಿಗೇಡಿತನ

ದಿಂದ ನಮ್ಮನ್ನು ತೆಗಳುತ್ತಾರೆ. ಅವರು ಹೇಳುತ್ತಿರುವುದು 'ನಾವು ಮೊದಲು ಸ್ವರಾಜ್ಯ ಗಳಿಸೋಣ'ವೆಂದು. ತಮ್ಮ ದೋಷಗಳನ್ನು ತಿಳಿದುಕೊಳ್ಳದೆ ಇವರು ತೆಗಳುವುದನ್ನು ಕಂಡು ನಾವು ನಗಬೇಕಾಗಿದೆ. ಸ್ವರಾಜ್ಯ ದೊರೆತ ಬಳಿಕ ಯಾವ 'ವಾದ'ವನ್ನಾದರೂ ಸ್ವೀಕರಿಸಬಹುದು-ಆದರೆ ಸಾಮ್ಯ ವಾದವನ್ನು ಮಾತ್ರ ಕೂಡದು ಎಂದು ಇವರು ಸಾರುವುದರ ಮೂಲಕ ಇವರ ಮನೋವೃತ್ತಿ ಹೇಗಿದೆ ಎಂಬುದು ಸ್ಪಷ್ಟವಾಗುತ್ತದೆ.

ಹಿಂದೀ ಸಂಸ್ಕೃತಿಯ ಇಂತಹ ಡಾಂಭಿಕ ಪುರಸ್ಕರ್ತರು, ಡಾ. ಭಗವಾನ್‌ದಾಸರು ತೋರಿಸುತ್ತಿರುವ ಮನುಸ್ಮೃತಿಯೊಳಗಿನ ಸಾಮ್ಯ ವಾದದ ತತ್ವಗಳನ್ನು ಚಿತ್ತೈಸುವುದಿಲ್ಲ. ಡಾ. ಭಗವಾನ್‌ದಾಸರ ಪ್ರಾಚೀನ ಮತ್ತು ಅರ್ವಾಚೀನ ಸಶಾಸ್ತ್ರೀಯ ಸಾಮ್ಯವಾದದ ಮಾತು ಕಿವುಡನ ಮುಂದೆ ಕಿನ್ನರಿ ಬಾರಿಸಿದಂತಾಗಿದೆ.

ಇಲ್ಲಿ ಒಂದು ದೃಷ್ಟಾಂತವನ್ನು ಹೇಳುತ್ತೇನೆ. ೧೯೩೪ರ ಅಸೆಂಬ್ಲಿ ಚುನಾವಣೆಯಲ್ಲಿ ಈ ತಜ್ಞ ಡಾಕ್ಟರರು 'ಹಿಂದೀ ಸಂಪ್ರದಾಯಕ್ಕನುಸಾರ ವಾಗಿ ಜನಸಾಮಾನ್ಯರು ತಮ್ಮ ಮುಂದಾಳುಗಳನ್ನು ಆಯ್ದು, ಕಾಯಿದೆ ಕಾನೂನುಗಳನ್ನು ಮಾಡಲು ಅವರನ್ನು ಕೇಳಿಕೊಳ್ಳಬೇಕೇ ಹೊರತು ಹುರಿಯಾಳುಗಳು ಮುಂದಾಳುತನದ ಭಿಕ್ಷೆಗಾಗಿ ಮತದಾರರ ಬಳಿಗೆ ಹೋಗುವುದು ಸರಿಯಲ್ಲ'ವೆಂದು ಸೂಚಿಸಿದ್ದರು. ಹಿಂದೀ ಸಂಸ್ಕೃತಿ ಪ್ರೇಮಿಗಳು ಆಗ ಡಾ. ಭಗವಾನ್‌ದಾಸರ ಸೂಚನೆಯನ್ನೇನೂ ಲೆಕ್ಕಿಸಲಿಲ್ಲ. ಈ ಡಾಕ್ಟರರು ಬರಿಯ ಮನುವಿನ ಸಿದ್ಧಾಂತಗಳನ್ನು ಬಡಬಡಿಸುವವರು ಎಂದು ಎಷ್ಟೋ ಜನರು ಭಾವಿಸಿದರು.

'ಹಿಂದೀಯತ್ವ'ವೆಂಬುದು ಹಳೆಯ ತಪ್ಪು ಪದ್ಧತಿಗಳನ್ನು ಬಿಡಲು ಒಲ್ಲದ ಮನೋಭೂಮಿಕೆಯ ಒಂದು ಆವರಣ. ಸಾಮ್ಯವಾದವು ಭಾರ ತೀಯ ರೀತಿಗೆ ವಿರುದ್ಧವಾಗಿದೆ ಎಂದು ಇಂಥ ಜನರು ಮಾತ್ರ ಹೇಳ ಬಹುದು. ಇಷ್ಟೆಲ್ಲವನ್ನೂ ತೆಗಳಿದ ಇವರೇ ಇಂದು ಭಾರತಕ್ಕೆ ಒಂದು ರಾಜ್ಯಘಟನೆಯನ್ನು ಸಿದ್ಧಪಡಿಸಲು ಕುಳಿತರೆ ಇವರು ಭಾರತೀಯ ರೀತಿಗೆ ವಿರುದ್ಧವಾದ ಪಾಶ್ಚಾತ್ಯ ಪ್ರಜಾಪ್ರಭುತ್ವ ಪದ್ಧತಿಯನ್ನೇ ಅನುಸರಿಸುವುದ ರಲ್ಲಿ ಸಂದೇಹವಿಲ್ಲ.

## ೨

# ಸಾಮ್ಯವಾದವು ಭಾರತೀಯ ಸಂಸ್ಕೃತಿಗೆ ಮಾರಕವೆ ?

ಭಾರತದ ಪರಿಸ್ಥಿತಿ ವಿಶಿಷ್ಟವಾಗಿದೆ ಎಂದು ಯಾವಾಗಲೂ ಹೇಳುತ್ತಾರೆ. ಭಾರತದ ಸಾಂಪ್ರದಾಯಗಳು ಬೇರೆ; ಔದ್ಯೋಗಿಕ ಕ್ಷೇತ್ರದಲ್ಲಿ ಭಾರತವು ತೀರ ಹಿಂದುಳಿದ ದೇಶ; ಆದುದರಿಂದ ಸಾಮ್ಯವಾದವು ಭಾರತಕ್ಕೆ ಅನ್ವಯಿಸಲಾರದೆಂದು ಅವರ ಹೇಳಿಕೆ.

ಸಾಮ್ಯವಾದದ ಮೂಲತತ್ವಗಳಿಗೆ ಭಾರತದಲ್ಲಿ ಬೆಲೆ ಇಲ್ಲ ಎಂದು ಇದರ ಅರ್ಥವಾದರೆ ಇದಕ್ಕಿಂತ ಹೆಚ್ಚಿನ ಭ್ರಮೆ ಮತ್ತೊಂದಿಲ್ಲ.

ಧನಸಂಚಯವಾಗಲು ಬೇರೆ ದೇಶಗಳಲ್ಲಿದ್ದ ಕಾರಣಗಳೇ ಭಾರತದಲ್ಲಿಯೂ ಇವೆ. ಅದನ್ನು ತಡೆಯಲು ಬೇರೆ ದೇಶಗಳಲ್ಲಿ ಯಾವ ಹಂಚಿಕೆಗಳನ್ನು ಕೈಕೊಳ್ಳಬೇಕಾಗುವುದೋ ಅವೇ ಹಂಚಿಕೆಗಳನ್ನು ಭಾರತದಲ್ಲಿಯೂ ಕೈಕೊಳ್ಳಬೇಕಾಗುತ್ತದೆ. ಈಗ ಯೋಚಿಸಬೇಕಾದುದು ಭಾರತದ ಸ್ಥಿತಿಗತಿಗಳ ವೈಶಿಷ್ಟ್ಯಕ್ಕೆ ಅನುಗುಣವಾಗಿ ಸಾಮ್ಯವಾದದ ತತ್ವಗಳನ್ನು ಯಾವ ರೀತಿಯಲ್ಲಿ ಯಾವ ಕಾಲಕ್ಕೆ ಬಳಕೆಯಲ್ಲಿ ತರಬೇಕು ಎಂಬುದನ್ನು ಮಾತ್ರವೇ ಹೊರತು ಸಾಮ್ಯವಾದದ ತತ್ವಗಳನ್ನೇ ರೂಪಾಂತರಿಸುವುದನ್ನಲ್ಲ. ಅಸಮಾನ ಹಂಚುವಿಕೆಯನ್ನೂ ಬಡ ಕೂಲಿಕಾರರ ರಕ್ತಶೋಷಣೆಯನ್ನೂ ನಿಲ್ಲಿಸಲು ಜಗತ್ತಿನ ಉಳಿದ ಭಾಗಗಳಲ್ಲಿ ಹುಟ್ಟುವಳಿಯ ಸಾಧನದ ಒಡೆತನದ ಸಮಾಜೀಕರಣವು ಆವಶ್ಯವೆನಿಸಿದರೆ ಭಾರತದಲ್ಲಿಯೂ ಅದು ಅಗತ್ಯವೆನಿಸಲೇಬೇಕು.

ಹಿಂದೀ ಸಂಪ್ರದಾಯಗಳು, ನನಗೆ ಗೊತ್ತಿದ್ದಮಟ್ಟಿಗೆ, ಜೀವನದಲ್ಲಿ ಸೌಕರ್ಯಗಳನ್ನು ಎಲ್ಲರೂ ಸಮನಾಗಿ ಉಪಭೋಗಿಸಬೇಕೆನ್ನುವ ತತ್ವಕ್ಕೆ ವಿರುದ್ಧವಾಗಿಲ್ಲ. ವ್ಯಕ್ತಿತ್ವವೇ ಹಿಂದೀ ಸಂಸ್ಕೃತಿಯ ವೈಶಿಷ್ಟ್ಯವೆಂದೂ ಅದು ಸಾಮ್ಯವಾದಕ್ಕೆ ವಿರುದ್ಧವಾಗಿದೆಯೆಂದೂ ಹೇಳುವುದುಂಟು. ಹೀಗೆ ಹೇಳುವುದೆಂದರೆ ತತ್ವವನ್ನರಿಯದೆ ಶಾಬ್ದಿಕ ವಿವಾದದಲ್ಲಿ ಕಾಲಕಳೆದಂತೆ. ವ್ಯಕ್ತಿತ್ವಕ್ಕೆ ನಮ್ಮ ಸಂಸ್ಕೃತಿಯಲ್ಲಿ ಮಹತ್ವವಿದೆ ಎಂಬುದರ ಅರ್ಥವೇನೆಂದರೆ

ವ್ಯಕ್ತಿಯು ತನ್ನ ಪರಿಪೂರ್ಣತೆಗಾಗಿ ಹೆಣಗಬೇಕೆನ್ನುವುದು-ವ್ಯಕ್ತಿಯ ಸೌಖ್ಯಕ್ಕಾಗಿ ಒಂದೊಂದು ವ್ಯಕ್ತಿಯೂ ಪ್ರಯತ್ನಿಸಬೇಕೆಂದಲ್ಲ. ಇಂಥ ಸಂಕುಚಿತ ದೃಷ್ಟಿ ಇರುವುದು ಬಂಡವಲುಗಾರರ ಸಮಾಜದಲ್ಲಿ ಮಾತ್ರ. ವೈಯಕ್ತಿಕ ಪರಿಪೂರ್ಣತೆಯೇ ಧ್ಯೇಯವಾದರೆ, ಇಂಥ ಪರಿಪೂರ್ಣತೆ ಸಮಾಜದ ಹಿತಕ್ಕಾಗಿ ಹೆಣಗುವುದರಿಂದಲೇ ಸಾಧ್ಯವೆಂದು ಸಾಮ್ಯವಾದಿಗಳು ಸಹಜವಾಗಿ ಹೇಳಬೇಕಾಗುತ್ತದೆ. ಟ್ರಾಟ್‌ಸ್ಕಿಯು ಎಲ್ಲಿಯೋ ಒಂದು ಕಡೆ 'ಪ್ಲೇಟೋ ಅಥವಾ ಮಾರ್ಕ್ಸನ ಘನತೆಯನ್ನು ಸಾಮಾನ್ಯನು ಸಾಮ್ಯವಾದೀ ಸಮಾಜದಲ್ಲಿಯೇ ಪಡೆಯಬಹುದೆಂ'ದು ಹೇಳಿದಂತಿದೆ

ಕೊನೆಯದಾಗಿ, ಭಾರತದ ಔದ್ಯೋಗಿಕ ಹಿಂದುಳಿಯುವಿಕೆಯಿಂದ ನಾವೇನೂ ಧೈರ್ಯಗೆಡಬೇಕಾಗಿಲ್ಲ. ಅದರಿಂದ ನಮಗೆ ಹೆಚ್ಚಿನ ವಿರೋಧವೇನೂ ಉಂಟಾಗಲಾರದು. ಉದ್ಯೋಗಗಳಲ್ಲಿ ಹಿಂದುಳಿದ ಕೆಲವೊಂದು ಭಾಗಗಳಲ್ಲಿ ರಶಿಯವು ಏನುಮಾಡುತ್ತಿದೆಯೆಂಬುದನ್ನು ನಾವು ನೋಡಬೇಕು. ಸಾಮ್ಯವಾದವನ್ನು ಅಂಥಲ್ಲಿ ರೂಢಿಯಲ್ಲಿ ತರುವುದೇ ಹೆಚ್ಚು ವಿಹಿತವೆಂದು ಇದರಿಂದ ಕಂಡುಬರುವುದು.

ಈ ಕಾರಣಗಳಿಂದಲೇ, ಭಾರತಕ್ಕೆ ಸ್ವಾತಂತ್ರ್ಯ ದೊರೆತ ಬಳಿಕ, ಇಲ್ಲಿ ಸಾಮ್ಯವಾದದ ಒಂದು ಸಂಘವನ್ನು ಸ್ಥಾಪಿಸಬೇಕೆಂಬುದು ನಮ್ಮ ಪಕ್ಷದ ಹೆಗ್ಗುರಿ.

೩

# ಹಳ್ಳಿಗಳ ಸಮಸ್ಯೆ

ಕಾಂಗ್ರೆಸ್ಸಿಗರಲ್ಲಿ ಹಲವರು ಹಳ್ಳಿಯ ವಿಷಯವಾಗಿ ಬಹಳ ಆಸಕ್ತಿಯುಳ್ಳವರಾಗಿದ್ದಾರೆ. ಸಾಮ್ಯವಾದಿಗಳೆಂದರೆ ಯಂತ್ರಪ್ರಿಯರೆಂದೂ ಹಳ್ಳಿಗಳನ್ನು ಹಾಳುಗೆಡವಿ ಪಟ್ಟಣಗಳನ್ನು ಬೆಳೆಸಲು ಬಯಸುವವರೆಂದೂ ಇವರು ತಪ್ಪು ತಿಳಿದುಕೊಂಡಿದ್ದಾರೆ.

ಈ ಜನರ ಆಧುನಿಕ ಪಟ್ಟಣಗಳ ವಿರುದ್ಧವಾದ ದೂರು ಇಷ್ಟೇ: ಮಾನವನ ಈ ರಾಕ್ಷಸೀ ವಸತಿಸ್ಥಳಗಳು-ಅವು ಕಿಕ್ಕಿರಿದು ತುಂಬಿರುವ ರೀತಿ.

ಅವುಗಳ ಅನಾರೋಗ್ಯಕರವಾದ ಸ್ಥಿತಿ, ಅವುಗಳ ಸಂದುಗೊಂದುಗಳು, ವಾಹನಗಳ ತಲೆಬೇಸರಿಡುವ ಓಡಾಟ, ಮುಂತಾದುವೆಲ್ಲ-ಮನಸ್ಸಿಗೆ ಬೇಸರವನ್ನುಂಟುಮಾಡುತ್ತಿವೆ. ಅವುಗಳಲ್ಲಿ ವಾಸಿಸುವುದು ಅಪಾಯಕರವೆಂದೂ ಅವು ಉತ್ತಮ ಜೀವನಕ್ರಮವನ್ನು ಸಾಗಿಸಲು ಅಯೋಗ್ಯವೆಂದೂ ನಮ್ಮಲ್ಲಿ ಭಾವನೆಯನ್ನು ಹುಟ್ಟಿಸುತ್ತವೆ. ದೊಡ್ಡ ಪಟ್ಟಣಗಳಂತೂ ಅನೇಕ ಪಟ್ಟಣಿಗರಿಗೆ ನರಕಯಾತನೆಯನ್ನುಂಟುಮಾಡುತ್ತವೆ. ಅಲ್ಲಿಯ ನಾಟಕ ಗೃಹ, ಸಿನೇಮಾ ಮಂದಿರಗಳು ಮನಸ್ಸಿಗೆ ತಾತ್ಪೂರ್ತಿಕ ಆನಂದವನ್ನೀಯಬಹುದಾದರೂ ಅನೇಕರಿಗೆ ಕೂಡಲೇ ಹೇಸಿಕೆಯಾಗುತ್ತದೆ. ನಿಸರ್ಗಸಿದ್ಧ ಸುಂದರವಾದ ವಸ್ತುಗಳಿಂದ ಹೃದಯವು ಆನಂದಪಡಬಲ್ಲುದು ; ವ್ಯಕ್ತಿತ್ವವು ಬೆಳೆಯಬಲ್ಲುದು. ಆದರೆ ಈ ನಾಟಕ-ಚಿತ್ರಮಂದಿರಗಳಿಂದ ಇಂತಹದೇನೂ ದೊರೆಯುವುದಿಲ್ಲ.

ಆಧುನಿಕ ಪಟ್ಟಣಗಳು ಜನಸಾಮಾನ್ಯರ ಕುತ್ತಿಗೆ ಮುರಿದು ತಮ್ಮ ವೈಭವವನ್ನು ಬೆಳಸಿಕೊಂಡಿವೆ. ಕೇವಲ ಹಳ್ಳಿಗರಿಗೆ ಮಾತ್ರವಲ್ಲ-ಪಟ್ಟಣದ ಕೂಲಿಕಾರರಿಗೂ ಅವುಗಳ ಹಿಂಸೆ ತಪ್ಪಿದ್ದಲ್ಲ. ಅವು ಹೀಗೆ ಬಡವರ ನೆತ್ತರು ಹೀರುವುದರಿಂದ ಹಳ್ಳಿಪಟ್ಟಣಗಳ ನಡುವೆ ಒಂದು ಬಗೆಯ ಹೋರಾಟವುಂಟಾಗಿ ಹಳ್ಳಿಗಳಿಗೇ ಹೆಚ್ಚಿನ ಹಾನಿಯಾಗುತ್ತದೆ. ಪಟ್ಟಣಗಳಲ್ಲಿ ಕಲೆ, ಜ್ಞಾನ, ದುಂದುಗಾರಿಕೆ, ಸುಖ ಮುಂತಾದುವೆಲ್ಲವೂ ಒಟ್ಟುಗೂಡಿರುವುದರಿಂದ ಹಳ್ಳಿಗಳು ಉಲಕ್ಷಿಸಲ್ಪಟ್ಟಿವೆ. ಪಟ್ಟಣಗಳ ಬೆಳೆವಣಿಗೆಗೆ ಹಳ್ಳಿಗಳೇ ಸಹಾಯಕಾರಿಯಾಗಿದ್ದರೂ ಅದರ ಪ್ರತಿಫಲ ಮಾತ್ರ ಹಳ್ಳಿಗಳಿಗೆ ಮಾರಕವಾಗಿದೆ.

ಇದೆಲ್ಲ ನಿಜವಾಗಿದ್ದರೂ ಸಾಮ್ಯವಾದವು ಸಮಾಜದ ಈ ಬಗೆಯ ಅಸಮಾನತೆಗೆ ಉತ್ತೇಜನಕೊಡುತ್ತದೆಂದು ತಿಳಿಯುವುದು ಸರಿಯಲ್ಲ. ಸಾಮ್ಯವಾದವು ಜನ್ಮತಾಳಿದ್ದು ಸಮಾಜದ ಸಮತೆಯನ್ನು ಸಾಧಿಸುವುದಕ್ಕಾಗಿ. ಸಮಾಜದ ಎಲ್ಲ ವ್ಯಾಪಾರಗಳಲ್ಲಿ ಸಮತೂಕವನ್ನುಂಟುಮಾಡುವುದೇ ಅದರ ಗುರಿ. ಸಾಮ್ಯವಾದದ ತಳಹದಿಯ ಮೇಲೆ ರಚಿತವಾಗುವ ಹಳ್ಳಿಗಳಾಗಲಿ ಪಟ್ಟಣಗಳಾಗಲಿ ಈಗಿನ ಹಳ್ಳಿ-ಪಟ್ಟಣಗಳಂತೆ ಇರಲಾರವು. ಹಳ್ಳಿ ಪಟ್ಟಣಗಳೊಳಗಿನ ಈಗಿನ ವ್ಯತ್ಯಾಸವನ್ನು ಹೋಗಲಾಡಿಸುವುದೇ ಸಾಮ್ಯವಾದದ ಗುರಿ.

ಸಾಮ್ಯವಾದಿಯು ಯಂತ್ರಗಳಿಗೆ ಹೆಚ್ಚು ಮಹತ್ವಕೊಡುವುದೇನೋ ನಿಜ. ಆದರೆ ಅವನಿಗೆ ಯಂತ್ರಗಳೆಂದರೆ ಬಡವರ ರಕ್ತಶೋಷಣೆಯ ಸಾಧನವಲ್ಲ. ಯಂತ್ರವು ದುಡಿತಕ್ಕೆ ಸಹಾಯಕಾರಿ ಎಂದು ನಮ್ಮ ಭಾವನೆ. ಅದು ಮನುಷ್ಯನ ಶ್ರಮವನ್ನು ಕಡಿಮೆಮಾಡಬಲ್ಲುದು. ಅಲ್ಪಶ್ರಮದಿಂದ ಅಧಿಕ ಹುಟ್ಟುವಳಿಯನ್ನು ತರಬಲ್ಲುದು. ಜಲವಾಯುಗಳನ್ನು ಗೆಲ್ಲಲು ನಮಗೆ ಅದು ಸಹಕಾರಿ.

ಯಂತ್ರವು ಪಟ್ಟಣಗಳ ಪಾಪಪೂರಿತ ಜೀವನಕ್ರಮವನ್ನು ಹೆಚ್ಚಿಸುವುದೆಂದು, ಹಳ್ಳಿಗಳ ಆರ್ಥಿಕ ಸ್ಥಿತಿಯನ್ನು ಹದಗೆಡಿಸಿ ನಿರುದ್ಯೋಗವನ್ನು ಹೆಚ್ಚಿಸುವುದೆಂದು ಭಾವಿಸುವುದು ಸರಿಯಲ್ಲ. ಕೆಲವೊಂದು ವ್ಯಕ್ತಿಗಳು ಯಂತ್ರಗಳನ್ನು ತಮ್ಮ ಒಡೆತನದಲ್ಲಿಟ್ಟುಕೊಂಡು ತಮ್ಮ ಸ್ವಾರ್ಥಕ್ಕಾಗಿ, ಸುಖಕ್ಕಾಗಿ ಅವುಗಳನ್ನು ಉಪಯೋಗಿಸಿಕೊಂಡರೆ ಇಂಥ ಅನರ್ಥಗಳು ನಡೆಯುವುದೇನೋ ನಿಜ. ಇಂಥ ಶಕ್ತಿವಂತ ಸಾಧನಗಳನ್ನು ಸಮಾಜವು ತನ್ನ ಕೈಯಲ್ಲಿರಿಸಿಕೊಂಡು ಅಖಿಲ ಸಮಾಜದ ಸುಖಕ್ಕಾಗಿ ಅವುಗಳನ್ನು ಉಪಯೋಗಿಸಿಕೊಂಡರೂ ಇಂಥ ಅನರ್ಥಗಳು ಸಂಭವಿಸುವವು ಎಂದು ಊಹಿಸುವುದು ತೀರ ತಿಳಿಗೇಡಿತನ.

ಸಾಮ್ಯವಾದದ ಯೋಜನೆಯಂತೆ ಪಟ್ಟಣಗಳನ್ನು ಪದ್ಧತಿಗನುಸಾರವಾಗಿ ಕಟ್ಟಲಾಗುವುದು ; ಉದ್ಯೋಗಗಳನ್ನು ಒಂದೇ ಕಡೆಯಲ್ಲಿ ಕೇಂದ್ರೀಕರಿಸುವ ಬದಲು ವಿಸ್ತಾರವಾಗಿ ವಿಭಾಗಿಸಲಾಗುವುದು. ಈ ವಿಭಜನೆಯನ್ನು ಭೌಗೋಲಿಕ, ಆರ್ಥಿಕದೃಷ್ಟಿಯಿಂದ ಅನುಕೂಲವಾಗುವಂತೆ ಮಾಡಲಾಗುವುದು. ಹಳ್ಳಿಗಳು ಈಗಿನಂತೆ ಕೆಲವೊಂದು ಗುಡಿಸಲುಗಳ ಗುಂಪುಗಳಾಗಿ, ವಿಸ್ತೃತ ಜಗತ್ತಿನಿಂದ ದೂರನಾಗಿ ಉಳಿಯದೆ ಒಳ್ಳೇ ಪ್ರಗತಿಹೊಂದಿದ ಜನಸ್ಥಾನಗಳಾಗುವವು. ಉಗಿಬಂಡಿ, ಮಾರ್ಗ, ಬಾನುಲಿ, ಟೆಲಿಫೋನ್ ಮುಂತಾದವುಗಳ ಮೂಲಕ ಬಾಹ್ಯಜಗತ್ತಿನೊಡನೆ ನಿಕಟ ಸಂಬಂಧವುಳ್ಳವುಗಳಾಗುವವು. ಪಟ್ಟಣಗಳಂತೆ ಹಳ್ಳಿಗಳೂ ಉದ್ಯೋಗಗಳ ಉತ್ಪಾದನೆಯ ಕೇಂದ್ರಗಳಾಗುವವು. ಒಂದೊಂದು ಹಳ್ಳಿಯಲ್ಲಿಯೂ ಗ್ರಾಮಪಂಚಾಯತು, ಶಾಲೆಗಳು, ವಿನೋದ ಮಂದಿರಗಳು, ವಸ್ತು ಸಂಗ್ರಹಾಲಯ ಮುಂತಾದುವು ಕಂಡುಬರುವವು.

೮

# ಭಾರತದಲ್ಲಿ ಸಹಕಾರೀ ಮತ್ತು ಸಾಮುದಾಯಕ ಒಕ್ಕಲುತನ

[ಸಹಕಾರೀ ಮತ್ತು ಸಾಮುದಾಯಕ ಒಕ್ಕಲುತನಕ್ಕೆ ಸರಕಾರವು ಉತ್ತೇಜನಕೊಡುವ ಸಮಸ್ಯೆ ಭಾರತದಲ್ಲಿ ಬಹಳ ಮಹತ್ವದ್ದು. ಇಲ್ಲಿ ಜಯಪ್ರಕಾಶರ ಅಭಿಪ್ರಾಯಗಳನ್ನು ಕೊಟ್ಟಿದೆ. ಇದರೊಡನೆಯೇ, ಒಕ್ಕಲಿಗನೇ ಒಡೆಯನಾಗಬಹುದಾದ ಮುಂದಿನ ಹೆಜ್ಜೆಯ ಬಗೆಗೂ ಅವರು ನಮಗೆ ಎಚ್ಚರಿಕೆ ಕೊಟ್ಟಿದ್ದಾರೆ—ಸಂಪಾದಕ.]

["ಸಾಮೂಹಿಕ ಅಧಿಕಾರವು ನಮ್ಮ ಧ್ಯೇಯವಿರುವಾಗ, ಭೂಮಿಯನ್ನು ಒಕ್ಕಲಿಗರಲ್ಲಿ ಹಂಚಿಬಿಡಬೇಕೆಂಬ ವಿಚಾರ ವಿಲಕ್ಷಣವಾಗಿ ತೋರಬಹುದು. ಸಾಮೂಹಿಕ ಅಧಿಕಾರವೂ ಭೂಮಿಯ ಸಾಮೂಹಿಕ ಸಾಗುವಳಿಯೂ ಸಾವಕಾಶವಾಗಿ ಪ್ರಗತಿಹೊಂದುವ ಸಂಗತಿಯಾದುದರಿಂದ ಈಗ ನಾವು ಒಕ್ಕಲಿಗರ ಒಡೆತನವನ್ನೇ ಮನ್ನಿಸಿ ಮುಂದೆ ಸಾಗಬೇಕಾಗಿದೆ."

"ಈಗ ಭೂ ಸ್ವಾಧೀನತೆಯಲ್ಲಿ ತೀರ ಅಸಮತೆ ಕಂಡುಬರುತ್ತದೆ. ಕೆಲವೇ ಜನರ ಒಡೆತನದಲ್ಲಿ ನೂರಾರು ಎಕರೆ ಭೂಮಿ ಇರುವಾಗ ಅನೇಕರಿಗೆ ಒಂದು ಎಕರೆ ಭೂಮಿಯೂ ಇಲ್ಲ. ಈ ಅಸಮತೆ ಕೊನೆಗೊಳ್ಳಬೇಕಾದರೆ ಭೂಮಿಯನ್ನು ಮರಳಿ ಹಂಚಬೇಕೆಂದು ನಮ್ಮ ಸೂಚನೆ.' ಜಯಪ್ರಕಾಶ.]

ಸಾಮ್ಯವಾದೀ ಸರಕಾರ-ವಿಶೇಷತಃ ಹಿಂದೀ ಸಾಮ್ಯವಾದೀ ಸರಕಾರ-ಬಿಡಿಸಬೇಕಾದ ಅತಿ ಜಟಿಲ ಸಮಸ್ಯೆಗಳಲ್ಲಿ ಇದೊಂದು. ಇದನ್ನು ನಾವು ಜಾಗರೂಕತೆಯಿಂದ ವಿವೇಚಿಸಬೇಕು.

ಭಾರತವು ಮುಖ್ಯವಾಗಿ ಒಕ್ಕಲುತನದ ನಾಡು. ಆದುದರಿಂದ ಸಾಮ್ಯವಾದಕ್ಕೂ ಭಾರತಕ್ಕೂ ಏನೂ ಸಂಬಂಧವಿಲ್ಲವೆಂದು ಹೇಳುವವುಂಟು. ಜಗತ್ತಿನ ಈಗಿನ ಪರಿಸ್ಥಿತಿಯಲ್ಲಿ, ಸಮಾಜದ ಉತ್ಪಾದನೆಯ ಸಾಧನಗಳು ಬೆಳೆಯುತ್ತಿರುವ ಈಗಿನ ರೀತಿಯಲ್ಲಿ, ಎಂತಹ ಹಿಂದುಳಿದ ದೇಶದಲ್ಲಿಯೂ ಸಾಮ್ಯವಾದವನ್ನು ಹಬ್ಬಿಸಬಹುದು-ಎಂಬುದನ್ನು ನಾನು ಮೊದಲೇ ಸ್ಪಷ್ಟಪಡಿಸಿದ್ದೇನೆ. ಭಾರತದಲ್ಲಿ ಸಾಮ್ಯವಾದವನ್ನು ಪ್ರಚುರ

ಪಡಿಸಬೇಕೆಂಬ ಒಂದು ಪಕ್ಷವು ಅಧಿಕಾರಕ್ಕೆ ಬಂದರೆ, ಭಾರತವು ಕೃಷಿಪ್ರಧಾನ ರಾಷ್ಟ್ರವೆಂಬುದು ಅದಕ್ಕೇನೂ ಅಡ್ಡ ಬರಲಾರದು. ಇದರಿಂದ ಬಹಳವಾದರೆ ಸಾಮ್ಯವಾದಿಗಳ ಕೆಲಸ ಸಾವಕಾಶವಾಗಿ ನಡೆಯಬಹುದು ಮಾತ್ರ.

ನಿಜವಾದ ಸಮಸ್ಯೆ ಸಾಮ್ಯವಾದವನ್ನು ಅನ್ವಯಿಸುವುದು ಸಾಧ್ಯವೆ ?- ಎಂಬುದಲ್ಲ. ಆದರೆ ಹಿಂದೀ ಒಕ್ಕಲುತನಕ್ಕೆ, ಒಕ್ಕಲಿಗನಿಗೆ, ಹಿಂದೀ ರಾಷ್ಟ್ರಕ್ಕೆ ಇದು ಉಪಯುಕ್ತವೆ ?—ಎಂಬುದು. 'ಹೌದು' ಎಂಬುದೇ ಇದಕ್ಕೆ ನಮ್ಮ ಸ್ಪಷ್ಟವಾದ ಉತ್ತರ ಭಾರತವನ್ನು ವಿನಾಶದಿಂದ, ದಿವಾಳಿ ಯಿಂದ ಕಾಪಾಡಲು ಸಮತಾವಾದವೇ ಯೋಗ್ಯಸಾಧನ. ರಾಷ್ಟ್ರವು ಇದರಿಂದ ಮಾತ್ರ ಬಲಿಷ್ಠವಾಗಬಲ್ಲುದು.

ಭಾರತದಲ್ಲಿ ಒಕ್ಕಲುತನದ ಉದ್ಯೋಗಕ್ಕೆ ಒಂದು ಬಗೆಯ ರೋಗ ಅಂಟಿಕೊಂಡಿದೆ ತೀವ್ರ ಬದಲಾವಣೆಗಳಿಂದಲ್ಲದೆ ಅದನ್ನು ಹೋಗಲಾಡಿಸು ವುದು ಅಸಾಧ್ಯ. ಅದು ಈ ಕೆಳಗಿನ ಬೇನೆಗಳಿಂದ ಬಳಲುತ್ತಿದೆಯೆಂದು ಸಂಕ್ಷೇಪವಾಗಿ ಹೇಳಬಹುದು. ಒಕ್ಕಲಿಗನ ರಕ್ತಶೋಷಣೆಮಾಡಿ ಅವನನ್ನು ಉದಾಸೀನನನ್ನಾಗಿಯೂ ಅಯೋಗ್ಯನನ್ನಾಗಿಯೂ ಮಾಡುತ್ತದೆ. ಅಸಂ ಬದ್ಧವಾದ ತೀರ ಹೆಚ್ಚಿನ ತೆರಿಗೆಯ ಭಾರ; ಸಾಲದ ಹೊರೆ. ಆರ್ಥಿಕ ದೃಷ್ಟಿಯಿಂದ ನಿಷ್ಪ್ರಯೋಜಕವಾಗುವಂತೆ ಭೂಮಿಯ ವಿಭಾಗ; ತೀರ ಕಡಿಮೆ ಬೆಳೆ; ವ್ಯಾಪಾರದ ಅತೃಪ್ತಿಕರವಾದ ಸಾಧನಗಳು; ಒಕ್ಕಲುತನ ಮತ್ತು ಉದ್ಯೋಗದ ನಡುವೆ ಸಹಕಾರವಿಲ್ಲದಿರುವುದು. ಪಟ್ಟಣ ಹಳ್ಳಿಗಳ ನಡುವೆ ಭೇದ.

ಇದರಲ್ಲಿ ಒಂದೊಂದೂ ಬಿಡಿಸಲು ಬಾರದಷ್ಟು ದೊಡ್ಡ ಸಮಸ್ಯೆ ಯಾಗಿದೆ. ಇವೆಲ್ಲವನ್ನೂ ಒಟ್ಟಾಗಿ ಬಿಡಿಸುವುದಂತೂ ಎಂಥ ಸುಧಾರಣೆ ಗಳ ಮೂಲಕವೂ ಕಷ್ಟ.

ಈ ಸಮಸ್ಯೆಯ ಪರಿಹಾರಕ್ಕೆ ಒಂದೇ ಒಂದು ಮಾರ್ಗವೆಂದರೆ ಒಕ್ಕಲಿ ಗನನ್ನು ಸುಲಿಯುತ್ತಿರುವ ಸಾಹುಕಾರಿಕೆಯ ಸಮೂಲ ನಾಶ. ಒಕ್ಕಲಿಗ ನನ್ನು ಋಣವಿಮುಕ್ತನನ್ನಾಗಿ ಮಾಡಬೇಕು. ಸಹಕಾರೀ ಮತ್ತು ಸಾಮು ದಾಯಿಕ ಒಕ್ಕಲುತನವನ್ನು ಆರಂಭಿಸಬೇಕು. ಸಹಕಾರೀ ಸಂಘಗಳಿಗೂ ಸಣ್ಣ ಸಣ್ಣ ಕೈಗಾರಿಕೆಗಳಿಗೂ ಉತ್ತೇಜನಕೊಡಬೇಕು.

ಇವೆಲ್ಲ ವಿನಾಶಕಾರಕ ವಿಚಾರಗಳೆಂದು ಭಾವಿಸಕೂಡದು. ಇದು ಭೂಮಿಯ ಒಡೆಯನ ಮತ್ತು ಒಕ್ಕಲಿಗನ ನಡುವಿನ ಅಪಾಯಕರವಾದ ಸಂಬಂಧವನ್ನು ಮಾತ್ರ ವಿನಾಶಗೊಳಿಸುತ್ತದೆ. ಉಳಿದ ಎಲ್ಲ ದೃಷ್ಟಿಯಿಂದಲೂ ಈರೀತಿ ರಚನಾತ್ಮಕವಾದುದು. ಇದಕ್ಕೆ ಸರಕಾರವು ಮಾರ್ಗದರ್ಶಿಯಾಗಿ ತಕ್ಕ ಉತ್ತೇಜನವನ್ನೂ ಪ್ರಚಾರಕ್ಕೆ ಆಸ್ಪದವನ್ನೂ ಕೊಡಬೇಕು.

ಪ್ರೊ ರಾಧಾಕಮಲ ಮುಕರ್ಜಿಯವರು ಆಗ್ರಾ ಎಕ್ಸ್‌ಟೆನ್ಶನ್ ಲೆಕ್ಚರಿನಲ್ಲಿ ಹೀಗೆ ಹೇಳಿದ್ದಾರೆ—"ಭಾರತದ ಹಳ್ಳಿಗಳಲ್ಲಿ ಹರಿದು ಹಂಚಿಹೋದ ಭೂಮಿಯನ್ನು ಒಟ್ಟುಗೂಡಿಸಿ, ಒಕ್ಕಲುತನವನ್ನು ಸಾಮುದಾಯಕ ರೀತಿಯಿಂದ ಸಾಗಿಸದಿದ್ದರೆ ಹಿಂದೀ ಒಕ್ಕಲುತನದ ಸ್ಥಿತಿ ಸುಧಾರಿಸುವುದು ದುಃಸಾಧ್ಯ." ನಾವು ಹೇಳುವ ಮಾತನ್ನೇ ಇದು ಎತ್ತಿ ಹಿಡಿಯುತ್ತದೆ.

ಈ ಸಾಮುದಾಯಕ ಒಕ್ಕಲುತನವೆಂದೊಡನೆ ಭಯಗೊಳ್ಳುವ ಕೆಲವರು ಇದಕ್ಕೆ ಬೇರೊಂದು ಹಂಚಿಕೆಯನ್ನು ಸೂಚಿಸುತ್ತಾರೆ. ಕೆಲವೊಂದು ಭೂಮಿಯನ್ನು ಯೋಗ್ಯ ಒಕ್ಕಲಿಗರಿಗೆ ಹಂಚಿಕೊಟ್ಟು ಅವರ ಒಡೆತನವನ್ನು ಅವರಿಗೆ ಒಪ್ಪಿಸಿಕೊಟ್ಟರೆ ಅವರು ಆಸೆಯಿಂದ ಕೆಲಸಮಾಡಬಹುದೆಂದು ಇಂಥ ಜನರ ಅಭಿಪ್ರಾಯ.

ಹೀಗೆ ಮಾಡುವುದರಿಂದ ನಮ್ಮ ಸೂಚನೆಗಳಿಗಿಂತಲೂ ಬಹು ಉಗ್ರ ಬದಲಾವಣೆಗಳನ್ನು ಮಾಡಿದಂತಾಗುವುದು ಅಲ್ಲದೆ ಇದರ ಪರಿಣಾಮವು ಒಕ್ಕಲಿಗನಿಗೂ ದೇಶಕ್ಕೂ ಮಾರಕವಾಗುವುದು.

ಒಕ್ಕಲಿಗನ ದೃಷ್ಟಿಯಿಂದ ಆಗುವ ಹಾನಿಯೆಂದರೆ, ಹೀಗೆ ವಿಭಾಗಿಸಿದ ಭೂಮಿಯ ಒಡೆತನವುಳ್ಳ ಸ್ವತಂತ್ರ ಒಕ್ಕಲಿಗನು, ಸಾಮುದಾಯಿಕ ಒಕ್ಕಲುತನವನ್ನು ಕೈಕೊಳ್ಳುವ ಒಕ್ಕಲಿಗನಿಗಿಂತಲೂ, ಹುಟ್ಟುವಳಿಯ ದೃಷ್ಟಿಯಿಂದ, ಮಾರುವ ಕೊಳ್ಳುವ ಮತ್ತು ಸಾಲಮಾಡುವ ವಿಷಯದ ದೃಷ್ಟಿಯಿಂದ, ದೊಡ್ಡ ಕಷ್ಟವನ್ನು ಎದುರಿಸಬೇಕಾಗುವುದು. ಈ ಯೋಜನೆಯಿಂದ, ಸಾಮುದಾಯಕ ಒಕ್ಕಲುತನದಿಂದ ದೊರಕಬಹುದಾದ ಲಾಭಗಳಲ್ಲಿ ಒಂದೂ ದೊರಕಲಾರದು. ಇಂತಹ ಒಕ್ಕಲಿಗನು ಸಾಂಸ್ಕೃತಿಕ, ನೈತಿಕ ದೃಷ್ಟಿಯಿಂದ ಒಳ್ಳೇ ಬೆಳವಣಿಗೆಯನ್ನು ನಿರೀಕ್ಷಿಸಲಾರ.

ರಾಷ್ಟ್ರದ ದೃಷ್ಟಿಯಿಂದ, ನಮ್ಮ ಯೋಜನೆ ಇನ್ನೂ ಬಲಿಷ್ಠವಾದುದು. ಒಕ್ಕಲಿಗನೂ ದೇಶದ ಒಂದು ಘಟಕ—ಬಹು ಮುಖ್ಯವಾದ ಘಟಕ—ವೆಂಬುದನ್ನು ಮರೆಯಲಾಗದು.

ಈ ಮೊದಲು ಸಾಮ್ಯವಾದವನ್ನು ಕುರಿತು ಹೇಳುವಾಗ ನಾನು ಜಗತ್ತಿನ ಉಳಿದ ಎಲ್ಲ ಭಾಗಗಳಲ್ಲಿ ಸಾಮ್ಯವಾದದ ಅವಶ್ಯಕತೆ ಇದ್ದಂತೆ ಇಲ್ಲಿಯೂ ಇದೆ ಎಂಬುದನ್ನು, ಏಕೆಂದರೆ ಸಾಮ್ರಾಜ್ಯವಾದದ ಸುಲಿಗೆಗೆ ಒಳಗಾಗಿ ಇಲ್ಲಿಯ ಜನರ ಜೀವನವೇ ಹಾಳಾಗಿ ಹೋಗಿದೆಯೆಂಬುದನ್ನು ತೋರಿಸಿದ್ದೆನು.

ವೈಯಕ್ತಿಕ ಸಾಗುವಳಿ ಯಾವ ಯೋಜನೆಗೂ ಇಂಬುಗೊಡಲಾರದು. ವೈಯಕ್ತಿಕ ಒಕ್ಕಲುತನದ ದೇಶದಲ್ಲಿ ಅಸಿದ್ಧ ವಸ್ತು ಮತ್ತು ಆಹಾರ ಸಾಮಗ್ರಿಗಳನ್ನು ಬೆಳೆಸುವುದನ್ನೂ ಅವುಗಳನ್ನು ವಿಸ್ತಾರವಾಗಿ ಹಂಚುವುದನ್ನೂ ಯೋಚಿಸಿರಿ. ಇದು ಸಾಧ್ಯವೊ ? ಒಂದು ದೇಶವು ತನಗೆ ಯಂತ್ರಗಳಲ್ಲಿ ಸಿದ್ಧವಾದ ಯಾವ ಸಾಮಾನುಗಳು ಬೇಕೆಂಬುದನ್ನು ನಿಶ್ಚಯಿಸಬೇಕಾದರೆ, ತಾನು ಯಾವ ಬೆಳೆಗಳನ್ನು ಬೆಳೆಸಬೇಕೆಂಬುದನ್ನೂ ಎಷ್ಟು ಬೆಳೆಸಬೇಕೆಂಬುದನ್ನೂ ನಿರ್ಧರಿಸಬೇಕಾಗುತ್ತದೆ ಯಾವ ಕಾರಖಾನೆಗಳನ್ನು ಕಟ್ಟಬೇಕು, ಯಾವ ಆಹಾರವನ್ನು ತಿನ್ನಬೇಕು, ತನಗೆ ಬೇಕಾದ ಸಾಮಾನುಗಳು ಪರದೇಶಗಳಿಂದ ಬರಬೇಕಾದರೆ ತಾನು ಪರದೇಶಗಳಿಗೆ ಯಾವ ಸಾಮಾನುಗಳನ್ನು ಕಳಿಸಬೇಕು, ಮುಂತಾದ್ದನ್ನೆಲ್ಲ ಅರಿತುಕೊಳ್ಳಬೇಕಾಗುತ್ತದೆ.

ಇದೆಲ್ಲವೂ ಸಾಧ್ಯವಾಗಬೇಕಾದರೆ ಒಕ್ಕಲು ತನವು ವೈಯಕ್ತಿಕವಾಗಿ ನಡೆಯದೆ ಸಾಮೂಹಿಕವಾಗಿ ನಡೆಯಬೇಕು. ಒಂದೊಂದು ಹಳ್ಳಿಯೂ ಒಂದೊಂದು ಘಟಕವಾಗಬೇಕು. ಒಂದು ಹಳ್ಳಿಯು ಮತ್ತೊಂದು ಹಳ್ಳಿಯೊಡನೆ ಸಹಕರಿಸಬೇಕು. ವೈಯಕ್ತಿಕವಾಗಿ ಭೂಮಿಯನ್ನು ಸಾಗುಮಾಡಿದರೂ ಸರಕಾರವು ಯೋಗ್ಯ ನಿಯಂತ್ರಣದಿಂದ, ಜನತೆ ತನಗೆ ಅವಶ್ಯವಿದ್ದ ಬೆಳೆಗಳನ್ನು ಅವಶ್ಯವಿದ್ದಷ್ಟೇ ಬೆಳೆಸುವಂತೆ ಮಾಡಬಹುದು. ಆದರೆ ಇದು ಯಾವುದೊಂದು ವ್ಯವಸ್ಥಿತ ಯೋಜನೆಗೂ ನೆರವಾಗಲಾರದು.

ನಾವು ಸುದೀರ್ಘಕಾಲದ ಯೋಜನೆಯನ್ನೂ ವಿವೇಚಿಸಬಹುದು. ಭೂಮಿಯ ಹುಟ್ಟುವಳಿಯನ್ನು ಕೆಲವೊಂದು ವರುಷಗಳಲಿ ಇನ್ನು ...

ಬೇಕಾಗಿದೆ ಎಂದು ತಿಳಿಯುವಾ. ಇದು ವೈಯಕ್ತಿಕ ಒಕ್ಕಲುತನದಿಂದ ಸಾಧ್ಯವಾಗಬಹುದೇ? ಒಕ್ಕಲಿಗನು ಸುಧಾರಿಸಿದ ರೀತಿಯಿಂದ ಒಕ್ಕಲುತನವನ್ನು ನಡೆಸುವಂತೆ ಅವನಿಗೆ ಯೋಗ್ಯ ಶಿಕ್ಷಣವನ್ನು ನಾವು ಕೊಡಬಹುದು. ಆದರೆ ಬರಿಯ ಇಷ್ಟರಿಂದಲೇ ಈ ಕೆಲಸವಾಗುವುದಿಲ್ಲ. ಭೂಮಿಯನ್ನು ಸಣ್ಣ ಸಣ್ಣ ತುಂಡುಗಳಾಗುವಂತೆ ವಿಭಾಗಿಸಿದರೆ ಅದರ ಹುಟ್ಟುವಳಿ ಹೆಚ್ಚಾಗಲಾರದು.

ಒಕ್ಕಲುತನ ಮತ್ತು ಉದ್ಯೋಗ, ಇವುಗಳಲ್ಲಿ ಸಮತೂಕವನ್ನುಂಟು ಮಾಡಬೇಕೆಂಬ ವಿಷಯವನ್ನು ಯೋಚಿಸಿರಿ. ಈ ಬಗೆಯ ಸಮತೂಕವಿಲ್ಲದೆ ಒಕ್ಕಲುತನದ ಸಮಸ್ಯೆ ಬಗೆಹರಿಯುವಂತಿಲ್ಲ. ಇದಕ್ಕೆಲ್ಲ ಸಹಕಾರದ ತತ್ವಕ್ಕನುಗುಣವಾದ ಪ್ರಯತ್ನವೂ ಯೋಜನೆಯೂ ಅವಶ್ಯ. ಇದರಲ್ಲಿ ಕೂಡ ವೈಯಕ್ತಿಕ ಒಕ್ಕಲುತನವು ಎರಡನ್ನು ತರುತ್ತದೆ.

ಈ ಸಮಸ್ಯೆಯನ್ನು ಮಾನಸಶಾಸ್ತ್ರದ ದೃಷ್ಟಿಯಿಂದ ವಿವೇಚಿಸಿದರೆ, ಹಿಂದೀ ಜೀವನವನ್ನು ಸಾಮ್ಯವಾದದ ನೆಲಗಟ್ಟಿನ ಮೇಲೆ ಕಟ್ಟಲು ಒಕ್ಕಲುತನದಲ್ಲಿ ಸಾಮ್ಯವಾದವು—ಎಂದರೆ ಸಹಕಾರದಿಂದ ಸಾಮೂಹಿಕ ಒಕ್ಕಲುತನವು—ಅತ್ಯಾವಶ್ಯಕವೆಂಬುದು ಕಂಡುಬರುತ್ತದೆ. ಉದ್ಯೋಗಗಳನ್ನು ಸಾಮ್ಯವಾದದ ನಲೆಗಟ್ಟಿನ ಮೇಲೆ ಸಂಘಟಿಸಿ, ಒಕ್ಕಲುತನವನ್ನು ಈಗಿದಂತೆ ವ್ಯಕ್ತಿಗಳಿಗೆ ಬಿಟ್ಟುಕೊಟ್ಟರೆ ತಪ್ಪೇನು?—ಎಂದು ಜನರು ನನ್ನನ್ನು ಕೇಳುತ್ತಾರೆ. ಹೀಗೆ ಮಾಡುವುದರಿಂದ ವ್ಯಕ್ತಿವಾದವೂ ಸಮತಾವಾದವೂ ಕೂಡಿಯೆ ಸಮೂಲನಾಶವಾಗುತ್ತದೆಂದು ನನ್ನ ಅಭಿಪ್ರಾಯ. ಒಕ್ಕಲಿಗರು ಸ್ವಾರ್ಥಿಗಳಾಗಿ ತಮ್ಮ ಸಣ್ಣಪುಟ್ಟ ಭೂಮಿಯ ತುಂಡುಗಳನ್ನು ಸಾಗುಮಾಡುತ್ತ ಕುಳಿತರೆ ಸಾಮ್ಯವಾದದ ಬೆಳೆವಣಿಗೆ ಸಾಧ್ಯವಿಲ್ಲ.

ಸಾಮ್ಯವಾದದ ಬೆಳೆವಣಿಗೆಗೆ ಪಟ್ಟಣಗಳಲ್ಲಿ ಹೇಗೋ ಹಾಗೆ ಹಳ್ಳಿಗಳಲ್ಲಿ ಕೂಡ ಸಾಮೂಹಿಕ ಜೀವನಕ್ರಮವೂ ಅದರ ಮಟ್ಟವೂ ಬೆಳೆಯಬೇಕು. ಈ ಸಮಸ್ಯೆಯನ್ನು ಯಾವ ದೃಷ್ಟಿಕೋನದಿಂದ ನೋಡಿದರೂ, ಸಾಮ್ಯವಾದದ ತತ್ವಗಳನ್ನು ಹಿಂದೀ ಒಕ್ಕಲುತನಕ್ಕೆ ಸಮನ್ವಯಿಸುವುದು ಅನಿವಾರ್ಯ.

ಒಕ್ಕಲುತನದಲ್ಲಿ ಸಾಮ್ಯವಾದವೆಂದರೇನು? ಸಹಕಾರೀ ಮತ್ತು ಸಾಮೂಹಿಕ ಒಕ್ಕಲುತನವೆಂದರೇನು?

ಭಾರತದ ಹಳ್ಳಿಗಳಲ್ಲಿ ಪೂರ್ವಕಾಲದಲ್ಲಿದ್ದ ಸಾಮೂಹಿಕ ಜೀವನದ ಬಗೆಗೆ ನಾವು ಕೇಳಿದ್ದೇವೆ. ಈ ಮಾತು ಅತ್ಯಂತ ಹಳೆಯ ಕಾಲದ್ದೇನೂ ಅಲ್ಲ. ಮನುಸ್ಮೃತಿಯಲ್ಲಿ ಇದರ ಉಲ್ಲೇಖವಿಲ್ಲ. ಆದರೂ ಸಾಮೂಹಿಕ ಒಕ್ಕಲುತನ—ಭೂಮಿಯನ್ನು ಸಾಮೂಹಿಕವಾಗಿ ಸಾಗುಮಾಡುವ ಪದ್ಧತಿ-ಕೆಲವೊಂದು ಕಾಲದವರೆಗೆ ಬಳಿಕೆಯಲ್ಲಿದ್ದಿತೆಂದು ಇತಿಹಾಸದಿಂದ ಕಂಡು ಬರುತ್ತದೆ. ಮದ್ರಾಸ್ ಪ್ರಾಂತದಲ್ಲಿ ಮೊನ್ನೆ ಮೊನ್ನೆಯವರೆಗೆ ಇಂತಹ ಹಳ್ಳಿಗಳಿದ್ದುವು.

ಸಾಮ್ಯವಾದದ ಧ್ಯೇಯ ಈ ಹಳೆಯ ಪದ್ಧತಿಗನುಸಾರವಾಗಿಯೇ ಸಾಗುತ್ತದೆ. ಸಾಮ್ಯವಾದೀ ಹಳ್ಳಿಗಳು ತಮ್ಮ ತಮ್ಮ ಹಿತವನ್ನಷ್ಟೇ ನೋಡಿ ಕೊಳ್ಳುತ್ತ ಕುಳಿತುಕೊಳ್ಳದೆ ಉಳಿದ ಹಳ್ಳಿಗಳೊಡನೆ ಸಹಕಾರಭಾವದಿಂದ ಕೂಡಿಕೊಂಡು ಪರಸ್ಪರರ ಆರ್ಥಿಕ ಪದ್ಧತಿಯನ್ನು ಸುಧಾರಿಸಿಕೊಳ್ಳಲು ನೆರವಾಗುತ್ತವೆ.

ಈ ಸಮತಾವಾದದ ತತ್ವಗಳನ್ನು ರೂಢಿಯಲ್ಲಿ ತರುವ ಪ್ರಯತ್ನ ಈಗಿನ ಕಾಲದಲ್ಲಿ ರಶಿಯದಲ್ಲಿ ಮಾತ್ರ ಭರದಿಂದ ನಡೆದಿದೆ. ಅಲ್ಲಿ ಸಮತಾವಾದವನ್ನು ಒಕ್ಕಲುತನದಲ್ಲಿಯೂ ಬಳಿಕೆಯಲ್ಲಿ ತರುವಂತೆ ಒಳ್ಳೇ ಪ್ರಯತ್ನ ನಡೆದಿದೆ. ಅದಕ್ಕೆ ಅಪಾರವಾದ ಯಶಸ್ಸೂ ದೊರಕಿವೆ. ಉಳಿದ ಕಡೆಗಳಂತೆ ಅಲ್ಲಿಯ ಒಕ್ಕಲಿಗರೂ ಕೂಡ ತೀರ ಹಳೆಯ ಪದ್ಧತಿಗಳಿಂದಲೇ ಹೊಲಗಳನ್ನು ಸಾಗುಮಾಡುತ್ತಿದ್ದರು. ಅವರಲ್ಲಿಯೂ ಅಜ್ಞಾನ, ಸ್ವಾರ್ಥ, ತುಂಬಿಕೊಂಡಿದ್ದುವು. ಅಲ್ಲಿಯ ಒಕ್ಕಲುತನದಲ್ಲಿ ಸಾಮ್ಯವಾದವು ಮೂರು ಬಗೆಯಿಂದ ಕಾಲಿಟ್ಟಿದೆ.

ಅಲ್ಲಿಯ ಒಂದನೆಯ ಮಾದರಿಯ ಒಕ್ಕಲುತನವೆಂದರೆ ಸಹಕಾರೀ ತತ್ವಗಳಿಗನುಸಾರವಾದ ಒಕ್ಕಲುತನ. ಈ ಪದ್ಧತಿಗನುಸಾರವಾಗಿ ಹೊಲಗಳು ವ್ಯಕ್ತಿಗಳ ಒಡೆತನದಲ್ಲಿಯೇ ಇವೆ. (ಸಾಹುಕಾರರ, ಬಂಡವಲುಗಾರರ ಹೆಚ್ಚಿನ ಭೂಮಿಗಳನ್ನು ಕಸಿದುಕೊಂಡು ಎಲ್ಲರಿಗೂ ಸಮಾನವಾಗಿ ಹಂಚಿಕೊಟ್ಟಿದ್ದಾರೆ.) ಒಕ್ಕಲುತನದ ಹಳೆಯ ಉಪಕರಣಗಳು, ಕುದುರೆ

ಗಳು ಮುಂತಾದ್ದೆಲ್ಲ ವ್ಯಕ್ತಿಗಳ ಆಸ್ತಿ. ಆದರೆ ಹೊಲವನ್ನು ಸಾಗುವಮಾಡು ವಾಗ ಎಲ್ಲ ಭೂಮಿಯನ್ನು ಒಟ್ಟುಗೂಡಿಸಿ, ಎಲ್ಲರೂ ಸಾಮೂಹಿಕವಾಗಿ ದುಡಿದು ಹೆಚ್ಚು ಬೆಳೆಯನ್ನು ಬೆಳೆಸಲು ಪ್ರಯತ್ನಿಸುತ್ತಾರೆ. ಇದರಿಂದ ಬಂದ ಹುಟ್ಟುವಳಿಯನ್ನು ಭೂಮಿಯು ಮತ್ತು ಪರಿಶ್ರಮದ ಪರಿಮಿತಿಗನು ಗುಣವಾಗಿ ಹಂಚಿಕೊಡುತ್ತಾರೆ.

ಇದು ಸಾಮ್ಯವಾದದ ಮೊದಲ ಹೆಜ್ಜೆ. ಇದರಿಂದ ಸಾಮೂಹಿಕ ಜೀವನವು ಬೆಳೆಯುತ್ತದೆ; ಹುಟ್ಟುವಳಿ ಹೆಚ್ಚುತ್ತದೆ. ತಾನು ಸಮಾಜ ವನ್ನು ಹೊಂದಿಕೊಂಡಿರಬೇಕೆಂಬ ಭಾವನೆಯನ್ನು ಪ್ರತಿ ಒಬ್ಬನಲ್ಲಿಯೂ ಹುಟ್ಟಿಸುತ್ತದೆ.

ಸಾಮೂಹಿಕ ಒಕ್ಕಲುತನವೇ ಎರಡನೆಯ ಮಾದರಿ. ಈ ಮಾದರಿ ಯಲ್ಲಿ ವ್ಯಕ್ತಿಗಳ ಕೈಯಲ್ಲಿ ಹೊಲಗಳಿರುವುದಿಲ್ಲ. ಬೆಳೆಯನ್ನು ವ್ಯಕ್ತಿಗಳ ಪರಿಶ್ರಮಕ್ಕೆ ತಕ್ಕಂತೆ ಹಂಚುತ್ತಾರೆ. ಕೆಲವೊಂದು ವಿಶಿಷ್ಟ ಸಂದರ್ಭಗಳಲ್ಲಿ ಹುಟ್ಟುವಳಿಯನ್ನು ವ್ಯಕ್ತಿಗಳಿಗೆ ಕೊರತೆ ತೋರಿಬರದಂತೆಯೂ ಹಂಚು ತ್ತಾರೆ. ಸಾಮೂಹಿಕ ಒಕ್ಕಲುತನದಲ್ಲಿ ಕೂಡ ಸಾಗುವಳಿಯ ಹಳೆಯ ಉಪಕರಣಗಳೂ, ಹಂದಿ, ದನಕರು, ಕುದುರೆಗಳೂ ವ್ಯಕ್ತಿಗಳ ಕೈಯ ಲ್ಲಿಯೇ ಇರುತ್ತವೆ. ಇದರಿಂದ ಸಾಮೂಹಿಕ ಜೀವನಕ್ಕೆ ಆಸ್ಪದವಿದ್ದರೂ, ಎಷ್ಟೋ ಸಂದರ್ಭಗಳಲ್ಲಿ ವ್ಯಕ್ತಿಗಳು ಬೇರೆ ಬೇರೆಯಾಗಿರುವ ಸಂದರ್ಭವಿದ್ದೇ ಇದೆ.

ಆದುದರಿಂದ ಮೂರನೆಯ ಮಾದರಿ ಮುಂದೆ ಬಂದಿದೆ. ಇದರಿಂದ ಎಲ್ಲರೂ ಸಮಾನವಾಗಿ ಪಾಲುಗೊಳ್ಳಬಹುದಾದಂತಹ ಸಾಮಾಜಿಕ ಗುಂಪು ಗಳು ನಿರ್ಮಿತವಾಗಿವೆ.

ರಶಿಯವು ಇದೆಲ್ಲವನ್ನೂ ಸಾಧಿಸಿದ್ದು ಬಹಳ ಅವಸರದಿಂದ. ನಮಗೆ ಅಂತಹ ಅವಸರವೇನೂ ಅಗತ್ಯವಿಲ್ಲ ನಾವು ಒತ್ತಾಯ ಹಿಂಸೆಗಳನ್ನು ಉಪಯೋಗಿಸಕೂಡದು. ಉದ್ಯೋಗಗಳಲ್ಲಿ ಸಾಮ್ಯವಾದವನ್ನು ಒತ್ತಾಯ ದಿಂದಲಾದರೂ ತರಬಹುದು; ಆದರೆ ಒಕ್ಕಲುತನದ ಕ್ಷೇತ್ರದಲ್ಲಿ ಮಾತ್ರ ಕೂಡದು. ಸಾಮೂಹಿಕ ಒಕ್ಕಲುತನವನ್ನು, ಯೋಗ್ಯ ಉತ್ತೇಜನವನ್ನೂ ಶಿಕ್ಷಣವನ್ನೂ ಸಹಾಯವನ್ನೂ ಕೊಟ್ಟು ಬೆಳೆಸಬೇಕು.

ಪರಿಶ್ರಮವನ್ನು ಕಡಿಮೆಮಾಡುವಂತಹ ಕೆಲವು ಉಪಕರಣಗಳನ್ನು ಮಾತ್ರ ನಾವು ಉಪಯೋಗಿಸಬಹುದು. ಯಾಕೆಂದರೆ ನಮ್ಮ ಜನಸಂಖ್ಯೆ ಅಪಾರವಿದೆ. ಅವರ ದುಡಿತದ ಲಾಭವನ್ನು ಪಡೆಯಲೇಬೇಕು. ರಶಿಯದಷ್ಟು ವಿಸ್ತಾರವಾದ ಭೂಮಿಯೂ ನಮಗಿಲ್ಲ. ಆದರೂ ನಾವು ತೀರ ಹಳೆಯ ನೇಗಿಲು ನೊಗಗಳ ಬದಲು ಹೊಸ ಬಗೆಯ ಉಪಕರಣಗಳನ್ನು ಬಳಸಲೇಬೇಕು. ಹಳ್ಳಿಗಳಿಗೆ ವಿದ್ಯುತ್‌ಶಕ್ತಿ, ಬಾನುಲಿ, ಮುಂತಾದ ಸೌಕರ್ಯಗಳನ್ನು ಒದಗಿಸಬೇಕು. ಪಾಶ್ಚಿಮಾತ್ಯರನ್ನು ಸುಮ್ಮನೆ ಅನುಸರಿಸುವುದು ಬೇಡ. ಉಪಯುಕ್ತವಾದುದನ್ನಷ್ಟೇ ಅವರಿಂದ ಕಲಿತುಕೊಳ್ಳಬೇಕು.

ಕೆಲವರು, ಸಾಮ್ಯವಾದಿಗಳು ಒಕ್ಕಲಿಗರಿಂದ ಹೊಲಗಳನ್ನೆಲ್ಲ ಕಸಿದುಕೊಳ್ಳುತ್ತಾರೆಂದು ಅಪಪ್ರಚಾರ ನಡಿಸಿದ್ದಾರೆ. ಹೊಲಗಳನ್ನು ಮುಟ್ಟುಗೋಲು ಹಾಕಿ ಇಲ್ಲಿಂದ ಹೊತ್ತುಕೊಂಡು ಹೋಗಲು ನಮಗೆ ಸಮುದ್ರದಾಚೆಗೆ ಬೇರೆಯಾದ ಒಂದು ನಡುಗಡ್ಡೆಯೇನೂ ಇಲ್ಲ. ಹೊಲಗಳು ಇದ್ದಲ್ಲಿಯೇ ಇರುವವು. ಒಕ್ಕಲಿಗರೇ ಅವುಗಳನ್ನು ಸಾಗುಮಾಡುವರು. ಆದರೆ ಹೇಗೆ ಸಾಗುಮಾಡಿದರೆ ಒಕ್ಕಲಿಗರಿಗೂ ಸಮಾಜಕ್ಕೂ ಹೆಚ್ಚಿನ ಲಾಭವಾಗುವುದೆಂಬುದನ್ನು ಕಂಡುಹಿಡಿಯುವದೇ ನಮ್ಮ ಕರ್ತವ್ಯ.

ಸಮಾಜದ ಹಿತವೇ ನಮ್ಮ ಗುರಿ. ಸಾಮೂಹಿಕವಾಗಿ ಭೂಮಿಯನ್ನು ಸಾಗುಮಾಡಿದರೆ ಭೂಮಿಯ ಹುಟ್ಟುವಳಿ ಹೆಚ್ಚಾಗಿ ಅಖಿಲ ಭಾರತಕ್ಕೆ ಸುಖವಾಗುವುದು ಎಂಬುದರಲ್ಲಿ ಸಂದೇಹವಿಲ್ಲ. ಹಳ್ಳಿಗಳು ಈಗಿನ ಹೀನಾವಸ್ಥೆಯಿಂದ ಪಾರಾಗಿ ಒಳ್ಳೇ ಏಳಿಗೆಯನ್ನೂ ಸುಸಂಸ್ಕೃತ ಸ್ಥಿತಿಯನ್ನೂ ಪಡೆಯಬಹುದು.



೪

# ಭಾರತವೂ ಸಾಮ್ಯವಾದವೂ

೧ ಕಾಂಗ್ರೆಸ್ ಸಾಮ್ಯವಾದೀ ಪಕ್ಷದ ಗೊತ್ತುಗುರಿ

೨ ನನ್ನ ಕಲ್ಪನೆಯ ಸಾಮ್ಯವಾದ

೩ ಗಾಂಧೀಜಿಯ ಮುಂದಾಳುತನ ಮತ್ತು ಕಾಂಗ್ರೆಸ್-ಸಾಮ್ಯವಾದೀ ಪಕ್ಷ (೧೯೪೦)

೪ ಕಾಂಗ್ರೆಸ್ ಎತ್ತ ಸಾಗಿದೆ? ಸ್ವರಾಜ್ಯದ ಒಂದು ಚಿತ್ರ (೧೯೪೦)

# ಭಾರತವೂ ಸಾಮ್ಯವಾದವೂ

## ೧

## ಕಾಂಗ್ರೆಸ್ ಸಾಮ್ಯವಾದೀ ಪಕ್ಷದ ಗೊತ್ತುಗುರಿ

ಸಾಮ್ಯವಾದೀ ಪಕ್ಷವು ತನ್ನ ಘಟನೆಯಲ್ಲಿ 'ಬ್ರಿಟಿಷ್ ಸಾಮ್ರಾಜ್ಯದಿಂದ ಬೇರೆಯಾಗುವ ಹಕ್ಕುಳ್ಳ ಸಂಪೂರ್ಣ ಸ್ವಾತಂತ್ರ್ಯವನ್ನು ದೊರಕಿಸಿ ಸಾಮ್ಯವಾದೀ ಪದ್ಧತಿಯಂತೆ ರಾಷ್ಟ್ರವನ್ನು ನಿರ್ಮಿಸುವುದೇ ತನ್ನ ಅಂತಿಮ ಗುರಿ'ಯೆಂದು ಸಾರಿದೆ.

ಇದು ಸರಳವೂ ಸ್ಪಷ್ಟವೂ ಇದೆ. ನಮ್ಮ ಪಕ್ಷಕ್ಕೆ ಎರಡು ಉದ್ದೇಶಗಳಿವೆ. ಮೊದಲನೆಯದು, ಕಾಂಗ್ರೆಸು ಸಂಪೂರ್ಣ ಸ್ವಾತಂತ್ರ್ಯವನ್ನು ಒಪ್ಪುವುದರಿಂದ ಕಾಂಗ್ರೆಸ್ಸಿನ ಧ್ಯೇಯವೇ ನಮ್ಮ ಉದ್ದೇಶ. ಆದರೆ ಸಾಮ್ಯವಾದೀ ಪಕ್ಷವಾದರೋ ಸಂಪೂರ್ಣ ಸ್ವಾತಂತ್ರ್ಯವೆಂದರೆ ಬ್ರಿಟಿಷ್ ಸಾಮ್ರಾಜ್ಯದಿಂದ ಸಿಡಿದು ನಿಲ್ಲುವ ಸ್ವಾತಂತ್ರ್ಯವೂ ಒಳಗೊಂಡಿದೆಯೆಂಬುದನ್ನೂ ಸ್ಪಷ್ಟಪಡಿಸುವುದು.

ಸ್ವತಂತ್ರ ಭಾರತವು ತನ್ನ ಆರ್ಥಿಕ ನೀತಿಯನ್ನು ಸಾಮ್ಯವಾದದ ತತ್ತ್ವಗಳ ನೆಲೆಗಟ್ಟಿನ ಮೇಲೆಯೇ ನಿರ್ಧರಿಸಬೇಕೆಂಬುದು ಎರಡನೆಯ ಉದ್ದೇಶ.

ಏಕೆ?

ಈ ಪ್ರಶ್ನೆಯ ನೆಲೆಬೆಲೆಗಳನ್ನು ನಿರ್ಣಯಿಸಿದರೆ ಸಾಕು—ಉಳಿದುದೆಲ್ಲ ತನ್ನಿಂದ ತಾನೇ ಸುಸೂತ್ರವಾಗಿ ನಿರ್ಣಯವಾಗುವುದು.

ಜನಸಾಮಾನ್ಯರನ್ನೆಲ್ಲ ರಾಜಕೀಯ ಮತ್ತು ಆರ್ಥಿಕ ವಿಷಯದಲ್ಲಿ ಸ್ವತಂತ್ರರನ್ನಾಗಿ ಮಾಡುವುದು, ಅವರ ಸುಖಸಮೃದ್ಧಿಯನ್ನು ಸಾಧಿಸುವುದು, ಅವರನ್ನು ಎಲ್ಲ ಬಗೆಯ ಸುಲಿಗೆಯಿಂದ ಬಿಡುಗಡೆಮಾಡುವುದು ಮತ್ತು ಅವರ ಸರ್ವತೋಮುಖವಾದ ವಿಕಾಸಕ್ಕಿರುವ ಎಡರು ತೊಡರುಗಳನ್ನು ಪರಿಹರಿಸುವುದು—ಇವು ರಾಷ್ಟ್ರದ ಉದ್ದೇಶವಾದರೆ ಅದು ಸಾಮ್ಯವಾದವನ್ನೇ ತನ್ನ ಗುರಿಯನ್ನಾಗಿ ಮಾಡಿಕೊಳ್ಳಬೇಕು. ಅಷ್ಟೇ ಏಕೆ? ದೇಶದೊಳಗಿನ ಅವ್ಯವಸ್ಥಿತ ಮತ್ತು ಪರಸ್ಪರ ವಿರೋಧಕ ಶಕ್ತಿಗಳನ್ನೆಲ್ಲ

ಹಿಡಿತದಲ್ಲಿಟ್ಟು ಎಲ್ಲರಿಗೂ ಹೆಚ್ಚು ಹಿತವಾಗುವ ಬಗೆಯಲ್ಲಿ ಅವುಗಳ ಪ್ರಯೋಜನ ಪಡೆದು ಮಾನವರ ಬುದ್ಧಿಶಕ್ತಿಯನ್ನೆಲ್ಲ ಸಾರ್ವಜನಿಕ ಸುಖ ಕ್ಕಾಗಿ ವಿನಿಯೋಗಿಸುವಂತೆ ಮಾಡಿದರೂ ಸಾಮ್ಯವಾದದ ಗುರಿಯನ್ನೇ ಮುಟ್ಟುತ್ತೇವೆ

ಮೇಲಿನ ಉದ್ದೇಶಗಳೇ ನಮ್ಮವೆಂದು ಒಪ್ಪುವುದಾದರೆ ಇತರ ನಾಡು ಗಳಂತೆ ಭಾರತದಲ್ಲಿಯೂ ಸಾಮ್ಯವಾದವು ಮಾತ್ರ ಅನುಕೂಲವಾದುದೆಂದು ಸಿದ್ಧಪಡಿಸುವುದು ಕಷ್ಟವಲ್ಲ. ಏಕೆಂದರೆ ಭಾರತದಲ್ಲಿ ಕೂಡ ಒಂದೆಡೆ ಬಡತನ—ಉಪವಾಸವಿದ್ದರೆ ಇನ್ನೊಂದೆಡೆ ಸಂಪತ್ತು—ದುಂದುಗಾರಿಕೆ ಲಾಸ್ಯವಾಡುತ್ತಿದೆ. ಇಲ್ಲಿಯೂ ಸ್ವಾರ್ಥಕ್ಕಾಗಿ ಸುಲಿಗೆ ಇದೆ; ಧನೋ ತ್ಪಾದನೆಯ ಸಾಧನಗಳೆಲ್ಲ ವೈಯಕ್ತಿಕ ಒಡೆತನದಲ್ಲಿವೆ. ಆರ್ಥಿಕ ಸಾಮಾ ಜಿಕ ಅಸಮಾನತೆಯೇ ಆಧುನಿಕ ರಾಷ್ಟ್ರಗಳ ಮೂಲರೋಗ. ಬಹುಜನರ ಸುಲಿಗೆಯಿಂದ ಕೆಲವೇ ಮಂದಿ ಕೊಬ್ಬುವುದೇ ಈ ರೋಗದ ಮೂಲ. ಈ ರೋಗಕ್ಕೆ ಭಾರತವೂ ಹೊರತಾಗಿಲ್ಲ. ಭಾರತಕ್ಕೆ ತಗಲಿದ ಈ ರೋಗದ ಮೂಲ ಬ್ರಿಟಿಷರ ಆಳಿಕೆ ಮಾತ್ರವಲ್ಲ. ಇದರ ಮೂಲ ಬೇರೆಯಾಗಿರುವುದರಿಂದ ಬ್ರಿಟಿಷರ ಆಳಿಕೆ ಕೊನೆಗಂಡರೂ ಈ ರೋಗ ಗುಣವಾಗುವಂತಿಲ್ಲ. ವಿದೇಶೀ ಪ್ರಭುತ್ವದ ನಿರ್ಮೂಲನವಾದರೂ ಭಾರತದ ಬಡತನದ ಸಮಸ್ಯೆಯು ಅಂತ್ಯವಾಗದು—ನಿರಾತಂಕವಾಗಿ ನಡೆಯುತ್ತಿರುವ ಬಹು ಜನರ ಸುಲಿಗೆ ನಿಲ್ಲಲಾರದು. ಅಂತೆಯೇ ನಮ್ಮ ಉದ್ದೇಶಗ ಳಾವುವೂ ಸಫಲವಾಗಲಾರವು. ದೇಶದ ಸ್ವಾತಂತ್ರ್ಯದ ಜೊತೆಗೆ ಆರ್ಥಿಕ ಸ್ವಾತಂತ್ರ್ಯವೂ ಅಷ್ಟೇ ಮಹತ್ವದ್ದು.

ಸಾಮ್ಯವಾದಿಗಳಿಗೆ ಆರ್ಥಿಕ ಸ್ವಾತಂತ್ರ್ಯವೇ ಸಾಮ್ಯವಾದದ ಸಿದ್ಧಿ. ಸಾಮ್ಯವಾದದ ಹೊರತು ಆರ್ಥಿಕ ಸ್ವಾತಂತ್ರ್ಯವೆಂಬುದು ಬರಿಯ ಭ್ರಮೆ, ಹುಚ್ಚು ಹಂಬಲು.

ಕಾಂಗ್ರೆಸ್ಸಿನ ಸದ್ಯದ ಕಾರ್ಯಕ್ರಮಗಳು ನಮ್ಮ ಆದರ್ಶಗಳಿಗಿಂತ ತೀರ ಹಿಂದುಳಿದಿವೆ. ಅವುಗಳಿಂದ ಜನಸಾಮಾನ್ಯರ ಸ್ಥಿತಿ ಕೆಲಮಟ್ಟಿಗೆ ಸುಧಾರಿಸಬಹುದಾದರೂ ಅವರು ಆರ್ಥಿಕ ಸುಲಿಗೆಯಿಂದ ಬಿಡುಗಡೆಯನ್ನಾ ಗಲಿ ರಾಷ್ಟ್ರದ ಅಧಿಕಾರವನ್ನಾಗಲಿ ಪಡೆಯಲಾರರು. ಅದರಿಂದ ನಮ್ಮ

ಆರ್ಥಿಕ ವ್ಯವಸ್ಥೆಯಲ್ಲಿ ಕ್ರಾಂತಿಕಾರಕ ಬದಲಾವಣೆಯಾಗುವುದಂತೂ ಹಾಗಿರಲಿ, ಒಂದಂಗುಲವೂ ಮುಂದೆ ಸಾಗಲಾರದು. ಒಂದೆಡೆ ಬಂಡವಲುಗಾರರನ್ನೂ ಜಹಗೀರುದಾರರನ್ನೂ ಧನಿಕರನ್ನೂ ಇನ್ನೊಂದೆಡೆ ಒಕ್ಕಲಿಗರನ್ನೂ ಕೂಲಿಕಾರರನ್ನೂ ಪ್ರಜೆಗಳನ್ನೂ ಇದ್ದಂತೆಯೇ ಇರಗೊಡುತ್ತದೆ. ಪ್ರಮುಖ ಉದ್ಯೋಗಗಳನ್ನುಳಿದು ಇತರ ಉತ್ಪತ್ತಿ ಸಾಧನಗಳನ್ನೆಲ್ಲ ಅದು ವೈಯಕ್ತಿಕ ಒಡೆತನಕ್ಕೇ ಒಪ್ಪಿಸುವುದು. ದಲಿತರನ್ನೂ ಮಧ್ಯಮ ವರ್ಗವನ್ನೂ ಸುಲಿಯುವುದರಿಂದ ಬಾಳುವ ಸದ್ಯದ ಆರ್ಥಿಕ ವ್ಯವಸ್ಥೆ ಸುರಕ್ಷಿತವಾಗಿ ಉಳಿಯುತ್ತದೆ. ಇದು ಆರ್ಥಿಕ ಸ್ವಾತಂತ್ರ್ಯವಲ್ಲ. ಕರಾಚಿ ಕಾಂಗ್ರೆಸ್ಸಿನ ನಿರ್ಣಯಕ್ಕೂ ಇದಕ್ಕೂ ಸಂಬಂಧವೇ ಇಲ್ಲ. ಈ ಭೇದವನ್ನು ಹೋಗಲಾಡಿಸಿ ಅವು ಒಂದಕ್ಕೊಂದು ಕೂಡಿಕೊಂಡು ಹೋಗುವಂತೆ ಮಾಡುವುದೇ ನಮ್ಮ ಪ್ರಯತ್ನ. ಜನತೆಯ ಆರ್ಥಿಕ ಸ್ವಾತಂತ್ರ್ಯವೇ ತನ್ನ ಧ್ಯೇಯವೆಂದು ಸಾರುವ ಕಾಂಗ್ರೆಸ್ಸು ಆ ಸ್ವಾತಂತ್ರ್ಯದ ನಿಚ್ಚಳವಾದ ಕಲ್ಪನೆಯನ್ನು ಮಾಡಿಕೊಡಲಿ.

ನಾವು ಸಾರುವ ಈ ಕನಿಷ್ಟ ಕಾರ್ಯಕ್ರಮಕ್ಕೆ ಕಾಂಗ್ರೆಸ್ಸು ಒಂದು ವೇಳೆ ಒಪ್ಪಲಿಕ್ಕಿಲ್ಲ. ತನ್ನ ಧ್ಯೇಯದ ವ್ಯಾಖ್ಯೆಯನ್ನು ಇನ್ನೂ ಸ್ಪಷ್ಟಪಡಿಸಲು ಕಾಂಗ್ರೆಸ್ಸು ಅಸಮ್ಮತಿಸುವುದು ಯೋಗ್ಯವಲ್ಲವೆಂದು ಜನರು ಹೇಳಿದರೂ ನಮ್ಮ ವಿಚಾರಕ್ಕೆ ಒಪ್ಪಿಕೊಳ್ಳಲು ಅದಕ್ಕೆ ಕೆಲವು ಕಾಲ ಬೇಕಾಗಬಹುದೆಂದು ಒಪ್ಪಿಕೊಳ್ಳೋಣ. ಆದರೆ ಸಾಮ್ಯವಾದವೆಂಬುದು ಬರಿಯ ಭ್ರಾಂತಿಯೆಂದು ಬೇಸರಪಡುವಷ್ಟರವುಟ್ಟಿಗೆ ಹೇಳುತ್ತ ಹೋಗುವುದು, ಭಾರತದ ಪರಿಸ್ಥಿತಿಗೆ ಅದು ಹೊಂದುವುದಿಲ್ಲವೆಂದು ದೂರುವುದು, ಭಾರತೀಯ ಸಾಮ್ಯವಾದಿಗಳೆಲ್ಲ ಕೇವಲ ಕಲ್ಪನಾಪ್ರಪಂಚದ ವ್ಯಕ್ತಿಗಳೆಂದೂ ಕಾರ್ಲ್ ಹೆನ್ರಿಕ್ ಮಾರ್ಕ್ಸನೆಂಬ ಯಹೂದಿಯ ಅಭಿಪ್ರಾಯಗಳನ್ನು ಪಾಠಮಾಡಿದ ಗಿಳಿಗಳೆಂದೂ ಅಭಿಪ್ರಾಯಪಡುವುದು, ಇವೇ ಮೊದಲಾದ ಆರೋಪಗಳಿಗೆ ಉತ್ತರಕೊಡಬೇಕಾಗಿದೆ.

ಕರಾಚಿಯಲ್ಲಿ ಕಾಂಗ್ರೆಸ್ಸು ಪರಿಪೂರ್ಣ ಕಾರ್ಯಕ್ರಮವೊಂದನ್ನು ನಿರ್ಣಯಿಸಬೇಕಿತ್ತೆಂದು ನನ್ನ ಅಭಿಪ್ರಾಯವಲ್ಲ. ನಾನು ಕೇಳಿಕೊಳ್ಳುವುದು ಜನತೆಯ ಸುಲಿಗೆಯು ಕೊನೆಗಂಡು ರಾಜಕೀಯ ಮತ್ತು ಆರ್ಥಿಕ

ವ್ಯವಸ್ಥೆಯ ಅಧಿಕಾರವೆಲ್ಲವೂ ಜನತೆಯ ಕೈಸೇರುವಂತೆ ಮಾಡುವ ಪ್ರಾರಂಭಿಕ ಆರ್ಥಿಕ ಯೋಜನೆಯನ್ನಾದರೂ ಇಟ್ಟುಕೊಳ್ಳಬೇಕೆಂದು.

ಕಾಂಗ್ರೆಸ್ ಸಾಮ್ಯವಾದೀ ಪಕ್ಷದ ಹೇಳಿಕೆಯಾದರೂ ಇದೇ. ಹಾಗಾದರೆ ಕಾಂಗ್ರೆಸ್ ಸಾಮ್ಯವಾದಿಗಳು ಮಾಡಬೇಕೆಂದಿರುವುದಾದರೂ ಏನು? ಜನತೆಗೆ ಆರ್ಥಿಕಸ್ವಾತಂತ್ರ್ಯವನ್ನು ಕೊಡಬೇಕೆಂಬ ಯಾವ ಸರಕಾರವಾದರೂ ಪ್ರಮುಖ ಉದ್ಯೋಗಗಳನ್ನು ಜನತೆಯ ಆಡಳಿತಕ್ಕೊಳಪಡಿಸುವುದಲ್ಲದೆ ಇನ್ನೇನನ್ನು ಮಾಡಬಹುದು? ಪ್ರಜೆಗಳನ್ನು ಸುಲಿಗೆ, ಅನ್ಯಾಯ ಮತ್ತು ದುಃಖ ದಾರಿದ್ರ್ಯ ಅಜ್ಞಾನಗಳಿಂದ ಬಂಧಮುಕ್ತರನ್ನಾಗಿ ಮಾಡಲು ಇನ್ನಾವ ಕಾರ್ಯ ನೆರವೇರಿಸಬೇಕು?

ಇದನ್ನೆಲ್ಲ ಕೈಗೂಡಿಸಲು ಅಗತ್ಯವಾದುದನ್ನೆಲ್ಲ ಅಖಿಲ ಭಾರತೀಯ ಸಾಮ್ಯವಾದೀ ಪಕ್ಷವು ತನ್ನ ಘಟನೆಯ 'ಉದ್ದೇಶಗಳು' ಎಂಬ ವಿಭಾಗದಲ್ಲಿ ವಿಷದಪಡಿಸಿದೆ.

(೧) ಎಲ್ಲ ಅಧಿಕಾರವು ಧನೋತ್ಪಾದನೆಯಲ್ಲಿ ತೊಡಗಿದ ಜನರ ಕೈಯಲ್ಲಿರಬೇಕು.

(೨) ದೇಶದ ಆರ್ಥಿಕ ವಿಕಾಸ ಯೋಜನೆಗಳೆಲ್ಲಾ ರಾಷ್ಟ್ರದ ನಿಯಂತ್ರಣದಲ್ಲಿರಬೇಕು.

(೩) ಕಾಲಾನುಕ್ರಮದಲ್ಲಿ ದೇಶದ ಉತ್ಪತ್ತಿ, ವಿನಿಮಯ ಮತ್ತು ಹಂಚುವಿಕೆಯ ಸಾಧನಗಳನ್ನೆಲ್ಲ ಜನತೆಯ ಅಧಿಕಾರದಲ್ಲಿರಿಸುವುದಕ್ಕಾಗಿ ದೇಶದ ಉಕ್ಕು, ಹತ್ತಿ, ನಾರು, ರೇಲ್ವೆ, ಹಡಗು, ಖನಿ ಮೊದಲಾದ ಪ್ರಮುಖ ಉದ್ಯೋಗಗಳನ್ನೂ ಬ್ಯಾಂಕು, ವಿಮಾ ಕಂಪೆನಿ ಹಾಗೂ ಇತರ ಲೋಕೋಪಯೋಗಿ ಸಂಸ್ಥೆಗಳನ್ನೂ ಜನತೆಯ ಅಧಿಕಾರಕ್ಕೆ ಒಪ್ಪಿಸಬೇಕು.

(೪) ವಿದೇಶೀಯ ವ್ಯಾಪಾರವೆಲ್ಲ ರಾಷ್ಟ್ರದ ಅಧಿಕಾರಕ್ಕೊಳಪಡಬೇಕು.

(೫) ಸಾಮ್ಯವಾದದ ಆಡಳಿತಕ್ಕೆ ಒಳಪಡದಂಥ ಸಣ್ಣ ಆರ್ಥಿಕ ಘಟಕಗಳ ಹುಟ್ಟುವಳಿ, ಹಂಚುವಿಕೆ ಮತ್ತು ಸಾಲಗಳನ್ನು ಸಹಕಾರೀ ಪದ್ಧತಿಯಿಂದ ನಡೆಸಬೇಕು.

(೭) ಸಂಸ್ಥಾನಿಕರನ್ನು, ಜಹಗೀರುದಾರರನ್ನು ಮತ್ತು ಇನ್ನಿತರ ಎಲ್ಲ ಶೋಷಕರನ್ನು ಪ್ರತಿಫಲ ಕೊಡದೆ ಅವರವರ ಅಧಿಕಾರದಿಂದ ತಳ್ಳಬೇಕು.

(೭) ಹೊಲಗದ್ದೆಗಳನ್ನೆಲ್ಲ ಜನತೆಯಲ್ಲಿ ಯೋಗ್ಯವಾಗಿ ಹಂಚಬೇಕು.

(೮) ಸಾಂಘಿಕ ಇಲ್ಲವೆ ಸಹಕಾರೀ ಪದ್ಧತಿಯ ಒಕ್ಕಲುತನಕ್ಕೆ ಪ್ರೋತ್ಸಾಹ ಕೊಡಬೇಕು.

(೯) ಒಕ್ಕಲಿಗರ, ಕೂಲಿಕಾರರ ಸಾಲಗಳನ್ನು ಪರಿಹರಿಸಬೇಕು.

(೧೦) ಪ್ರತಿಯೊಂದು ವ್ಯಕ್ತಿಗೆ ಕೆಲಸವನ್ನು ಇಲ್ಲವೆ ಉಪಜೀವಿಕೆಯನ್ನು ಒದಗಿಸುವುದು ರಾಷ್ಟ್ರದ ಕೆಲಸವೆಂದು ಒಪ್ಪಬೇಕು.

(೧೧) ಪ್ರತಿಯೊಂದು ವ್ಯಕ್ತಿಯ ಶಕ್ತಿಯಂತೆ ಕೆಲಸವನ್ನು ತೆಗೆದುಕೊಂಡು ಅವರಿಗೆ ಅವಶ್ಯವಿದ್ದಷ್ಟು ಜೀವನಾವಶ್ಯಕ ಸಾಮಗ್ರಿಯನ್ನು ಒದಗಿಸುವ ಗುರಿಯಿಂದಲೇ ರಾಷ್ಟ್ರದ ಹುಟ್ಟುವಳಿ, ಹಂಚುವಿಕೆಗಳ ವ್ಯವಸ್ಥೆ ಮಾಡಬೇಕು

(೧೨) ದುಡಿತದ ತಳಹದಿಯ ಮೇಲೆ ಪ್ರೌಢರಿಗೆಲ್ಲ ಮತಾಧಿಕಾರವಿರಬೇಕು.

(೧೩) ರಾಷ್ಟ್ರವು ನಾಗರಿಕರ ಧರ್ಮಮತಗಳಲ್ಲಿ ಪಕ್ಷಪಾತವನ್ನಾಗಲಿ ವಿಶಿಷ್ಟ ಮತಕ್ಕೆ ಬೆಂಬಲವನ್ನಾಗಲಿ ಕೊಡಲಾರದು. ಜಾತಿವರ್ಣಗಳಲ್ಲಿ ಮೇಲುಕೀಳೆಂಬ ಭೇದವಿರಕೂಡದು.

(೧೪) ಸರಕಾರವು ಸ್ತ್ರೀ ಪುರುಷರಲ್ಲಿ ಭೇದವನ್ನೆಣಿಸಲಾರದು.

(೧೫) ಭಾರತದ ಸಾರ್ವಜನಿಕ ಸಾಲದ ನಿರಾಕರಣೆ.

ಹೀಗೆ ಮೇಲ್ ಕಾಣಿಸಿದ ೧೫ ಯೋಜನೆಗಳಿವೆ. ಇವೆಲ್ಲ ಅಗತ್ಯವಿಲ್ಲವೆಂದು, ಇಂದಿನ ಸಮಾಜರಚನೆಯನ್ನೆಲ್ಲ ಬುಡಮೇಲು ಮಾಡುವಂತಹವೆಂದು, ಬಹಳ ಉಗ್ರವೆಂದು ಮತ್ತು ಪರಕೀಯವೆಂದು ತೋರಬಹುದು. ಆದರೆ ಇವೆಲ್ಲ ನಿಜವಾಗಿಯೂ ಸರಳವಾಗಿವೆ, ವಿವೇಕಯುಕ್ತವಾಗಿವೆ, ನ್ಯಾಯವಾಗಿವೆ, ವ್ಯವಹಾರ್ಯವಾಗಿವೆ. ಇರಲಿ. ಇದು ನಮ್ಮಲ್ಲಿಗೆ ಒಗ್ಗದೆಂದೂ ಪರಕೀಯವೆಂದೂ ಹೇಳುವಿರಾ? ನಿಮ್ಮ ಘಟನಾ ಸಮಿತಿ,

ನ್ಯಾಯವಿಧಾಯಕ ಸಭೆ, ಸುಂಕದ ಸಮಿತಿ, ಹತ್ತಿಯ ಗಿರಣಿಯ ಕರ್ಕಶ ಕೂಗು ಇವೆಲ್ಲ ಪರಕೀಯವಲ್ಲವೆ?

ಇದರಲ್ಲಿ ಹೊರಗಿನದು ಏನೂ ಇಲ್ಲ. ಇದರಲ್ಲಿರುವುದು ವ್ಯಕ್ತಿಯ, ಉತ್ಪಾದಕ ಆಸ್ತಿಯ ಒಡೆತನವನ್ನು ನಾಶಪಡಿಸುವ ಯೋಜನೆ ವ್ಯಕ್ತಿಗತ ಒಡೆತನವೇ ನಮ್ಮ ಎಲ್ಲ, ಇಲ್ಲವೆ ಎಷ್ಟೋ ಕಷ್ಟಗಳ ಮೂಲಕಾರಣವೆಂಬು ದನ್ನು ನಾವು ಅರಿತಿರುವೆವು. ಆದ್ದರಿಂದಲೇ ಈ ಯೋಜನೆ ಮುಂದೆ ಬಂದಿದೆ. ಇಷ್ಟೇ ಅಲ್ಲ. ಸಮಾಜಜೀವನದಲ್ಲಿ ಅತ್ಯಂತ ವಿವೇಕಯುಕ್ತವಾದ ಸಮಾಜದ ಆರ್ಥಿಕ ಯೋಜನೆಯನ್ನು ಪ್ರಸ್ಥಾಪಿಸುವುದೇ ಇದರ ಮುಂದಿನ ಹೆಜ್ಜೆಯಾಗಿದೆ.

೨

# ನನ್ನ ಕಲ್ಪನೆಯ ಸಾಮ್ಯವಾದ

[ಜಯಪ್ರಕಾಶರು ಈ ಪ್ರಕರಣವನ್ನು ೧೯೪೫ ರಲ್ಲಿ ತಮ್ಮ ಬಿಡುಗಡೆಯಾದ ಮೇಲೆ, ಆಗಿನ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಬರೆದರು. ಇದನ್ನು ಕನ್ನಡಿಸಿ ದವರು ಶ್ರೀ|| ಕೆ. ಎಸ್. ಕಾರಂತರು.]

ಯಾವ ವಿಚಾರಪರನೂ ಇಂದು ಮಾನವಜೀವನದ ಬೆಳವಣಿಗೆಯಲ್ಲಿ ಮುಂಬರುವ ಸಮಾಜವ್ಯವಸ್ಥೆ ಸಾಮ್ಯವಾದೀ ತತ್ವದ ಮೇಲೆ ರಚಿತವಾಗು ವುದಿಲ್ಲವೆಂದು ಹೇಳನು. ಆದರೆ ಈ ಸಾಮ್ಯವಾದದ ಸ್ವರೂಪದ ಬಗೆಗೆ ಬಹಳ ಭಿನ್ನಾಭಿಪ್ರಾಯವಿದೆ. ತತ್ವಜ್ಞರು, ಜ್ಞಾನಿಗಳು, ವಿಧವಿಧದ ಸಾಮ್ಯವಾದೀ ತತ್ವಗಳನ್ನು ಕಾಲಕಾಲಕ್ಕೆ ಮಂಡಿಸುತ್ತಾ ಬಂದಿದ್ದಾರೆ. ಇಷ್ಟೊಂದು ಬಗೆಗಳಿರುವ, ಒಳಭೇದಗಳಿರುವ, ಸಾಮ್ಯವಾದದ ತತ್ವಗಳಲ್ಲಿ ಒಂದಾದ ಮಾರ್ಕ್ಸ್ ಪಂಥವನ್ನಷ್ಟೇ ಗಣಿಸಿದರೆ ಈ ಒಳಭೇದ ಕೊಂಚ ಕಡಿಮೆಯೆನಿಸುವುದು. ಆದುದರಿಂದ ನನ್ನಂತೆ ಮಾರ್ಕ್ಸ್ ಪ್ರತಿಪಾದಿ ಸಿರುವ ಸಾಮ್ಯವಾದವನ್ನವಲಂಬಿಸಿದರೆ ಈ ಒಳಭೇದಗಳು ಸ್ವಲ್ಪ ಕಡಿಮೆ ಯಾಗುವವು. ಆದರೂ ಈ ಭೇದಗಳು ಸಂಪೂರ್ಣ ನಿವೃತ್ತಿಯಾಗುವುದಿಲ್ಲ. ಇಂದು ತಮ್ಮ ತಮ್ಮೊಳಗೆ ಕಾದಾಡುವ, ಮಾರ್ಕ್ಸ್ ಪಂಥವನ್ನೊಪ್ಪಿದ ಎಷ್ಟೋ ಸಾಮ್ಯವಾದೀ ಪಂಗಡಗಳಿವೆ. ಉದಾಹರಣೆಗಾಗಿ 'ಟ್ರಾಟ್ಸ್ಕಿ'

(Trotsky) ಮತ್ತು 'ಸ್ಟಾಲಿನ್' (Stalin) ಅನುಯಾಯಿಗಳಿಬ್ಬರೂ ತಾವು ಸಾಮ್ಯವಾದದ ಬಾವುಟದಡಿಯಲ್ಲಿ ಸಾಗುತಿದ್ದೇವೆಂದು ಸಾರುತಿದ್ದಾರೆ. ಆದರೆ ಈ ಎರಡೂ ಪಂಗಡಗಳು ತಮ್ಮ ತಮ್ಮಲ್ಲಿ ಕಾದಾಡುತ್ತಿವೆ. ಒಬ್ಬರ ರಕ್ತಕ್ಕಾಗಿ ಇನ್ನೊಬ್ಬರು ಹಾತೊರೆಯುತಿದ್ದಾರೆ. ಈ ಇಬ್ಬರಲ್ಲಿ ನಿಜಮಾರ್ಕ್ಸ್‌ವಾದವನ್ನು ಪ್ರತಿಪಾದಿಸುವವರು ಯಾರು? ತಮ್ಮ ತಮ್ಮೊಳಗೆ ಕಾದಾಡುವ ಈ ಎರಡೂ ಪಂಗಡಗಳಿಗೆ ಸೇರದ ಮೂರನೆಯವನೊಬ್ಬನು ಇವರಿಬ್ಬರನ್ನೂ ನಿಜಮಾರ್ಕ್ಸ್‌ವಾದಿಗಳಲ್ಲವೆಂದು ತಿಳಿಯುವುದು ಖಂಡಿತ.

ನಮ್ಮ ನಾಡಿನಲ್ಲಿ ಕಮ್ಯುನಿಸ್ಟರು, ರಾಯಿಸ್ಟರು ತಾವು ಮಾರ್ಕ್ಸನ ಅನುಯಾಯಿಗಳೆಂದು ಹೇಳಿಕೊಳ್ಳುತಿದ್ದಾರೆ. ಆದರೆ ಮಾರ್ಕ್ಸನ ಹೆಸರಿನಿಂದ ಈ ಜನರು ಯಾವ ಬಗೆಯ ಸಮಾಜವಾದವನ್ನು ಪ್ರತಿಪಾದಿಸುತಿದ್ದಾರೆಂಬುದು ನಮಗೆಲ್ಲರಿಗೂ ವಿದಿತವೇ ಇದೆ. ಹಿಂದುಸ್ಥಾನದ ಕ್ರಾಂತಿವೀರರನ್ನು ಹಿಂದಿನಿಂದ ತಿವಿದು "ಮ್ಯಾಕ್ಸ್‌ವೆಲ್ಲ"ನ ಬೆಂಬಲಿಗರಾಗಿ, ಗೂಢಚಾರರಾಗಿ ತಿರುಗುವುದೂ ಈ ಮಾರ್ಕ್ಸ್‌ವಾದಿಗಳು ಪ್ರತಿಪಾದಿಸುತ್ತಿರುವ ಮಾರ್ಕ್ಸ್ ತತ್ವದ ಒಂದು ಬಗೆಯಾಗಿದೆ. ಇದನ್ನು ನಾವು ಸಾಕಷ್ಟು ಕಂಡಿದ್ದೇವೆ. ಮೇಲಾಗಿ ಈ ಎರಡೂ ಪಂಗಡಗಳು ಒಂದನ್ನೊಂದು ಅತಿಯಾಗಿ ದ್ವೇಷಿಸುತ್ತಿವೆ. ಇವೂ ಅಲ್ಲದೆ ನಮ್ಮ ನಾಡಿನಲ್ಲಿ ಮಾರ್ಕ್ಸ್‌ವಾದದ ಬಣ್ಣ ಬಳಿದುಕೊಂಡ ಇನ್ನೆಷ್ಟೋ ಪಂಗಡಗಳಿವೆ.

ಇದರಿಂದಾಗಿ, ಇಷ್ಟೊಂದು ವಿಚಾರಗೊಂದಲದಲ್ಲಿ ವಿರುದ್ಧ ಪಂಗಡಗಳ ತಿಕ್ಕಾಟದಿಂದುಂಟಾದ ವಿಷಮ ವಾತಾವರಣದಲ್ಲಿ, ಹಿಂದುಸ್ಥಾನವು ಸಾಮ್ಯವಾದೀ ರಾಷ್ಟ್ರವನ್ನು ಕಟ್ಟಿಕೊಳ್ಳಬೇಕಾದರೆ, ನಿಜ ಮಾರ್ಕ್ಸ್‌ವಾದದ ಬೆಳಕಿನಲ್ಲಿ, ಮಾರ್ಕ್ಸನ ತರುವಾಯ ಜಗತ್ತಿನಲ್ಲಾದ ವಿಶೇಷ ಸ್ಥಿತ್ಯಂತರಗಳನ್ನೂ ಲಕ್ಷ್ಯದಲ್ಲಿಟ್ಟುಕೊಂಡು, ನಮ್ಮ ದೇಶದ ಇತಿಹಾಸದ ಹಿನ್ನೆಲೆಯಲ್ಲಿ ಇಂದಿನ ಪರಿಸ್ಥಿತಿಗೆ ಹೊಂದುವಂತಹ ಸಾಮ್ಯವಾದೀ ಸಜೀವ ಚಿತ್ರವನ್ನು ಕಲ್ಪಿಸಿಕೊಳ್ಳಬೇಕೆಂದು ನನ್ನ ಸ್ಪಷ್ಟ ಅಭಿಪ್ರಾಯ. ಮಾರ್ಕ್ಸ್‌ವಾದವೆಂದರೆ "ಸಮಾಜವಿಜ್ಞಾನ" (Science of Society); ವೈಜ್ಞಾನಿಕ ರೀತಿಯಲ್ಲಿ ಜಗತ್ತಿನಲ್ಲಾದ ಉತ್ಕ್ರಾಂತಿ (Evolution) ಯನ್ನು ಅಳೆಯುವ ತತ್ವಜ್ಞಾನ ಸಮಾಜದಲ್ಲಿ ಆಗಾಗ ಸಂಭವಿಸುವ ಕ್ರಾಂತಿಯನ್ನು ಸಹ

ಒಳಗೊಂಡಿದೆ ಈ ಮಾರ್ಕ್ಸ್‌ವಾದ. ಆದ್ದರಿಂದ ಮಾರ್ಕ್ಸ್‌ವಾದದಲ್ಲಿ ಯಾವ ಬಗೆಯ ಸಾಂಪ್ರದಾಯಕ್ಕೂ ಎಡೆಯಿಲ್ಲ; ಮಾರ್ಕ್ಸ್‌ನ ವಿಚಾರಸರಣಿಯಲ್ಲಿ ಸರ್ವಕಾಲಕ್ಕೂ ಮಾನ್ಯವೆನಿಸುವ ಸಿದ್ಧಾಂತಗಳಿಲ್ಲ. (There can be no room for Dogmatism or Fundamentalism in Marxist thought.) ಮಾರ್ಕ್ಸ್‌ವಾದವನ್ನು ಅದೊಂದು ವಿಜ್ಞಾನವೆಂದು ಕರೆದು, ಅದರಲ್ಲಿ ಸರ್ವಕಾಲಕ್ಕೂ ಮಾನ್ಯವೆಂಬ ಸಿದ್ಧಾಂತ (Dogmatism)ಗಳನ್ನು ಬೆರೆಸಹೋದರೆ ಮಾರ್ಕ್ಸ್‌ವಾದಕ್ಕೆ ದೊಡ್ಡ ಅಪಕಾರ ಬಗೆದಂತಾಗುವುದು. ವಿಜ್ಞಾನ(Science)ದಲ್ಲಿ ಶಾಶ್ವತಸತ್ಯವೆಂಬುದಿಲ್ಲ. ಮಾನವನ ತಿಳಿವಿನ ಭಂಡಾರದಲ್ಲಿರುವ ಅಸತ್ಯವನ್ನು ನಿರಂತರವೂ ನಿರ್ಮೂಲಗೊಳಿಸುತ್ತಾ ವಿಜ್ಞಾನವು ಸದಾ ನಿರರ್ಗಳವಾಗಿ ಪ್ರಗತಿಪಥದಲ್ಲಿ ಮುಂದೆಸಾಗುವುದು. ಮಾರ್ಕ್ಸ್‌ವಾದವು ಒಂದು ವಿಜ್ಞಾನವಾದರೆ ಮಾರ್ಕ್ಸ್‌ನು ಶಾಶ್ವತ ಸತ್ಯವನ್ನು ಸಾಕ್ಷಾತ್ಕರಿಸಿ ಕೊಳ್ಳಲಾರ; ಆದರೆ ಸಾಕ್ಷಾತ್ಕಾರ ಪಥದಲ್ಲಿ ಅವನು ಬಹಳ ಮುಂದೆ ಮಾತ್ರ ಹೋಗಬಲ್ಲ; ಶಾಶ್ವತ ಸತ್ಯದ ಸಾಮೀಪ್ಯದತ್ತ ಕೈಚಾಚ ಬಲ್ಲ; ಇಂದು ಜಗತ್ತಿನ ತಿಳಿವಿನ ಭಾಂಡಾರ ಬಹಳವಾಗಿ ಬೆಳೆದಿದೆ; ಮಾರ್ಕ್ಸ್‌ನ ತರುವಾಯ ಭಂಡವಾಳಗಾರಿಕೆಯ ಸಮಾಜದ ವಿರಾಟ್ ಸ್ವರೂಪದ ಬಗೆಗೂ ನಮಗೆ ವಿಶೇಷ ಅನುಭವ ಬಂದಿದೆ. ಆದ್ದರಿಂದ ನಾವು ಸತ್ಯಪಥದಲ್ಲಿ ಮಾರ್ಕ್ಸ್‌ನಿಗಿಂತ ಮುಂದೆ ಸಾಗಬಲ್ಲೆವು; ಜ್ಞಾನದ ಹೆದ್ದಾರಿಯನ್ನು ಹೆಚ್ಚು ತುಳಿಯುಬಲ್ಲೆವು. ಹೇಗಿದ್ದರೂ, ಡಾರ್ವಿನ್ನನು ಜೀವನ ವಿಕಾಸದ ರೀತಿಯನ್ನು ತಿಳಿಯಲು ಮಾರ್ಗದರ್ಶಿಯಾದಂತೆ, ಮಾನವ ಜೀವನದ ಇತಿಹಾಸವನ್ನು ಶಾಸ್ತ್ರೋಕ್ತವಾಗಿ ತಿಳಿಯಲು,ಅದನ್ನು ಬದಲಿಸಲು ನಮಗೆ ಮಾರ್ಗದರ್ಶಿಯಾದುದು ಮಾರ್ಕ್ಸ್‌ನ ಅಪ್ರತಿಮ ವೈಶಿಷ್ಟ್ಯ. ಮಾರ್ಕ್ಸ್‌ವಾದ ಮತ್ತು ಡಾರ್ವಿನ್ನನ ಜೀವನ ವಿಕಾಸವಾದ ಸುಮಾರು ಒಂದೇ ಸಮಯದಲ್ಲಿ ಉಗಮವಾದುವು. ಆದರೆ ಇಂದು ಡಾರ್ವಿನ್ನನ ತತ್ವವನ್ನು ಅತಿಯಾಗಿ ಪ್ರತಿಪಾದಿಸುವವನು ಕೂಡ ಮೂಲದಲ್ಲಿ ಡಾರ್ವಿನ್ನನು ಪ್ರತಿಪಾದಿಸಿದ ತತ್ವಗಳನ್ನು ಏನೂ ಬದಲಾವಣೆ ಇಲ್ಲದೆ ಒಪ್ಪಲಾರ. ಆದರೂ ತಾನೊಬ್ಬ ಡಾರ್ವಿನ್‌ವಾದಿಯೆಂದು ಇಂತಹನು ಹೆಮ್ಮೆಯಿಂದ ಹೇಳಿಕೊಳ್ಳುವನು. ಜಗತ್ತಿನ ಉದ್ಗ್ರಂಥಗಳಲ್ಲಿ ಡಾರ್ವಿನ್ನನ

“ಜೀವಜಾತಿಗಳ ಮೂಲ” (Origin of the Species) ಎಂಬ ಪುಸ್ತಕವು ಎರಡನೆ ಬೈಬಲ್ ಎಂದು, ವಿಸ್ಕಿನ್ಸನರ್ ವಿಶ್ವವಿದ್ಯಾಲಯದ ನನ್ನ ಪ್ರಾಧ್ಯಾಪಕರೊಬ್ಬರು ಹೇಳುತ್ತಿದ್ದರು. ಆದರೂ, ಡಾರ್ವಿನ್ನನ ತರುವಾಯ ನಡೆದ ಆಧುನಿಕ ಸಂಶೋಧನೆ, ಡಾರ್ವಿನ್ನನು ಎಲ್ಲಿ ತಪ್ಪಿದ್ದಾನೆ ಎಂಬುದನ್ನು ತೋರಿಸಿ ಕೊಡುತ್ತದೆ ಎಂದು ಅವರು ಹೇಳುತ್ತಿದ್ದರು. ಹೀಗೆನ್ನುವಾಗ ಗುರುವಾದ ಡಾರ್ವಿನ್ನನಿಗೆ ತಾನು ಎರಡು ಬಗೆದೆನೆಂದು ಅವರು ಕ್ಷಣಮಾತ್ರವೂ ತಿಳಿಯುತ್ತಿರಲಿಲ್ಲ. ಅದೇ ರೀತಿಯಲ್ಲಿ ಮಾರ್ಕ್ಸನ ಉದ್ಗ್ರಂಥವಾದ ‘ಕೆಪಿಟಲ್’ ಪುಸ್ತಕಕ್ಕೆ ಒಬ್ಬ ಮಾರ್ಕ್ಸ್‌ವಾದಿ ಪ್ರಥಮ ಸ್ಥಾನ ಕೊಡಬಹುದು. ಹೀಗಿದ್ದರೂ ಮಾರ್ಕ್ಸನ ತರುವಾಯ ಜಗತ್ತಿನಲ್ಲಾದ ಸ್ಥಿತ್ಯಂತರಗಳ ಹಿನ್ನೆಲೆಯಲ್ಲಿ, ಮಾರ್ಕ್ಸ್‌ವಾದದಲ್ಲಿದ್ದ ಅಪೂರ್ಣ, ದೋಷಮೂಲ ಸತ್ಯವನ್ನು, ತತ್ವಗಳನ್ನು ಪರಿಶುದ್ಧಗೊಳಿಸಲು ಹೆಣಗಬಹುದು. ಅದೇ ಮಾರ್ಕ್ಸ್‌ವಾದ.

ಇಷ್ಟೊಂದು ಪ್ರಸ್ತಾಪಿಸಿ ನಾನು, ಪ್ರಸ್ತುತದ ವಿಷಯದತ್ತ ಹೊರಳುವೆ. ಒಂದು ಸಮಾಜವಾದೀ ರಾಷ್ಟ್ರವನ್ನು ನಿರ್ಮಿಸಬೇಕಾದರೆ ನಾವು ಎರಡು ಗಟ್ಟಿ (Stages)ಗಳನ್ನು ಇದಿರಿಸಬೇಕು. ಮೊದಲನೆಯದು ಸಂಕ್ರಾಂತಿ ಗಟ್ಟಿ; ಆ ಮೇಲಿನದು ಸಾಮ್ಯವಾದ ರೂಪುಗೊಂಡ ನಂತರದ್ದು. ನಾವು ದಾಟಬೇಕಾಗಿದ್ದ ಸಂಕ್ರಮಣಾವಸ್ಥೆಯ ಸ್ವರೂಪವು ಇಂದಿನ ಪರಿಸ್ಥಿತಿ ಮತ್ತು ನಾವು ಮುಂದೆ ನಿರ್ಮಿಸಬೇಕೆಂದಿರುವ ಸಾಮ್ಯವಾದೀ ಸಮಾಜ—ಇವುಗಳನ್ನು ಹೊಂದಿಕೊಂಡಿದೆ.

ನಾನಿಲ್ಲಿ ನಾವು ನಿರ್ಮಿಸಬೇಕೆಂದಿರುವ ಅಂತಿಮ ಸಾಮ್ಯವಾದೀ ಸಮಾಜವನ್ನು ಚಿತ್ರಿಸಲು ಯತ್ನಿಸುತ್ತೇನೆ. ಸಾಮ್ಯವಾದದ ಮೂಲ ಧ್ಯೇಯಗಳೆಂದರೆ:— ಬಡತನ, ಸುಲಿಗೆ, ಶೋಷಣೆಗಳನ್ನು ಕೊನೆಗೊಳಿಸುವುದು. ಸರ್ವರ ಸಂಪೂರ್ಣ ಆತ್ಮವಿಕಾಸಕ್ಕೆ ಯೋಗ್ಯ ಅವಕಾಶ ದೊರಕಿಸಿ ಕೊಡುವುದು. ಸಮಾಜದ ನೈತಿಕ ಹಾಗೂ ಭೌತಿಕ ಸಂಪತ್ತನ್ನು ಅಭಿವೃದ್ಧಿಗೊಳಿಸಿ ಈ ಸಂಪತ್ತನ್ನು ಸಮಾಜದಲ್ಲಿಯ ಸರ್ವರಿಗೂ ಸಮನಾಗಿ ಹಂಚುವುದು. ಈಗಿದ್ದ ಲಾಭಬಡಕತನವನ್ನು ನಿರ್ಮೂಲಗೊಳಿಸುವುದು. ಸಮಾಜದಲ್ಲಿ ದುಡಿಯುವ ಪ್ರತಿಯೊಬ್ಬನಿಗೂ ಸಮಾಜದ ಶೈಕ್ಷಣಿಕ,

ಸಾಂಸ್ಕೃತಿಕ ಮತ್ತು ಆರ್ಥಿಕ ಸಂಪತ್ತನ್ನು ಸರಿಯಾಗಿ ಹಂಚುವುದು. ಮೇಲೆ ಬರೆದ ಉದ್ದೇಶಗಳನ್ನು ಸಾಧಿಸಿದ ಸಮಾಜವೇ 'ಸಾಮ್ಯವಾದೀ ಸಮಾಜ'ವಾದೀತು. ಈ ಉದ್ದೇಶಗಳನ್ನು ಅಲ್ಲಗಳೆದ ಯಾವ ಸಮಾಜವೂ 'ಸಾಮ್ಯವಾದೀ-ಸಮಾಜ'ವಾಗಲಾರದು ಯಾವ ವಿಭೂತಿಯಿಂದಲೇ ಪ್ರತಿಪಾದಿಸಲ್ಪಡಲಿ, ಯಾವ ರೀತಿ ಸಮಾಜವ್ಯವಸ್ಥೆಯೇ ಇರಲಿ, ಅದು ಈ ಉದ್ದೇಶಗಳನ್ನು ಸಾಧಿಸದಿದ್ದರೆ ನಾವು ಅದಕ್ಕೆ ತಲೆಬಾಗಿಸಕೂಡದು. ಅದರಿಂದ ನಾವು ನಮ್ಮ ತಲೆ ಕೆಡಿಸಿಕೊಳ್ಳಕೂಡದು.

## ಮಹತ್ವದ ಬದಲಾವಣೆ

ಇಂತಹ ಸಮಾಜದ ನಿರ್ಮಾಣವಾಗಬೇಕಾದರೆ ಇಂದಿನ ಸಮಾಜದಲ್ಲಿ ಹಲವಾರು ಮಹತ್ವದ ಬದಲಾವಣೆಗಳಾಗಬೇಕು. ಅಲ್ಲದೆ ಮುಂದಿನ ಸಮಾಜದ ಆರ್ಥಿಕ ಹಾಗೂ ರಾಜಕೀಯ ತಳಹದಿ ಕೆಳಗಿನಂತಿರಬೇಕು. ಎಂದರೆ ಮಾತ್ರ ನಿಜ ಸಾಮ್ಯವಾದವನ್ನು ಕೃತಿಗೊಳಿಸಲು ನಮಗೆ ಸಾಧ್ಯವೆಂದು ನನ್ನ ಬಲವಾದ ನಂಬಿಕೆ.

ಮೊದಲನೆಯದಾಗಿ ನಮಗೆ ಸಂಪೂರ್ಣ ರಾಜಕೀಯ ಸ್ವಾತಂತ್ರ್ಯವಿರಬೇಕು. ಬೇರೊಂದು ರೀತಿಯಲ್ಲಿ ಹೇಳುವುದಾದರೆ ಹಿಂದುಸ್ಥಾನವು ಸ್ವತಂತ್ರ ಪ್ರಜಾಸತ್ತಾರಾಷ್ಟ್ರವಾಗಬೇಕು. ಬ್ರಿಟಿಷರ ಅಡಿಯಾಳಾಗಿ ನಾವಿರುವಾಗ ಸಮಾಜವಾದವನ್ನು ಪ್ರಸ್ಥಾಪಿಸಲು ಎಂದೂ ಸಾಧ್ಯವಿಲ್ಲ. ಇದರ ಬಗೆಗೆ ಹೆಚ್ಚಿನ ವ್ಯಾಖ್ಯೆ ಅವಶ್ಯವಿಲ್ಲ. ಎರಡನೆಯದಾಗಿ, ಈಗಿರುವಂತೆ ವಿಶಿಷ್ಟ ಹಿತಸಂಬಂಧವುಳ್ಳ, ರಾಜಕೀಯ ಅಥವಾ ಆರ್ಥಿಕ ವರ್ಗಗಳಿರಬಾರದು. ಅಂತಹ ವರ್ಗಗಳು ನಿರ್ಮೂಲವಾಗಬೇಕು. ಎಂದರೆ ಸದಾ ತಮ್ಮ ಅಸ್ತಿತ್ವವನ್ನು ಕಾಯ್ದುಕೊಳ್ಳುವ ಆರ್ಥಿಕ ಮತ್ತು ರಾಜಕೀಯ ವಿಶೇಶ ಅಧಿಕಾರವುಳ್ಳ ಯಾವ ವರ್ಗವೂ ಇರಕೂಡದು. ಮತ್ತೊಂದು ರೀತಿಯಲ್ಲಿ ಚಿತ್ರಿಸಬೇಕೆಂದರೆ, ಇಂದಿನ ಆಳರಸರು, ದೇಸಾಯರು, ಜಮಾನುದಾರರು ಮತ್ತು ಬಂಡವಳುಗಾರರು ಅಳಿಯಬೇಕು. ತಾವು ಈಗ ಉಪಯೋಗಿಸುತ್ತಿರುವ ರಾಜಕೀಯ ಮತ್ತು ಆರ್ಥಿಕ ವಿಶೇಷ ಹಕ್ಕುಗಳನ್ನು ಅವರು ಬಿಟ್ಟುಕೊಡಬೇಕು.

ಬ್ರಿಟಿಷ್ ಸತ್ತೆಯನ್ನು ನಾವು ಸಂಪೂರ್ಣ ಕಿತ್ತು ಬಿಸುಟಿ ನಂತರ ದೇಶೀಯ ಬಂಡವಳುಗಾರರನ್ನು, ಆಳರಸರನ್ನು, ಜಮೀನುದಾರರನ್ನು, ದೇಸಾಯರನ್ನು ತಳಕೀಳಿಸುವುದು ನಮಗೆ ಅಷ್ಟೊಂದು ಕಠಿಣ ಕಾರ್ಯ ವಾಗಲಾರದು. ಬ್ರಿಟಿಷ್ ಸಾಮ್ರಾಜ್ಯವಾದವನ್ನು ನಿರ್ಮೂಲಗೊಳಿಸು ವಷ್ಟು ಪ್ರಬಲವಾದ ಹಿಂದೀ ಜನತೆಯು ದೇಶೀಯ ಬಂಡವಾಳುಗಾರಿಕೆ ಯನ್ನು, ಸರಂಜಾಮಿ (feudalism)ಯನ್ನು ಈ ಕ್ರಾಂತಿಕಾರೀ ಪದ್ಧತಿಯಿಂದ ಕಿತ್ತು ಬಿಸುಡುವಾಗ ಯಾವ ಶಕ್ತಿಯೂ ಅವರನ್ನು ತಡೆಯಲಾರದು. ಇಂತಹ ಕ್ರಾಂತಿಯು ಕುಂಠಿತವಾಗಬೇಕಾದರೆ ಜನಸಾಮಾನ್ಯರ ರಾಜಕೀಯ ಜಾಗ್ರತಿಯ ಅಭಾವವೇ, ರಾಜಕೀಯ ಜಾಗ್ರತಿಯ ಕುಂದು ಕೊರತೆಯೇ ತೊಡಕಾಗಬಹುದು. ಅಲ್ಲದೆ ಬೇರಾವ ಶಕ್ತಿಯೂ ಇವರನ್ನು ತಡೆಹಿಡಿಯ ಲಾರದು. ಎಂದರೆ ಹಿಂದುಸ್ಥಾನದಲ್ಲಿ ಸಾಮ್ಯವಾದೀ ಚಳವಳಿಯು ಜನತೆ ಯನ್ನು ಸರಿಮಾರ್ಗದಲ್ಲಿ ನಡೆಸಿಕೊಂಡು ಹೋಗುವಷ್ಟು ದಕ್ಷವಾದರೆ, ಅದು ಅಷ್ಟೊಂದು ಬೆಳೆದು ಶಕ್ತಿಗೊಂಡಿದ್ದರೆ, ಈ ಎಲ್ಲ ಬದಲಾವಣೆಗಳನ್ನು ವಿಶೇಷ ಕಷ್ಟಗಳಿಲ್ಲದೆ ಸಾಧಿಸಬಹುದು.

ಆಳರಸರುಗಳನ್ನು ನಿರ್ಮೂಲಮಾಡಲು ಸಾಮ್ಯವಾದಿಗೆ ಯಾವು ದೊಂದು ತಾಂತ್ರಿಕ (Technical) ಅಡಚಣೆಯೂ ಉಂಟಾಗುವುದಿಲ್ಲ. ಆಧುನಿಕ ಬಂಡವಳುಗಾರ ಸಮಾಜ(Bourgeois Society)ವೇ ನಮಗೆ ಈ ಸಮಸ್ಯೆಯನ್ನೆದುರಿಸಲು ಬೇಕಾದ ಆವಶ್ಯಕತೆಗಳನ್ನು ಒದಗಿಸುತ್ತದೆ. ನಾವು ಫ್ರಾನ್ಸಿನ ಮಹಾಕ್ರಾಂತಿಯಂತಹ ಆಧುನಿಕ ಭಂಡವಳುಗಾರೀ ಕ್ರಾಂತಿಯಿಂದ, ಈ ಬಗೆಯ ಅನುಭವ ಪಡೆಯಬಹುದು. ಆಳರಸು ಗಳನ್ನು ಅವರ ಸಿಂಹಾಸನದಿಂದ ಕೆಳಗಿಳಿಸಿ ಅವರನ್ನು ಜನಸಾಮಾನ್ಯರ ಸಾಲಿಗೆ ತಂದಿರಿಸಬೇಕು ; ಅವರ ರಾಜ್ಯಗಳನ್ನು ದೇಶದ ಇತರ ಆಡಳಿತ ಭಾಗಗಳಿಗೆ, ಭಾಷೆ ಸಂಸ್ಕೃತಿಗಳಿಗೆ, ಹೊಂದಿಕೊಳ್ಳುವಂತೆ ಜೋಡಿಸಬೇಕು. ಇವೇ ನಮ್ಮ ಪಾಲಿನ ಉಳಿದ ಕೆಲಸ.

ಜಮೀನುದಾರಿ ಪದ್ಧತಿಯ ನಿರ್ಮೂಲನವು ಕೂಡ ನಮ್ಮ ಸಾಮ್ಯ ವಾದೀ ತತ್ವಕ್ಕೆ ಹೊಂದುವ ನಮ್ಮ ಸಾಗುವಳಿಯ ಪುನರ್ಘಟನೆಯಲ್ಲಿ ಒಂದು ಮೊದಲನೆ ಹೆಜ್ಜೆ. ಈ ಸಮಸ್ಯೆ ಸ್ವಲ್ಪ ಗಡುಚಾಗಿದೆ. ತತ್ವ

ಮತ್ತು ವ್ಯವಹಾರಗಳ ಈ ಎರಡು ಪ್ರಶ್ನೆಗಳಿಂದ ಈ ಸಮಸ್ಯೆ ಕೂಡಿದೆ. ಸಾಮ್ಯವಾದೀ ವ್ಯವಸಾಯುಪದ್ಧತಿಯಲ್ಲಿ ಜಮೀನುದಾರರಿಗೆ ಸ್ಥಾನವಿಲ್ಲವೆಂದ ಮಾತ್ರಕ್ಕೆ ನಾವು ಹೊಸತೇನನ್ನೂ ಹೇಳಿದಂತಾಗಲಿಲ್ಲ. ನಾವು ರೂಪಿಸಬೇಕೆಂದಿರುವ ಸಾಮ್ಯವಾದೀ ವ್ಯವಸಾಯದ ಪ್ರಶ್ನೆ ಹಾಗೆ ಉತ್ತರಿಸದೆ ಉಳಿಯುವುದು. ನನಗೆ ತೋಚಿದಂತೆ ನಮ್ಮ ದೇಶದಲ್ಲಿ ಸಾಮ್ಯವಾದಕ್ಕೆ ಹೊಂದಿಕೊಳ್ಳುವ ವ್ಯವಸಾಯ ಪದ್ಧತಿಯನ್ನು ನಿರೂಪಿಸಲು ಯತ್ನಿಸುತ್ತೇನೆ.

ಸಾಮ್ಯವಾದದ ಪ್ರಸ್ತಾವನೆಯಲ್ಲಿ, ಭಂಡವಾಳುಗಾರಿಕೆಯ ನಿರ್ಮೂಲನವು ನಿಶ್ಚಯವಾಗಿಯೂ ಒಂದು ದೀರ್ಘ ಮುಂದಡಿ. ಆದರೆ ಈ ಕೃತಿಯೇ ಸಾಮ್ಯವಾದದ ಪ್ರತಿಷ್ಠಾಪನೆಯಾಗಲಾರದು. ಈ ನಿರ್ಮೂಲನ ಕೆಲಸ ಒಂದು ವಿಧ್ವಂಸಕ ಭಾಗ ಮಾತ್ರ; ಇನ್ನೊಂದು ಭಾಗವಾದ ವಿಧಾಯಕ ಭಾಗವನ್ನು ಕೈಕೊಂಡಾಗ ಮಾತ್ರ ಸಾಮ್ಯವಾದದ ಸಾರಳಿಯ ಚಿತ್ರ ಸಂಪೂರ್ಣ ಸುಂದರವಾಗುವುದು. ಭಂಡವಾಳವಾದವನ್ನು ನಾವು ಕೊನೆಗೊಳಿಸುವ ರೀತಿಯೂ ಅದರ ಸ್ಥಾನವನ್ನು ಇನ್ನಾವ ಸಮಾಜ ರಚನೆ ಆಕ್ರಮಿಸುವುದೆಂಬ ಬಗೆಯೂ ನಾವು ನಿರೂಪಿಸಬಹುದಾದ ಸಮಾಜದ ಸ್ವರೂಪವನ್ನು ನಿಯಂತ್ರಿಸಬಲ್ಲುದು ಸಾಮ್ಯವಾದೀ ಹಿಂದೂಸ್ಥಾನದಲ್ಲಿ ಉದ್ಯೋಗ ಉದ್ದಿಮೆಗಳು ಎಂತಿರುವುವೆಂಬ ಬಗೆಗೆ ಬರೆಯಲೆತ್ನಿಸುತ್ತೇನೆ.

ಸಾಮ್ಯವಾದೀ ಭಾರತದ ವ್ಯವಸಾಯ ಮತ್ತು ಉದ್ಯೋಗ ಉದ್ದಿಮೆಗಳ ವಿಚಾರಗಳೊಂದಿಗೆ ಅಲ್ಲಿನ ವ್ಯಾಪಾರ ಮತ್ತು ಬೇಂಕು ಪದ್ಧತಿಯ ಬಗೆಗೂ ಸ್ವಲ್ಪ ಹೇಳಬಯಸುವೆ. ಅದರಿಂದ ಸಾಮ್ಯವಾದೀ ರಾಷ್ಟ್ರದ ಆರ್ಥಿಕ ವ್ಯವಸ್ಥೆಯ ಬಗೆಗೆ ನಮಗೆ ಸ್ಪಷ್ಟ ಕಲ್ಪನೆಯಾಗುವುದು. ಆರ್ಥಿಕ ವ್ಯವಸ್ಥೆಯ ಸಂಪೂರ್ಣ ಕಲ್ಪನೆಯನ್ನು ನಿರೂಪಿಸಿದ ನಂತರ ಉಳಿದ ಭಾಗವಾದ ರಾಜಕೀಯ ಸ್ವರೂಪವನ್ನು ಮಾತ್ರ ಚಿತ್ರಿಸಲು ಉಳಿಯುವುದು. ನಾನು ಪ್ರಸ್ತುತಃ ಆರ್ಥಿಕ ಚಿತ್ರದತ್ತ ಹೊರಳುವೆ.

ಮೊದಲು ನಾನು ವ್ಯವಸಾಯದ ರೀತಿನೀತಿಗಳನ್ನು ನಿರೂಪಿಸುವೆನು.

ನಮ್ಮಲ್ಲಿಯ ಭೂಮಿ ಒಡೆತನದ ಪದ್ಧತಿಗಳು ತೀರಾ ಜಿಡುಕಿನ ಸಮಸ್ಯೆಗಳು. ಆದರೆ ಈ ಎಲ್ಲ ಪದ್ಧತಿಗಳು ಕೆಲವೇ ಜನ ಒಡೆಯರ

ಹಿತಕ್ಕಾಗಿ ಹೊಲದಲ್ಲಿ ದುಡಿಯುವ ಒಕ್ಕಲಿಗರ ರಕ್ತವನ್ನು ಹೀರಿಕೊಳ್ಳು ವುದನ್ನು ತಮ್ಮ ಆಧಾರವಾಗಿಟ್ಟುಕೊಂಡಿವೆ. ಸುಲಿಗೆ ಶೋಷಣೆಗಳನ್ನು ಜೀವಾಳವಾಗಿಟ್ಟುಕೊಂಡಿರುವ ಒಡೆತನದ ಈ ಎಲ್ಲಾ ಪದ್ಧತಿಯನ್ನು ಸಮೂಲ ನಾಶಮಾಡಬೇಕು. ಇವುಗಳ ಬದಲು ನವಪದ್ಧತಿಯೊಂದನ್ನು ನಿರ್ಮಿಸಬೇಕು. ಸಾಮ್ಯವಾದೀ ವ್ಯವಸಾಯವನ್ನು ನಿರ್ಮಿಸುವಾಗ ನಾವು ಎರಡು ಗಟ್ಟಗಳನ್ನು ದಾಟಬೇಕು. ಮೊದಲನೆಯದು ಸಹಕಾರೀ ವ್ಯವ ಸಾಯ (Co-operative Farming), ಎರಡನೆಯದು ಸಾಂಘಿಕ ವ್ಯವ ಸಾಯ (Collective Farming). ನಾನು ಮೊದಲು ಸಹಕಾರಿ ವ್ಯವ ಸಾಯದ ರೀತಿಯನ್ನು ಚಿತ್ರಿಸುವೆನು.

## ಸಹಕಾರಿ ಪದ್ಧತಿ

ಜಮೀನುದಾರಿಯನ್ನು ಕೊನೆಗೊಳಿಸಿದ ನಂತರ ದೊಡ್ಡ ದೊಡ್ಡ ಜಮೀನುದಾರಿ ಹೊಲಗಳನ್ನು (Big holdings) ಒಡೆದು ಹಂಚಬೇಕಾ ಗುವುದು ದೊಡ್ಡ ಹೊಲಗಳನ್ನು ಚಿಕ್ಕದಾಗಿಸಬೇಕು; ಚಿಕ್ಕವುಗಳನ್ನು ಯೋಗ್ಯ ಶಾಸ್ತ್ರೀಯ ವ್ಯವಸಾಯಕ್ಕೆ ಅನುವುಗೊಳಿಸುವುದಕ್ಕಾಗಿ ದೊಡ್ಡ ವಾಗಿಸಬೇಕು. ಯಾವ ಒಕ್ಕಲಿಗನಿಗೂ ಒಂದು ನಿರ್ದಿಷ್ಟ ಪ್ರಮಾಣಕ್ಕಿಂತ ಹೆಚ್ಚಿಗೆ ಹೊಲದ ಒಡೆತನಕ್ಕೆ ಅಧಿಕಾರ ಸಿಗಲಾರದು. ನಾವು ಈ ನಿರ್ದಿಷ್ಟ ಪ್ರಮಾಣವನ್ನು ಹೆಚ್ಚೆಂದರೆ ಮೂವತ್ತು ಎಕರೆ, ಕಡಮೆ ಎಂದರೆ ಐದು ಎಕರೆ ಹೊಲ ಎಂದು ಇಟ್ಟುಕೊಳ್ಳಬಹುದು. ಹಳ್ಳಿಯಲ್ಲಿ ವಾಸಿಸದ, ಹೊಲದಲ್ಲಿ ದುಡಿಯದ ಯಾವನೊಬ್ಬನಿಗೂ ಹೊಲದ ಒಡೆತನ ದೊರೆಯ ಲಾರದು. ಸಾಮ್ಯವಾದೀ ಭಾರತದಲ್ಲಿ ವ್ಯವಸಾಯದ ಆರ್ಥಿಕ ವ್ಯವ ಸ್ಥೆಯ ತೀರ ಚಿಕ್ಕ ಕೇಂದ್ರವೆಂದರೆ ಒಂದು ಹಳ್ಳಿ. (The unit of agri- cultural economy would be the village ). ಒಂದು ಗ್ರಾಮದಲ್ಲಿಯ ಹೊಲದ ಮೇಲಿನ ಅಧಿಕಾರವು, ಕಾಯಿದೆ ಮೇರೆಗೆ ಆ ಇಡಿ ಗ್ರಾಮಕ್ಕೇ ಸೇರಿರಬೇಕು. ಆ ಹಳ್ಳಿಯ 'ಗ್ರಾಮ ಪಂಚಾಯಿತಿ'ಯು ಹೊಲವನ್ನು ಸಾಗುವಳಿಗಾಗಿ ಅಲ್ಲಿಯ ಒಕ್ಕಲಿಗರಲ್ಲಿ ಹಂಚುವುದು; ಹೀಗೆ ಒಕ್ಕಲಿಗರಿಗೆ ತಾವು ದುಡಿಯುವ ಹೊಲದ ಮೇಲೆ ಒಂದು ತರದ ಒಡೆತನದ ಹಕ್ಕು (Proprietory Rights)-ದೊರೆಯುವುದು. ಈಗಿನ ಒಡೆತನದ ಹಕ್ಕನ್ನು

ಸಾಧ್ಯವಿದ್ದಲ್ಲೆಲ್ಲಾ ಮನ್ನಿಸಲಾಗುವುದು. ಆದರೆ ಇದು ಎಲ್ಲಿ ಆರ್ಥಿಕ ವಿಷಮತೆಗೆ ಕಾರಣವಾಗುವುದೋ ಅಲ್ಲಿ ಇದನ್ನು ಮುರಿದು ಇಂದಿನ ಆರ್ಥಿಕ ವ್ಯವಸ್ಥೆಗೆ ಸರಿಹೋಗುವಂತೆ ಮಾಡಲಾಗುವುದು. ಆದರೆ ಈ ಒಡೆತನದ ಹಕ್ಕಿನ ವ್ಯಾಪ್ತಿಗೆ ಮೇರೆ ಇದೆ. ದುಡಿಯುವ ಯಾವನೊಬ್ಬ ಒಕ್ಕಲಿಗನಿಗೆ ಅವನ ಹೊಲದ ವಿಸ್ತೀರ್ಣಕ್ಕನುಗುಣವಾಗಿ ಗ್ರಾಮದ ಉತ್ಪತ್ತಿಯನ್ನೂ ಹಂಚಲಾಗುವುದು. ಯಾವ ಒಕ್ಕಲಿಗನಿಗೂ ತನ್ನ ಹೊಲವನ್ನು ಗ್ರಾಮಪಂಚಾಯತಿಗಲ್ಲದೆ ಇತರರಿಗೆ ವಿಕ್ರಯಿಸುವ ಅಧಿಕಾರ ವಿರಲಾರದು. ಬೇಸಾಯವನ್ನು ಅಥವಾ ಅದಕ್ಕೆ ಸಂಬಂಧಪಟ್ಟ ಇತರ ಕಸಬುಗಳನ್ನು ಎಲ್ಲರಿಂದ ಬೇರೆಯಾಗಿ, ವೈಯಕ್ತಿಕವಾಗಿ ಸಾಗಿಸುವ ಅವಕಾಶ ಯಾವ ಒಕ್ಕಲಿಗನಿಗೂ ದೊರೆಯದು. ಗ್ರಾಮ ಪಂಚಾಯಿತಿಯು, ತನ್ನ ಇತರ ಕಾರ್ಯಕಲಾಪಗಳೊಂದಿಗೆ ಆ ಗ್ರಾಮದ ಜಮೀನುಗಳನ್ನು ಸಹಕಾರೀ ಪದ್ಧತಿಯಿಂದ ಸಾಗುಮಾಡುವ ಕಾರ್ಯವನ್ನು ಕೈಕೊಳ್ಳುವುದು. ಎಂದರೆ ಆ ಗ್ರಾಮ ಪಂಚಾಯಿತಿಯು ಆ ಗ್ರಾಮದ ಒಕ್ಕಲಿಗರ ಕೃಷಿ ವ್ಯವಸ್ಥೆಯ ಸಹಕಾರೀ ಸಂಘ (Farmars Co-operative) ವಾಗುವುದು. ಈ ಕೃಷಿ ವ್ಯವಸ್ಥೆಯ ಸಹಕಾರೀ ಸಂಘವು ಬೇಸಾಯಕ್ಕೆ ಸಂಬಂಧಪಟ್ಟ ಎಲ್ಲ ವ್ಯವಹಾರಗಳನ್ನು ಸಾಗಿಸುವುದು ಇದರಲ್ಲಿ ಸರಕುಗಳ ಮಾರಾಟ, ಕೊಳ್ಳುವಿಕೆ, ಕಡದ ವ್ಯವಹಾರ, ಮೊದಲಾದುವು ಸಮಾವೇಶವಾಗುವುವು. ಹೊಲದಲ್ಲಿ ದುಡಿಯುವ ಎಲ್ಲರಿಗೂ ಹಣದ ರೂಪವಾಗಿಯಾಗಲೀ ಸರಕುಗಳ ಮೂಲಕವಾಗಿಯಾಗಲೀ (in kind or cash) ಕೂಲಿ ಸಲ್ಲಿಸಲ್ಪಡುವುದು. ಗ್ರಾಮದ ಉತ್ಪತ್ತಿಯನ್ನು ವೆಚ್ಚ ಕಳೆದು ಅವರವರ ಹೊಲದ ಪ್ರಮಾಣಕ್ಕನುಸರಿಸಿ ಎಲ್ಲರಿಗೂ ಹಂಚಲಾಗುವುದು.

## ಸಾಂಘಿಕ ಪದ್ಧತಿ

ಮೇಲೆ ಬರೆದುದು ಸಹಕಾರೀ ಪದ್ಧತಿಯ ಸಮಾಜವಾದೀ ಕೃಷಿಕ್ರಮ. ಇದರ ನಂತರದ ಗಟ್ಟವೆಂದರೆ ಸಾಂಘಿಕ ಕೃಷಿಕ್ರಮ. ಈ ಪದ್ಧತಿಯಲ್ಲಿ ಯಾವನಿಗೂ ಹೊಲದ ಮೇಲೆ ವೈಯಕ್ತಿಕ ಒಡೆತನ ಇರಲಾರದು. (ಆಧುನಿಕ ರಷ್ಯಾದಲ್ಲಿ ಪ್ರತಿಯೊಬ್ಬ ಸಾಂಘಿಕ ಒಕ್ಕಲಿಗನಿಗೆ ಅವನ ಮನೆ

ಸುತ್ತಲೂ ಕಾಯಿಪಲ್ಯ ಬೆಳೆಸಲು, ಅವನ ದನಕರು ಕುರಿಮಂದೆ ಅಥವಾ ಕೋಳಿಗಳನ್ನು ಸಾಕಲು ಮೂರು ಎಕರೆ ಹೊಲವನ್ನು ಕೊಡಲಾಗಿದೆ.) ಒಂದು ಗ್ರಾಮಕ್ಕೆ ಸಂಬಂಧಪಟ್ಟ ಹೊಲವನ್ನು ಆ ಗ್ರಾಮದ ಒಕ್ಕಲಿಗರು ಆ ಗ್ರಾಮದ ಸಾಂಘಿಕ ಪದ್ಧತಿಗನುಗುಣವಾಗಿ ಸಾಗುವಮಾಡುವರು. ಅಲ್ಲದೆ ಆ ಗ್ರಾಮದ ಹೊಲದ ಒಡೆತನದ ಹಕ್ಕು ಇಡೀ ಗ್ರಾಮಕ್ಕೆ ಸೇರಿದುದು ಇಂತಹ ಗ್ರಾಮಗಳನ್ನು "ಸಾಂಘಿಕ ಗ್ರಾಮ" (village collectives) ಗಳೆಂದು ಕರೆಯಬಹುದು. ಈ ಸಾಂಘಿಕ ಪದ್ಧತಿಯನ್ನು ರಷ್ಯಾದಲ್ಲಿ, ಬಹಳ ಜನರ ಬಲಿದಾನ ಮಾಡಿ ನಿರಂಕುಶ ಆಳ್ವಿಕೆ ನಡೆಸಿ ಬಳಿಕೆಗೆ ತಂದರು. ಹೀಗೆ ಈ ಪದ್ಧತಿಯನ್ನು ರೂಢಿಗೆ ತರುವಾಗ ಈ ನಿರಂಕುಶ ಸರ್ವಾಧಿಕಾರದ ಆಳಿಕೆಯ ಆಕ್ರೋಶಕ್ಕೆ ಆಹುತಿಯಾಗಿ ಸತ್ತ ಜನರ ಸಂಖ್ಯೆ ಸುಮಾರು ಎರಡು ಕೋಟಿಗೂ ಮಿಕ್ಕಿರುವುದೆಂದು ತಿಳಿದ ಜನ ಅಭಿಪ್ರಾಯಪಡುತ್ತಾರೆ. ನಾನು ಇಂತಹ ದಬ್ಬಾಳಿಕೆಯನ್ನು ಒಪ್ಪಲಾರೆ; ಮಾತ್ರವಲ್ಲ, ಹೊಲದಲ್ಲಿ ದುಡಿಯುವ ನಿರಪರಾಧಿ ಒಕ್ಕಲಿಗರ ಮೇಲೆ ನಡೆಸಿದ ಇಂತಹ ದಬ್ಬಾಳಿಕೆಯು ಸಾಮ್ಯವಾದೀ ತತ್ವವನ್ನೇ ಅಲ್ಲಗಳೆಯುವದು. ಜಮೀನುದಾರಿಯನ್ನು ನಿರ್ಮೂಲಮಾಡಲು, ತರುವಾಯ ಜಮೀನನ್ನು ಸರಿಯಾಗಿ ಹಂಚಲು, ದೊಡ್ಡ ದೊಡ್ಡ ಜಮೀನುಗಳನ್ನು ಮುರಿಯಲು, ಸ್ವಲ್ಪ ಮಟ್ಟಿಗೆ ಸರಕಾರದ ಅಧಿಕಾರವನ್ನು ಉಪಯೋಗಿಸಬೇಕಾಗುವುದೆಂದು ನನಗೆ ಗೊತ್ತು. ಆದರೆ ಹೀಗೆ ಮಾಡುವಾಗ ಹೆಚ್ಚೆಂದರೆ ನೂರಕ್ಕೆ ಬರಿಯ ಇಪ್ಪತ್ತು ಜನರ ವಿರುದ್ಧ ಅಧಿಕಾರದಂಡವನ್ನು ಉಪಯೋಗಿಸಲಾಗುವುದು. ಸಾಂಘಿಕ ಪದ್ಧತಿಯನ್ನು ಒತ್ತಾಯದಿಂದ ಹೇರಹೋದರೆ ಮಾತ್ರ ಅದೇ ಅಧಿಕಾರದಂಡವನ್ನು ನೂರಕ್ಕೆ ಎಪ್ಪತ್ತು-ಎಂಬತ್ತರಷ್ಟು ಜನರ ವಿರುದ್ಧ ಉಪಯೋಗಿಸುವ ಸಂದರ್ಭ ಒದಗುವುದು. ಶ್ರಮಜೀವಿಗಳ ಕಲ್ಯಾಣಕ್ಕಾಗಿ ದುಡಿಯುತ್ತೇವೆಂದು ಹೇಳಿಕೊಳ್ಳುವ ಯಾವ ರಾಜಕೀಯ ಪಕ್ಷವೂ ಇಂತಹ ಕೃತಿಗಿಳಿದರೆ ನಾನು ಅದನ್ನು ನ್ಯಾಯವೆಂದು ಒಪ್ಪಲಾರೆ, ಸಹಿಸಲಾರೆ. ನೂರರಲ್ಲಿ ಇಪ್ಪತ್ತರಷ್ಟು ಜನರನ್ನು ಉಳಿದ ಬಹುಸಂಖ್ಯಾಕರ ಹಿತಕ್ಕಾಗಿ ಹತ್ತಿಕ್ಕಬಹುದು. ಆದರೆ ಎಪ್ಪತ್ತು-ಎಂಬತ್ತರಷ್ಟು ಜನರನ್ನು, ಅವರ ಹಿತಕ್ಕಾಗಿಯೇ ಇರಲಿ, ಹತ್ತಿಕ್ಕುವುದು ಯಾವ

ವಿಧದಿಂದಲೂ ನ್ಯಾಯವಲ್ಲ. ಸಹಕಾರೀ ಪದ್ಧತಿಯ ಕೃಷಿ ಸಾಗಿಸಬೇಕಾದರೆ ಮಾತ್ರ ಅಧಿಕಾರದಂಡದ ಉಪಯೋಗವನ್ನು ಸಾಕಷ್ಟು ಮಾಡಬೇಕಾಗಬಹುದು. ಆದರೆ ಆಗ ಹಿತ ವಚನಗಳನ್ನಾಡುತ್ತ ಅಧಿಕಾರ ದಂಡವನ್ನು ಜಾಣ್ಮೆಯಿಂದ ಉಪಯೋಗಿಸಿದರೆ, ಅದರೊಂದಿಗೆ ಕೆಲವೊಂದು ಆರ್ಥಿಕ ಸಲವತ್ತುಗಳನ್ನು ಒದಗಿಸಿದರೆ ಈ ಕೆಲಸ ಸುಲಭಸಾಧ್ಯವಾಗಬಹುದು; ಸುಲಭ ಸಾಧ್ಯವಾಗುವುದೆಂದು ನನಗೆ ಖಚಿತವೆನಿಸಿದೆ. ಆದರೆ ಸಾಂಘಿಕ ಪದ್ಧತಿಯನ್ನು ಬಳಕೆಗೆ ತರಬೇಕಾದರೆ ಇಡಿಯ ಜನತೆಯನ್ನು ಹತ್ತಿಕ್ಕುವ ಪ್ರಸಂಗ ಒದಗಬಹುದು. ಇಂತಹ ದರ್ಪದ ಆಳ್ವಿಕೆ ಸಾಮ್ಯವಾದಕ್ಕೆ ಎಂದೂ ಒಪ್ಪದ ವಿಷಯ. ಸಾಮ್ಯವಾದವೆಂದರೆ ಶ್ರಮಜೀವಿಗಳ ಸಾಂಘಿಕ ಸಂಕಲ್ಪದ ಅವತಾರ. ಇಂತಿರುವಾಗ ಸಾಮ್ಯವಾದವು ಶ್ರಮಜೀವಿಗಳನ್ನು ಮೆಟ್ಟುವ ಯಾವ ವಿಧಾನವನ್ನೂ ಒಪ್ಪದು. ಆದುದರಿಂದ ಸಾಂಘಿಕ ಪದ್ಧತಿಯನ್ನು ನಿಧಾನವಾಗಿ, ಸಾಮ್ಯವಾದವು ವಿಕಸಿಸುವಾಗ, ರೂಢಿಗೆ ತರಬಹುದು. ಜನರ ಸಾಂಸ್ಕೃತಿಕ ಮಟ್ಟ, ತಿಳಿವು ಮತ್ತು ಪ್ರಚಾರ ಕ್ರಮಕ್ಕೆ ಹೊಂದಿಕೊಂಡು ನಾವು ಈ ಸಾಂಘಿಕಪದ್ಧತಿಯನ್ನು ಕೃತಿಗಿಳಿಸಬೇಕು. ಹೊಸ ವ್ಯವಸಾಯಕ್ಷೇತ್ರಗಳನ್ನು ಆರಂಭಿಸುವಾಗ ಹೀಗೆ ಮೊದಲು ಸಹಕಾರಿ, ಆಮೇಲೆ ಸಾಂಘಿಕ ಪದ್ಧತಿಯೆಂದು ವಿಳಂಬ ಮಾಡಬೇಕಿಲ್ಲ. ಅಂತಹ ಹೊಸಕ್ಷೇತ್ರಗಳನ್ನು ಮೊದಲಿನಿಂದಲೇ ಸಾಂಘಿಕ ಪದ್ಧತಿಗನುಸರಿಸಿ ನಿರ್ಮಿಸಬಹುದು. ಈಗಿನ ಅಸ್ತವ್ಯಸ್ತ ವ್ಯವಸಾಯದಲ್ಲಿರುವ ಅವ್ಯವಸ್ಥಿತ ಆರ್ಥಿಕ ರಚನೆಯನ್ನು ಬದಲಿಸಿ, ಸಹಕಾರೀ ಪದ್ಧತಿಯ ಹೊಸ ಆರ್ಥಿಕ ರಚನೆಯನ್ನು ನಿರ್ಮಾಣ ಮಾಡುವಾಗ ಬಹಳ ಮಂದಿ ಒಕ್ಕಲಿಗರು ನಿರುದ್ಯೋಗಿಗಳಾಗುವ ಸಂದರ್ಭವಿದೆ. ಇಂತಹ ನಿರುದ್ಯೋಗಿ ಜನರಿಗೆ ಹೊಸ ಕೈಗಾರಿಕೆಗಳಲ್ಲಿ, ವಿಶೇಷತಃ ವ್ಯವಸಾಯಕ್ಕೆ ಉಪಯುಕ್ತವಾಗುವ ಗ್ರಾಮ ಕೈಗಾರಿಕೆಗಳಲ್ಲಿ ಉದ್ಯೋಗ ಒದಗಿಸಿಕೊಡಬೇಕು.

## ಉದ್ದಿಮೆ ಮತ್ತು ಕೈಗಾರಿಕೆಗಳು

ನಾವೀಗ ಸಮಾಜವಾದೀ ಕೈಗಾರಿಕೆಯ ಸ್ವರೂಪ ಎಂತಹದೆಂಬುದನ್ನು ತಿಳಿಯೋಣ. ಸಮಾಜವಾದೀ ಭಾರತದಲ್ಲಿ ಎರಡು ಬಗೆಯ ಕೈಗಾರಿಕೆಗಳನ್ನು ಬೆಳೆಸಬಹುದೆಂದು ನನಗೆ ತೋಚುತ್ತದೆ. ದೊಡ್ಡ ಪ್ರಮಾಣದ

ಕೈಗಾರಿಕೆಗಳು ಮತ್ತು ಚಿಕ್ಕ ಕೈಗಾರಿಕೆಗಳು. ಈ ದೊಡ್ಡ ಮತ್ತು ಸಣ್ಣ ಕೈಗಾರಿಕೆಗಳು, ವ್ಯವಸಾಯ ಮತ್ತು ಇನ್ನಿತರ ಉದ್ಯೋಗ ಉದ್ದಿಮೆಗಳು ಪ್ರಜಾಸತ್ತೆಯ ನಿಯಂತ್ರಣದಲ್ಲಿ, ಆಡಳಿತೆಯಲ್ಲಿ ಸಾಗುವ ಒಂದು ಸರಳ ಹಾಗೂ ನಿಯೋಜಿತ ಆರ್ಥಿಕ ವ್ಯವಸ್ಥೆಯ ಬೇರೆ ಬೇರೆ ಅಂಗಗಳೆಂದು ನಾನು ಬೇರೆಯಾಗಿ ಹೇಳಬೇಕಿಲ್ಲ. ಪ್ರಾಂತಿಕ ಅಥವಾ ಫೆಡರಲ್ ಸರಕಾರಗಳು ಎಲ್ಲಾ ದೊಡ್ಡ ಕೈಗಾರಿಕೆಗಳನ್ನು ತಾವೇ ಬೆಳೆಸಿ ನಡೆಸುವುವು. ಕೈಗಾರಿಕೆಗಳಲ್ಲಿ ದುಡಿಯುವ ಕೂಲಿಕಾರ ಸಂಘ ಸಂಸ್ಥೆಗಳ ಪ್ರತಿನಿಧಿಗಳಿಗೆ ಈ ಕೈಗಾರಿಕೆಗಳನ್ನು ನಡೆಸುವ ಆಡಳಿತೆಯ ಯಂತ್ರದಲ್ಲಿ ಬುಡದಿಂದ ತುದಿಯ ವರೆಗೂ ಯೋಗ್ಯ ಮತ್ತು ಹೆಚ್ಚಿನ ಅಧಿಕಾರಯುತ ಸ್ಥಾನವಿರುವುದು. ಉಳಿದ ಎಲ್ಲಾ ಚಿಕ್ಕ ಉದ್ಯೋಗಗಳನ್ನು ಉತ್ಪಾದನಾ ಸಹಕಾರೀ ಸಂಘ (producers' co-operative) ಗಳನ್ನಾಗಿ ನಿಯೋಜಿಸಬಹುದೆಂದು ನನಗೆ ತೋರುತ್ತದೆ. ಇಂತಹ ಸಹಕಾರೀ ಸಂಘಗಳು ಈ ಎಲ್ಲಾ ಚಿಕ್ಕ ಕೈಗಾರಿಕೆಗಳನ್ನು ತಮ್ಮ ವಶದಲ್ಲಿಟ್ಟುಕೊಂಡು ನಡೆಸಬಹುದು. ಸರಕಾರವು ಇಂತಹ ಸಹಕಾರಿ ಸಂಘಗಳನ್ನು ಯೋಜನಾಬದ್ಧ ಆರ್ಥಿಕ ವ್ಯವಸ್ಥೆಯ ಸುಂದರ ಅಂಗಗಳನ್ನಾಗಿಸಲು ಕೆಲವೊಂದು ಮಟ್ಟಿಗೆ ನಿಯಂತ್ರಿಸಬಹುದೇ ಹೊರತು ಅವುಗಳ ಆಡಳಿತೆಯಲ್ಲಿ ಕೈಹಾಕಬೇಕೆಂದಿಲ್ಲ. ಇಂದಿನ ಗ್ರಾಮೋದ್ಯೋಗಗಳು, ಮುಂದೆ ಬೆಳೆಯಬಹುದಾದ ಗ್ರಾಮೋದ್ಯೋಗಗಳು, ಮತ್ತಿನ್ನಿತರ ಚಿಕ್ಕ ಪುಟ್ಟ ಕೈಗಾರಿಕೆಗಳು ಇವುಗಳಲ್ಲಿ ಸಮಾವೇಶವಾಗುವುವು.

ಸರಕಾರ ಮತ್ತು ಈ ಉತ್ಪಾದನಾ ಸಹಕಾರೀ ಸಂಘಗಳು ಕೈಗಾರಿಕೆಗಳನ್ನು ನಡೆಸುವ ಪದ್ಧತಿಯಲ್ಲದೆ ಇನ್ನೊಂದು ಹೊಸ ಪದ್ಧತಿಯನ್ನು ಕೈಕೊಳ್ಳಬಹುದೆಂದೂ ನನ್ನ ಯೋಚನೆ. ಅದೆಂದರೆ ನಗರ ಸಭೆ ಮತ್ತು ಇತರ ಪಂಚಾಯಿತಿಗಳು ನಡೆಸುವ ಉದ್ದಿಮೆಗಳು. ಒಂದು ಸಣ್ಣ ಪಟ್ಟಣದ ಪಂಚಾಯಿತಿ ಅಥವಾ ದೊಡ್ಡ ನಗರದ ನಗರಸಭೆ ಇಂತಹ ಕೈಗಾರಿಕೆಗಳನ್ನು ನಡೆಸಬಹುದು. ಇಂತಹ ಕೈಗಾರಿಕೆಗಳಲ್ಲಿರುವ ಕೆಲಸಗಾರರ ಪ್ರತಿನಿಧಿಗಳಿಗೆ ಅವುಗಳ ಆಡಳಿತೆಯಲ್ಲಿ ಹೆಚ್ಚಿನ ಅಧಿಕಾರವಿರುವುದೆಂದು ಬೇರೆಯಾಗಿ ಹೇಳಬೇಕಿಲ್ಲ.

ಪಂಚಾಯಿತಿಗಳೂ, ಔದ್ಯೋಗಿಕ ಸಹಕಾರೀ ಸಂಘಗಳೂ ನಡೆಸಬಹುದಾದ ಉದ್ಯೋಗಗಳನ್ನು ಪ್ರೋತ್ಸಾಹಿಸಬೇಕೆನ್ನುವುದಕ್ಕೆ ಕೆಲವೊಂದು ವಿಶಿಷ್ಟ ಕಾರಣಗಳಿವೆ. ನಮ್ಮ ದೇಶದಲ್ಲಿ ಇಂದಿನ ಇಷ್ಟೊಂದು ಅಧಿಕ ಜನರಿಗೆ ಕೆಲಸವೊದಗಿಸುವುದು ಸುಲಭಸಾಧ್ಯವಲ್ಲ ಇದಲ್ಲದೆ ಮೇಲೆ ಚಿತ್ರಿಸಿದ ಪದ್ಧತಿಯಲ್ಲಿ, ವ್ಯವಸಾಯದಲ್ಲಿ ಕ್ರಾಂತಿಕಾರಿ ಮಾರ್ಪಾಟು ಉಂಟಾಗುವಾಗ ದೊಡ್ಡ ದೊಡ್ಡ ಹೊಸ ಕೈಗಾರಿಕೆಗಳನ್ನು ಆರಂಭಿಸಿದ ತರುವಾಯ ಈ ಸಿರುದ್ಯೋಗಿಗಳ ಸಂಖ್ಯೆ ಇನ್ನಷ್ಟು ಹೆಚ್ಚಾಗುವುದು. ಇಂತಹ ಎಲ್ಲರಿಗೂ ಉದ್ಯೋಗ ದೊರಕಿಸಲು ಮೇಲೆ ಬರೆದ ಔದ್ಯೋಗಿಕ ಸಹಕಾರೀ ಸಂಘಗಳು, ನಗರಸಭೆ ಮತ್ತು ಪಂಚಾಯಿತಿಗಳು ನಡೆಸಬಹುದಾದ ಚಿಕ್ಕ ಪುಟ್ಟ ಉದ್ಯೋಗಗಳಿಂದ ಮಾತ್ರ ಸಾಧ್ಯ. ಎರಡನೆಯದಾಗಿ ಸರಕಾರವು ತನ್ನ ವಶದಲ್ಲಿ ಎಲ್ಲಾ ಕೈಗಾರಿಕೆಗಳನ್ನಿಟ್ಟುಕೊಂಡು ತಾನೇ ಎಲ್ಲರಿಗೂ ಉದ್ಯೋಗ ದೊರಕಿಸಿಕೊಡುವ ಪದ್ಧತಿಗೆ ನನ್ನ ಸಮ್ಮತಿಯಿಲ್ಲ. ಇಂತಹ ಸಮಾಜವಾದೀ ಸರಕಾರವು ಈಗ ರಷ್ಯಾದಲ್ಲಿದ್ದಂತೆ ಸರ್ವತಂತ್ರ ಸ್ವತಂತ್ರ ಭೈರವನಾಗಿ ಜನತೆಯ ಮೇಲೆ ತನ್ನ ನಿರಂಕುಶ ಆಡಳಿತೆಯನ್ನು ಹೇರಲು ಅನುವು ದೊರೆತಂತಾಗುವುದು. ಹೀಗಾದಲ್ಲಿ ಸರಕಾರವು ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುವುದಿಲ್ಲ; ನಿಜವಾದ ಸಾಮ್ಯವಾದೀ ರಾಷ್ಟ್ರದಲ್ಲಿರಬೇಕಾದಂತೆ ಇರದೆ ಇಂದು ರಷ್ಯಾದಲ್ಲಿದ್ದಂತೆ ನಿರಂಕುಶ ರಾಜತಂತ್ರ (totalitarianism) ಕ್ಕೆ ನಾವು ಎಡೆಕೊಟ್ಟಂತಾಗುವುದು. ನಾವು ಕೈಗಾರಿಕೆಗಳ, ಉದ್ದಿಮೆಗಳ ಆಡಳಿತೆಯನ್ನು ವಿಕೇಂದ್ರೀಕರಿಸಿದರೆ, ಪ್ರಜಾಸತ್ತಾತ್ಮಕ ಗ್ರಾಮರಾಜ್ಯ ಪದ್ಧತಿಯನ್ನನುಸರಿಸಿದರೆ ಇಂತಹ ನಿರಂಕುಶ ರಾಜತಂತ್ರದ ಮಂಗಮುಷ್ಟಿಯ ಹಿಡಿತದಿಂದ ತಪ್ಪಿಸಿಕೊಳ್ಳಬಹುದು; ನಿಜವಾದ ಪ್ರಜಾಸತ್ತೆಯನ್ನು ಬೆಳೆಸಬಹುದು.

## ವ್ಯಾಪಾರ

ಸಾಮ್ಯವಾದೀ ರಾಷ್ಟ್ರದ ವ್ಯಾಪಾರವನ್ನು ಕುರಿತು ನನ್ನ ಕಲ್ಪನೆ ಕೆಳಗಿನಂತಿದೆ. ಪರದೇಶಗಳೊಡನೆ ನಡೆಸುವ ವ್ಯಾಪಾರ ಸರ್ವವನ್ನೂ ಸರಕಾರವೇ ನಡೆಸುವಂತಿರಬೇಕು.

ಆಂತರಿಕ ವ್ಯಾಪಾರವನ್ನೆಲ್ಲ ಸರಕಾರ, ಪಂಚಾಯಿತಿಗಳು ಮತ್ತು ಸಹಕಾರೀ ಸಂಘಗಳು ನಡೆಸಬೇಕು

ಬೇಂಕು ವ್ಯವಹಾರವನ್ನು ಸಂಪೂರ್ಣವಾಗಿ ಸರಕಾರವೇ ನಡೆಸಬೇಕು. ಇದೇ ನನ್ನ ಸಾಮ್ಯವಾದೀ ಭಾರತದ ಆರ್ಥಿಕ ವ್ಯವಸ್ಥೆಯ ಸ್ವರೂಪ ದರ್ಶನ

೧ ಗ್ರಾಮಪಂಚಾಯಿತಿಗಳು ನಡೆಸಬಹುದಾದ ಸಹಕಾರೀ ಕೃಷಿಕ್ರಮ.

೨. ಹೊಸತಾಗಿ ಆರಂಭಿಸುವ ಜಮೀನುಗಳಲ್ಲಿ ಸಾಂಘಿಕ ಕೃಷಿಕ್ರಮ.

೩. ಸರಕಾರವೇ ತನ್ನ ವಶದಲ್ಲಿಟ್ಟುಕೊಂಡು ನಡೆಸುವ ಬೃಹತ್ ಕೈಗಾರಿಕೆಗಳು.

೪. ಪಂಚಾಯಿತಿಗಳು, ನಗರ ಸಭೆಗಳು ನಡೆಸುವ ಕೈಗಾರಿಕೆಗಳು.

೫. ಔದ್ಯೋಗಿಕ ಸಹಕಾರೀ ಸಂಘಗಳಾಗಿ ಸಂಘಟಿಸಲ್ಪಟ್ಟ ಚಿಕ್ಕ ಪುಟ್ಟ ಕೈಗಾರಿಕೆಗಳು.

## ರಾಜ್ಯ ಪದ್ಧತಿ

ಇನ್ನು ರಾಜ್ಯಪದ್ಧತಿಯ ಸ್ವರೂಪದತ್ತ ಹೊರಳುವಾ.

ಸಾಮ್ಯವಾದೀ ಭಾರತ ಸರಕಾರವು ಸಂಪೂರ್ಣ ಪ್ರಜಾಸತ್ತಾತ್ಮಕ ಸರಕಾರವಿರಬೇಕು ಎಲ್ಲಿ ಪ್ರಜಾಸತ್ತೆಯಿಲ್ಲವೋ ಅಲ್ಲಿ ಸಾಮ್ಯವಾದ ವಿರಲಾರದು. ಸಾಮ್ಯವಾದೀ ರಾಜ್ಯಪದ್ಧತಿಯಲ್ಲಿ ಕೆಲಸಗಾರರ ಸರ್ವಾಧಿಕಾರ (dictatorship of the proletariat) ಇರಲೇಬೇಕೆಂದು ಹೇಳುವುದು ಸರ್ವಸಾಮಾನ್ಯ ಪ್ರಮಾದವಾಗಿದೆ. ಮಾರ್ಕ್ಸನು ಪ್ರತಿಪಾದಿಸಿರುವ ತತ್ವಕ್ಕೆ ಇದು ತೀರ ವಿಸಂಗತವಾಗಿದೆ. ಭಂಡವಾಳಗಾರ ರಾಷ್ಟ್ರದಿಂದ ಸಾಮ್ಯವಾದೀ ರಾಷ್ಟ್ರಕ್ಕೆ ಪರಿವರ್ತನೆ ಹೊಂದುತ್ತಿರುವ ಅಂತರದಲ್ಲಿ ಮಾತ್ರ ಇಂತಹ ಕೆಲಸಗಾರರ ಸರ್ವಾಧಿಕಾರವಿರಬಹುದೆಂದು ಮಾರ್ಕ್ಸನ ಮತ. ಅದು ಸಹ ಇರಲೇಬೇಕೆಂಬ ನಿಯಮವಿಲ್ಲ. ರಾಜಕೀಯ ಪ್ರಜಾಸತ್ತೆ (political democracy) ಸಂಪೂರ್ಣ ಅಮಲಿನಲ್ಲಿಳಿದ, ವಿಶೇಷ ಸೈನ್ಯಬಲವಿಲ್ಲದ ಇಂಗ್ಲಂಡಿನಂತಹ ರಾಷ್ಟ್ರಗಳಲ್ಲಿ ಸಾಮ್ಯವಾದೀ ಸಮಾಜವನ್ನು ಪ್ರಜಾಸತ್ತಾತ್ಮಕವಾಗಿಯೇ ಕಟ್ಟಬಹುದೆಂದು ಮಾರ್ಕ್ಸನು

ಅಭಿಪ್ರಾಯಪಟ್ಟಿದ್ದಾನೆ. ಆದರೆ ಅಂತಹ ಅಪೂರ್ವ ಸಂದರ್ಭಗಳನ್ನು ಬಿಟ್ಟರೆ ಉಳಿದೆಡೆಗಳಲ್ಲಿ ಸಮಾಜವು ಪರಿವರ್ತನೆ ಹೊಂದುತ್ತಿರುವ ಅಂತರದಲ್ಲಿ ಕೆಲಸಗಾರರ ಸರ್ವಾಧಿಕಾರ ತೀರ ಆವಶ್ಯವೆಂದು ಮಾರ್ಕ್ಸನ ತತ್ವಗಳಲ್ಲಿ ಪ್ರತಿಪಾದಿಸಲಾಗಿದೆ. ಹೀಗಿದ್ದರೂ ಒಮ್ಮೆ ಸಂಧಿಕಾಲ ಮುಗಿದ ಬಳಿಕ ಸಾಮ್ಯವಾದೀ ರಾಷ್ಟ್ರಗಳ ರಾಜ್ಯಪದ್ಧತಿ ಸಂಪೂರ್ಣ ಪ್ರಜಾಸತ್ತಾತ್ಮಕವಾಗಿಯೇ ಇರಬೇಕೆಂಬುದು ಮಾರ್ಕ್ಸ್‌ವಾದದ ತಿರುಳು. ಹಳೆಯ ಆಳುವ ವರ್ಗದ ಸಂಪೂರ್ಣ ಉಚ್ಚಾಟನೆಯಾದ ಬಳಿಕ ರಾಷ್ಟ್ರವನ್ನು ಸಂಪೂರ್ಣವಾಗಿ ಶ್ರಮಜೀವಿಗಳ ರಾಜ್ಯವಾಗಿರಿಸಿದ ನಂತರ, ಕೆಲಸಗಾರರ ಸರ್ವಾಧಿಕಾರದ ಮಾತೆತ್ತುವುದು ತೀರ ಅವಿವೇಕವೆನಿಸುವುದು. ಏಕೆಂದರೆ ಕೆಲಸಗಾರರು ತಮ್ಮನ್ನು ತಾವೇ ಸರ್ವಾಧಿಕಾರದ ನಿರಂಕುಶ ಆಡಳಿತೆಗೆ ಬಲಿಕೊಡಲಾರರು.

"ಕಾಮಗಾರರ ಸರ್ವಾಧಿಕಾರ"ದ ಬಗೆಗೆ ನಾನು ಇಲ್ಲಿ ಸ್ವಲ್ಪ ವಿವೇಚಿಸುತ್ತೇನೆ. ನಮ್ಮ ಭಾರತದಲ್ಲಿ ಭಂಡವಾಳಗಾರ ಸಮಾಜದಿಂದ ಸಾಮ್ಯವಾದೀ ಸಮಾಜಕ್ಕೆ ರಾಷ್ಟ್ರ ಪರಿವರ್ತನೆ ಹೊಂದುವಾಗ ಈ ಪರಿವರ್ತನೆ ಯಾವ ಸ್ವರೂಪ ತಾಳುವುದು ? ಸರ್ವಾಧಿಕಾರತ್ವದ್ದೊ ? ಪ್ರಜಾಸತ್ತಾತ್ಮಕ ಸ್ವರೂಪದ್ದೊ ? ಪ್ರಜಾಸತ್ತಾತ್ಮಕ ಸ್ವರೂಪ ತಾಳುವುದೆಂದು ನನ್ನ ವೈಯಕ್ತಿಕ ಅಭಿಪ್ರಾಯ. ಯಾವ ಸ್ವರೂಪ ತಾಳಿದರೂ ಮಾರ್ಕ್ಸ್‌ವಾದದ ಕೆಲಸಗಾರರ ಸರ್ವಾಧಿಕಾರವೆಂದರೆ, ರಷ್ಯಾದಲ್ಲಿನ ಕಮ್ಯೂನಿಷ್ಟ ಪಕ್ಷದ ಆಳ್ವಿಕೆಯಂತೆ ಪ್ರತಿರಾಜಕೀಯ ಪಕ್ಷದ ವಿರೋಧವಿಲ್ಲದ ಒಂದೇ ಒಂದು ರಾಜಕೀಯ ಪಕ್ಷದ ನಿರಂಕುಶ ಆಳ್ವಿಕೆಯೆಂದು ಅರ್ಥವಾಗುವುದಿಲ್ಲ. ಮಾರ್ಕ್ಸ್‌ವಾದದಲ್ಲಿ ಪ್ರತಿಪಾದಿಸಲ್ಪಟ್ಟಿರುವ ಕೆಲಸಗಾರರ ಸರ್ವಾಧಿಕಾರವೆಂದರೆ, ಅದೊಂದು ಇಡೀ ವರ್ಗದ ಸರ್ವಾಧಿಕಾರೀ ಆಡಳಿತೆಯೆಂದು ಅರ್ಥವಾಗುವುದು ; ಅಥವಾ ಉದ್ಯೋಗ ಉದ್ದಿಮೆಗಳಲ್ಲಿ ಹಿಂದುಳಿದ ರಾಷ್ಟ್ರಗಳಲ್ಲಿ, ಹಿಂದೂಸ್ಥಾನದಲ್ಲಿ ಶ್ರಮಜೀವಿಗಳ ಒಕ್ಕಲಿಗರ ಕೂಲಿಕಾರರ, ಕೆಳದರ್ಜೆಯ ಮಧ್ಯಮವರ್ಗದವರ ಸರ್ವಾಧಿಕಾರವೆಂದು ಅರ್ಥವಾಗುವುದು. ಈ ವರ್ಗಗಳು ತಮ್ಮದೇ ಆದ ಒಂದಕ್ಕಿಂತ ಹೆಚ್ಚು ಪಕ್ಷಗಳನ್ನು ಕಟ್ಟಿಕೊಳ್ಳಬಹುದು. ರಾಜ್ಯಾಡಳಿತೆಯಲ್ಲಿ ಈ ಎಲ್ಲ ಪಕ್ಷಗಳ ಸಮಾವೇಶವಾಗಿರ

ಬೇಕು ; ಒಂದು, ಇಲ್ಲವೆ ಎಲ್ಲಾ ಪಕ್ಷಗಳಿಗೂ ರಾಜ್ಯಪದ್ಧತಿಯಲ್ಲಿ ಸ್ವತಂತ್ರ ವಾಗಿ ವ್ಯವಹರಿಸುವ ಹಕ್ಕಿರಬೇಕು. ಕೆಲಸಗಾರರ ಸರ್ವಾಧಿಕಾರವೆಂದರೆ ಶ್ರಮಜೀವಿಗಳ ಪಕ್ಷವನ್ನು ಹತ್ತಿಕ್ಕುವುದೆಂದು ಅರ್ಥವಾಗುವುದಿಲ್ಲ. ಈ ಹಿಂದೆ ಶ್ರಮಜೀವಿಗಳನ್ನು ಹತ್ತಿಕ್ಕಿದ ಆಳುವ ವರ್ಗಗಳನ್ನು, ಅವರ ಸಂಘ ಸಂಸ್ಥೆಗಳನ್ನು, ಹತ್ತಿಕ್ಕುವುದೆಂದು ಮಾತ್ರ ಅರ್ಥ.

ಸಮಾಜವಾದೀ ಜನಾಂಗದಲ್ಲಿ ಪ್ರಜಾಸತ್ತೆಯೆಂತಿರಬೇಕೆಂದು ಯೋಚಿಸುವುದಾದರೆ ಸಾಮ್ಯವಾದೀ ಪ್ರಜಾಸತ್ತೆಯ ಸಂಪೂರ್ಣ ನಿರೂಪಣೆ ಕೊಡುವುದು ಅವಶ್ಯವೆನಿಸುವುದು. ಸಾಮ್ಯವಾದೀ ಪ್ರಜಾಸತ್ತೆಯಲ್ಲಿ ಒಂದೇ ರಾಜಕೀಯ ಪಕ್ಷದ ನಿರಂಕುಶ ಆಡಳಿತವಿರಕೂಡದು.

ಶ್ರಮಜೀವಿಗಳ ಒಂದಕ್ಕಿಂತ ಹೆಚ್ಚು ರಾಜಕೀಯ ಪಕ್ಷಗಳಿರಬಹುದು ; ಮತ್ತು ಅವುಗಳಿಗೆ ಸಮಾಜದಲ್ಲಿ ವ್ಯವಹರಿಸಲು ಸಂಪೂರ್ಣ ಸ್ವಾತಂತ್ರ್ಯವಿರ ಬೇಕು. ಮಾತ್ರವಲ್ಲ, ಒಕ್ಕಲಿಗರ ಸಹಕಾರೀ ಸಂಘಗಳು ಮತ್ತು ಔದ್ಯೋಗಿಕ ಸಹಕಾರಿ ಸಂಘಗಳು ತಮ್ಮವೇ ಆದ ಪಕ್ಷಗಳನ್ನು ಕಟ್ಟಿ ಕೊಳ್ಳಬಹುದು ; ಇಂತಹ ಪಕ್ಷಗಳಿಗೆ ಸಮಾಜದಲ್ಲಿ ಸ್ವತಂತ್ರವಾಗಿ ತಮ್ಮ ಕಾರ್ಯ ಸಾಗಿಸುವ, ಪ್ರಚಾರ ನಡೆಸುವ ಅಧಿಕಾರವಿರಬೇಕು. ಸಾಮ್ಯ ವಾದೀ ಪ್ರಜಾಸತ್ತೆಯಲ್ಲಿ ಜನತೆ ನಿರ್ಭಯವಾಗಿ ತನ್ನ ಅಭಿಪ್ರಾಯಗಳನ್ನು ಮಂಡಿಸುವಂತಾಗಬೇಕು. ಹೀಗೆ ಅಭಿಪ್ರಾಯಗಳನ್ನು ವ್ಯವಸ್ಥಿತವಾಗಿ ಮಂಡಿಸಲು ಜನತೆ ತಮಗೆ ಬೇಕೆನಿಸಿದ ರಾಜಕೀಯ ಪಕ್ಷವನ್ನು ಕಟ್ಟಿ ಕೊಳ್ಳುವಂತಾಗಬೇಕು. ಕೂಲಿಕಾರ ಸಂಘಗಳು, ಪಂಚಾಯಿತಿಗಳು, ಸಹಕಾರೀ ಸಂಘಗಳು ಬೇಕಿದ್ದರೆ ತಮ್ಮವೇ ಆದ ಮುಖಪತ್ರಗಳನ್ನು ಪ್ರಕಟಿಸಬಹುದು. ತಮ್ಮ ಆಶ್ರಯದಲ್ಲಿ ಆಕಾಶವಾಣಿಗಳನ್ನು ನಡೆಸ ಬಹುದು. ಶಾಲೆ, ಕಾಲೇಜು ಮತ್ತಿತರ ವಿದ್ಯಾಮಂದಿರಗಳನ್ನು ನಡೆಸ ಬಹುದು.

ಸಾಮ್ಯವಾದೀ ಪ್ರಜಾಸತ್ತೆಯ ರಾಷ್ಟ್ರದಲ್ಲಿ ಕಾಮಗಾರ ಸಂಘಗಳು ಸರಕಾರದ ಯಂತ್ರದ ಸೂತ್ರಗಳಾಗಿ ಸರಕಾರವು ಕುಣಿದಂತೆ ತಾಳ ಹಾಕುವ ಅಂಗವಾಗಬಾರದು. ಬದಲಾಗಿ ಅವು ಸ್ವತಂತ್ರವಿದ್ದು ಆಡಳಿತೆ ನಡೆಸು

ತ್ತಿರುವ ಸರಕಾರದ ಮೇಲೆ ತಮ್ಮ ಪ್ರಭಾವವನ್ನು ಬೀರಬೇಕು. ಇಂದಿನ ರಷ್ಯಾದಲ್ಲಿ ಕೆಲಸಗಾರರ ಸಂಘಗಳಿಗೆ ಯಾವ ಸ್ವಾತಂತ್ರ್ಯವೂ ಇಲ್ಲ. ಇವು ಸರಕಾರದ ನಿರಂಕುಶ ಪ್ರಭುತ್ವದ ಅಡಿಯಲ್ಲಿ ತತ್ತರಿಸುತ್ತಿವೆ ಕೆಲಸಗಾರರ ರಾಜ್ಯದಲ್ಲಿ ಎಲ್ಲ ಕೆಲಸಗಾರರ ಸಂಘ ಸಂಸ್ಥೆಗಳು ಸರಕಾರದ ಆಶ್ರಯದಲ್ಲಿರಬೇಕೆಂದು ವಾದಿಸಿ ಇಂದು ರಷ್ಯಾದಲ್ಲಿ ನಡೆಯುತ್ತಿರುವುದನ್ನು ಸಮರ್ಥಿಸಲಾಗುತ್ತದೆ. ಇಲ್ಲಿ ರಾಜ್ಯ ಮತ್ತು ಸರಕಾರ (state and government) ಎಂಬ ಬಗೆಗೆ ಸ್ವಲ್ಪ ವಿಚಾರಗೊಂದಲವುಂಟಾಗಿದೆ. ಒಂದು ವಿಶಿಷ್ಟ ರಾಜ್ಯ (state) ಕಾಮಗಾರರ ರಾಜ್ಯವಾಗಿರಬಹುದು. ಆದರೆ ಅಲ್ಲಿಯ ಸರಕಾರ (government) ಜನತೆಯ ಸಲಹೆಯನ್ನು ತಿರಸ್ಕರಿಸಿ ತಿಳಿದೋ ತಿಳಿಯದೆಯೋ ತಪ್ಪು ಮಾಡುತ್ತಿರಬಹುದು; ಜನತೆಯ ಹಿತಕ್ಕೆ ಪೆಟ್ಟು ಕೊಡುತ್ತಿರಬಹುದು. ಅಂತಹ ಸಂದರ್ಭಗಳಲ್ಲಿ ಶ್ರಮಜೀವಿಗಳ ಸ್ವತಂತ್ರ ಸಂಘ ಸಂಸ್ಥೆಗಳು ಮುಂದೆ ಬಂದು ಸರಕಾರವನ್ನು ತಡೆಯಬೇಕು; ಅದನ್ನು ಹಿಡಿತದಲ್ಲಿಡಬೇಕು. ಉದಾಹರಣೆಗಾಗಿ—ಕೂಲಿಕಾರ ಸಂಘಗಳು ಹೀಗೆ ಮಾಡಬಹುದು. ಸಾಮ್ಯವಾದೀ ರಾಜ್ಯದಲ್ಲಿ ಕೆಲಸಗಾರ ಸಂಘಗಳೇ ಮೊದಲಾದ ಸಂಸ್ಥೆಗಳಿಗೆ ಹೆಚ್ಚಿಗೆ ಮಹತ್ವವಿದೆ, ಪ್ರಾಮುಖ್ಯತೆಯಿದೆ. ಸರಕಾರವೊಂದನ್ನು ಬಿಟ್ಟರೆ ಇವುಗಳ ಅಧಿಕಾರವ್ಯಾಪ್ತಿಯನ್ನು ಯಾರೂ ಮಿಗಿಲಿಸಲಾರರು; ಇಷ್ಟೊಂದು ಮಹತ್ವದ ಮಟ್ಟಕ್ಕೆ ನಾವು ಏರಿರಬೇಕು.

ಇದು ನನ್ನ ಸಾಮ್ಯವಾದೀ ಭಾರತದ ಸುಖಮಯ ಸುಂದರ ಚಿತ್ರ. ಇದರಲ್ಲಿ ಸಂಪೂರ್ಣ ಆರ್ಥಿಕ ಮತ್ತು ರಾಜಕೀಯ ಸ್ವಾತಂತ್ರ್ಯಗಳು ನಲಿದಾಡುತ್ತಿರುವವು. ಈ ಪ್ರಜಾಸತ್ತೆಯಲ್ಲಿ ಜನರು ಭಂಡವಾಳಗಾರರ ಗುಲಾಮರಲ್ಲ; ಅಥವಾ ಒಂದು ವಿಶಿಷ್ಟ ರಾಜಕೀಯ ಪಕ್ಷದ ದಾಸರೂ ಅಲ್ಲ. ಅಲ್ಲಿ ಮಾನವನು ಸಂಪೂರ್ಣ ಸ್ವತಂತ್ರನಾಗಿ ವಿಹರಿಸುವನು. ಅವನು ತನಗೆ ಉಪಜೀವನವನ್ನೊದಗಿಸಿಕೊಡುವ ಸಮಾಜದ ಸೇವಕನಾಗಿರಬೇಕು. ಆದರೆ ಅವನು ಒಂದು ಮಿತಿಯಲ್ಲಿ ತನ್ನ ಜೀವನದ ವ್ಯಾಪ್ತಿಯನ್ನು ಕಂಡುಕೊಳ್ಳಲು, ಸ್ಥಾನವೃತ್ತಿಗಳನ್ನು ಆರಿಸಿಕೊಳ್ಳಲು ಸಂಪೂರ್ಣ ಸ್ವತಂತ್ರನಿರುವನು. ಅವನು ನಿರ್ಭಯನಾಗಿ ಅಲ್ಲಿ ತನ್ನ ಸ್ವತಂತ್ರ ಅಭಿಪ್ರಾಯಗಳನ್ನು ಮಂಡಿಸಬಲ್ಲನು ಅಂತಹ ಸಮಾಜದಲ್ಲಿ ಅವನಿಗೆ ತನ್ನ

ನೈತಿಕ ಮತ್ತು ಭೌತಿಕ ಜೀವನದ ಪರಮಾವಧಿಯನ್ನು ಕಂಡುಕೊಳ್ಳಲು ಸಂಪೂರ್ಣ ಅವಕಾಶ ದೊರೆಯುವುದು.

ಈ ಸಮಾಜದಲ್ಲಿ ಮನುಷ್ಯ ಮನುಷ್ಯರೊಳಗೆ ವಿಶೇಷ ಭೇದಗಳಿರುವುದಿಲ್ಲ ಇದ್ದರೂ ನಿಸರ್ಗದತ್ತವಾದ ಶಾರೀರಿಕ ಅಥವಾ ಮಾನಸಿಕವಿರಬಹುದು. ಏಕೆಂದರೆ ಅಲ್ಲಿ ಜನರ ಉತ್ಪತ್ತಿ ಉಳಿತಗಳಲ್ಲಿ ವಿಶೇಷವಾಗಿ ಹೆಚ್ಚು ಕಡಿಮೆ ಇರುವುದಿಲ್ಲ.

ಕ್ರಾಂತಿಯು ಚಿರಕಾಲ ಬಾಳಲಿ.

೩

## ಗಾಂಧೀಜಿಯವರ ಮುಂದಾಳುತನ ಮತ್ತು ಕಾಂಗ್ರೆಸ್ ಸಾಮ್ಯವಾದೀ ಪಕ್ಷ

ಕಾಂಗ್ರೆಸ್ಸಿನ ಬಗೆಗೆ ಕಾಂಗ್ರೆಸ್ ಸಾಮ್ಯವಾದೀ ಪಕ್ಷವು ಈ ಕೆಲವು ತಿಂಗಳಿಂದ ತಳೆದ ಧೋರಣೆ ತಕ್ಕಷ್ಟು ಟೀಕೆಗೂ ತೆಗಳಿಕೆಗೂ ಗುರಿಯಾಗಿದೆ. ಆದರೆ ಸ್ವಲ್ಪ ಶಾಂತಚಿತ್ತದಿಂದ ಯೋಚಿಸಿದರೆ ನಮ್ಮ ಧೋರಣೆ ಸುಸಂಬದ್ಧವಾಗಿದೆಯೆಂದು ಕಂಡುಬರದಿರದು. ದುರ್ದೈವದಿಂದ ಈಗಿನ ಪರಿಸ್ಥಿತಿಯಲ್ಲಿ ಶಾಂತವಾಗಿ ಯೋಚಿಸುವುದೇ ಸಾಧ್ಯವಿಲ್ಲ. ಈಗ ಒಬ್ಬರ ಮೇಲೆ ಇನ್ನೊಬ್ಬರಿಗೆ ವಿಶ್ವಾಸವಿಲ್ಲ. ತಪ್ಪು ತಿಳವಳಿಕೆಯ ಮೂಲಕ ಮನಸ್ತಾಪ ಬೆಳೆಯುತ್ತಲಿದೆ. ಎಲ್ಲೆಲ್ಲಿಯೂ ಬರಿಯ ಗುಲ್ಲೇ ಗುಲ್ಲು. ತಮ್ಮ ಅಭಿಪ್ರಾಯಕ್ಕೆ ಒಪ್ಪದಿರುವವರ ಮೇಲೆ ಕೆಲವೆಡೆಗಳಲ್ಲಿ ಅಪವಾದವನ್ನೂ ಹೊರಿಸಲಾಗುತ್ತಿದೆ. ಎಡಪಕ್ಷದ ನನ್ನ ಕೆಲವು ಮಿತ್ರರು ನನ್ನ ಇತ್ತೀಚೆಯ ಹೇಳಿಕೆ—ಧೋರಣೆಗಳನ್ನು ವಿಮರ್ಶಿಸುತ್ತ ನಾನು ಕಾಂಗ್ರೆಸ್ ಕಾರ್ಯಕಾರೀ ಸಮಿತಿಯ ಸದಸ್ಯತ್ವಕ್ಕಾಗಿ ಹಾತೊರೆಯುತಿದ್ದೇನೆಂದು ಹೇಳಿದ್ದಾರೆ. ಎಡಪಕ್ಷದ ಕೆಲವರ ಯೋಚನೆಯ ಮಟ್ಟ ಎಲ್ಲಿಯ ವರೆಗೆ ಇಳಿದಿದೆಯೆಂಬುದು ಇದರಿಂದ ಸ್ಪಷ್ಟವಾಗುವಂತಿದೆ. ನನ್ನ ಈ ಮಿತ್ರರು ನನ್ನ ಧ್ಯೇಯ ಧೋರಣೆಗಳಲ್ಲಿ ಈ ಅರ್ಥವನ್ನು ಕಾಣುವುದಾದರೆ ಕಾಂಗ್ರೆಸ್

ಕಾರ್ಯಕಾರೀ ಸಮಿತಿಯು ಕಾರ್ಯಕ್ರಮದಲ್ಲಿ ಸಾಮ್ರಾಜ್ಯವಾದವನ್ನೇ ಕಾಣುವುದರಲ್ಲಿ ಸಂದೇಹವಿಲ್ಲ.

ವೈಯಕ್ತಿಕ ವಿಷಯವನ್ನು ಇಂತಹ ಸಂದರ್ಭದಲ್ಲಿ ಹೇಳುವುದು ಅಯೋಗ್ಯವಾದರೂ ಸಾರ್ವಜನಿಕರ ಹಿತಕ್ಕಾಗಿ ಹೇಳಲೇಬೇಕಾಗಿದೆ. ನಾನು ಕಾಂಗ್ರೆಸ್ ಕಾರ್ಯಕಾರೀ ಸಮಿತಿಯ ಸದಸ್ಯವಾಗಿರುವುದು ನನ್ನ ಕೆಲವು ಮಿತ್ರರ ತಲೆಕೆಡಿಸಿದೆ. ಆದ್ದರಿಂದ ಕಾಂಗ್ರೆಸ್ ಕಾರ್ಯಕಾರೀ ಸಮಿತಿಯಲ್ಲಿ ಸೇರಲು ನನಗೂ ನನ್ನಂತೆ ಕಾಂಗ್ರೆಸ್ ಸಾಮ್ಯವಾದೀ ಪಕ್ಷದ ಉಳಿದ ಕೆಲವು ಮುಂದಾಳುಗಳಿಗೂ ಆಸ್ಪದವಿದ್ದೇ ಇದೆಯೆಂಬುದನ್ನು ಅವರಿಗೆ ನಾನು ಹೇಳಬೇಕಾಗಿದೆ. ನಾನು ೧೯೩೬ ರಲ್ಲಿ ನನ್ನ ಸದಸ್ಯತ್ವಕ್ಕೆ ಸ್ವಯಂಪ್ರೇರಣೆಯಿಂದ ರಾಜೀನಾಮೆಕೊಟ್ಟಿದ್ದಲ್ಲದೆ ಆಮೇಲೆ ಬಂದ ಕರೆಯನ್ನು ನಿರಾಕರಿಸಿದ್ದೇನೆ. ಹರಿಪುರ ಕಾಂಗ್ರೆಸ್ ಅಧ್ಯಕ್ಷರಾದ ಬಾಬು ಸುಭಾಸ್ ಬೋಸರು ಕಾರ್ಯಕಾರೀ ಸಮಿತಿಯ ಸದಸ್ಯರಾಗಲು ಆಚಾರ್ಯ ನರೇಂದ್ರದೇವರನ್ನೂ ಅಚ್ಯುತ ಪಟವರ್ಧನರನ್ನೂ ಕೇಳಿಕೊಂಡರು. ಆದರೆ ಅವರಿಬ್ಬರೂ ಒಪ್ಪಲಿಲ್ಲ. ಕಲಕತ್ತೆಯಲ್ಲಿಯೂ ಮುಂಬಯಿಯಲ್ಲಿಯೂ ಡಾ. ರಾಜೇಂದ್ರ ಪ್ರಸಾದರು ಸದಸ್ಯತ್ವಕ್ಕೆ ನಮ್ಮನ್ನು ಆಮಂತ್ರಿಸಿದರು. ಆದರೆ ನಮ್ಮೆಲ್ಲರ ಪರವಾಗಿ ನರೇಂದ್ರದೇವರು ನಿರಾಕರಿಸಿದರು.

ಕಾಂಗ್ರೆಸ್ ಕಾರ್ಯಕಾರೀ ಸಮಿತಿಯ ಆಮಂತ್ರಣವನ್ನು ನಾವು ನಿರಾಕರಿಸಿದ್ದು ಅದನ್ನು ಅವಮಾನಿಸಲಿಕ್ಕೆ ಅಲ್ಲವೆಂಬುದನ್ನು ಹೇಳಬಯಸುತ್ತೇನೆ. ಕಾಂಗ್ರೆಸ್ ಕಾರ್ಯಕಾರೀ ಸಮಿತಿಯ ಸದಸ್ಯನಾಗುವುದು ಒಂದು ದೊಡ್ಡ ಗೌರವ. ನಮ್ಮ ನಿರಾಕರಣೆಯಿಂದ ಸಂಯುಕ್ತ ಮುಂದಾಳುತನದ ತತ್ವದಲ್ಲಿ ನಮಗೆ ವಿಶ್ವಾಸವಿಲ್ಲವೆಂದೂ ತಿಳಿಯಬಾರದು. ಆದರೆ ನಾವು ಹೀಗೆ ಮಾಡಿದ್ದು ನಮ್ಮ ಧೋರಣೆಯನ್ನು ಮುಂದುವರಿಸುವುದಕ್ಕಾಗಿ ಮಾತ್ರ.

ಇರಲಿ. ಈಗಿನ ವಿಷಯಕ್ಕೆ ಬರೋಣ. ನಮ್ಮ ಇಂದಿನ ಧೋರಣೆಯ ಮೂಲಕ ನಾವು ಗಾಂಧೀವಾದಕ್ಕೆ ಸಂಪೂರ್ಣ ಶರಣಾಗತರಾಗಿದ್ದೇವೆಂದು ನಮ್ಮನ್ನು ಟೀಕಿಸುತಿದ್ದಾರೆ. ಗಾಂಧೀವಾದದೊಡನೆ ಹೋರಾಡುವುದು ನಮ್ಮ ಇಂದಿನ ಗುರಿಯಲ್ಲ. ಆದರೆ ಸಾಮ್ರಾಜ್ಯವಾದದ ವಿರುದ್ಧವಾಗಿ

ರಾಷ್ಟ್ರದ ಹೋರಾಟವನ್ನು ಅಣಿಗೊಳಿಸುವ ಕೆಲಸಕ್ಕೆ ನಾವು ಸೊಂಟಕಟ್ಟಿದ್ದೇವೆ. ಇದು ಬರಿಯ ಸಾಮ್ಯವಾದಿಗಳಿಗೆ ಸೇರಿದ ಕೆಲಸವಲ್ಲ. ರಾಷ್ಟ್ರವಾದಿಯಾದ ಪ್ರತಿ ಒಬ್ಬನೂ—ಅವನು ಗಾಂಧೀವಾದಿ ಇರಲಿ, ಸಾಮ್ಯವಾದಿ ಇರಲಿ—ಇದನ್ನು ಮಾಡಬೇಕು ಇವರ ದೃಷ್ಟಿಯಿಂದ ನಮ್ಮ ಅಪರಾಧವೆಂದರೆ ರಾಷ್ಟ್ರದಲ್ಲಿ ಒಕ್ಕಟ್ಟನ್ನು ಬೆಳಸಿ ರಾಷ್ಟ್ರೀಯ ಹೋರಾಟವನ್ನು ಮುಂದುವರಿಸಲು ಕಾಂಗ್ರೆಸ್ಸಿಗೆ ಮಾತ್ರ ಸಾಧ್ಯವೆಂಬ ಭಾವನೆಯಿಂದ ಅದರೊಂದಿಗೆ ನಾವು ಸಹಕರಿಸುತ್ತಿರುವುದು. ಕಾಂಗ್ರೆಸ್ಸಿನ ಐಕ್ಯದಲ್ಲಿ ಮುಂದಾಳುತನದ ಒಕ್ಕಟ್ಟೂ ಸೇರುವುದೆಂಬುದನ್ನು ಈ ವಿಮರ್ಶಕ ಮಿತ್ರರು ಮರೆಯುತ್ತಾರೆ. ಇಂದಿನಂಥ ವಿಷಮ ಪರಿಸ್ಥಿತಿಯಲ್ಲಿ ದೇಶದ ಮುಂದಾಳುತನವನ್ನೂ ಕಾಂಗ್ರೆಸ್ಸನ್ನೂ ಬೇರೆ ಬೇರೆ ಮಾಡುವುದರಿಂದ ಪ್ರಯೋಜನವಿಲ್ಲವೆಂದು ತಿಳಿದು ಒಂದೇ ಮುಂದಾಳುತನಕ್ಕೆ ಒಪ್ಪಿಕೊಂಡದ್ದು ನಮ್ಮ ಇನ್ನೊಂದು ಅಪರಾಧವಾಗಿದೆ ನಾವು ಬಯಸಿದ್ದು ನಮ್ಮ ಪಕ್ಷದ ಹಿತವನ್ನು ಮಾತ್ರವಲ್ಲ; ಹಲವು ಮತಭೇದವಿದ್ದ ಎಡಪಕ್ಷದ ಹಿತವನ್ನೂ ಅಲ್ಲ; ಆದರ ಎಡಬಲ ಎರಡೂ ಪಕ್ಷಗಳ ಹಿತವನ್ನು. ಇದು ಇನ್ನೂ ದೊಡ್ಡ ತಪ್ಪು. ಎಡಪಕ್ಷದ ಕೆಲವರು ತಾವು ಗುಂಪಿನ ಒಂದು ಅಂಗವೆಂದು ಭಾವಿಸದೆ, ತಾವೇ ಒಂದು ಗುಂಪೆಂದು ತಿಳಿಯುತ್ತಿರುವುದೇ ಈ ಎಲ್ಲ ಅನರ್ಥಕ್ಕೆ ಕಾರಣವಾಗಿದೆ. ತಾವು ಯಾವ ಒಂದು ಗುಂಪಿನ ಅಂಗವೋ ಆ ಗುಂಪಿನ ಹಿತಾಹಿತಗಳಲ್ಲಿ ತಮ್ಮ ಹಿತಾಹಿತವೂ ಅಡಗಿದೆಯೆಂಬುದನ್ನು ಅವರು ಮರೆತಿದ್ದಾರೆ.

ಕಾಂಗ್ರೆಸ್ ಸಾಮ್ಯವಾದೀ ಪಕ್ಷವು ತಲೆ ಎತ್ತಿದ್ದು ಕಾಂಗ್ರೆಸ್ಸಿನ ವಿರುದ್ಧವಾದ ಗುರಿಯಿಂದಲ್ಲ; ಆದರೆ ಕಾಂಗ್ರೆಸ್ಸಿನ ಒಂದು ಅಂಗವಾಗಿ, ಮತ್ತು ಅದನ್ನು ಬಲಗೊಳಿಸಿ, ಅದರ ಧ್ಯೇಯ ಧೋರಣೆಗಳನ್ನು ಬದಲಿಸಿ ಸರಿಯಾದ ಮಾರ್ಗದಲ್ಲಿ ನಡೆಯುವಂತೆ ಮಾಡುವ ಗುರಿಯಿಂದ. ನಮ್ಮ ಪಕ್ಷವು ಐದು ವರುಷಗಳ ತನ್ನ ಅಸ್ತಿತ್ವದಲ್ಲಿ ಕಾಂಗ್ರೆಸ್ಸಿನ ಧ್ಯೇಯ ಧೋರಣೆಗಳ ಮೇಲೆ ಒಳ್ಳೆಯ ಪರಿಣಾಮಮಾಡಿದೆಯೆಂಬುದು ಕಾಂಗ್ರೆಸ್ಸಿನ ಅನೇಕ ನಿರ್ಣಯಗಳನ್ನು ಪರೀಕ್ಷಿಸಿದರೆ ಕಂಡುಬರುವುದು. ಕಾಂಗ್ರೆಸ್ಸು ೧೯೩೪ ರಿಂದ ಈಚೆಗೆ ಸತ್ಯಾಗ್ರಹದ ಆಂದೋಲನವನ್ನು ನಿಲ್ಲಿಸಿ ಘಟನಾತ್ಮಕ

ಸುಧಾರಣೆಗಳಿಗೆ ಅಂಟಿಕೊಂಡಾಗ ಕಾಂಗ್ರೆಸ್ ಎಡ ಪಕ್ಷವು ಬಲಿಷ್ಠವಾಯಿತು. ಇಷ್ಟೇ ಅಲ್ಲ, ಅದರ ಪರಿಣಾಮವು ಮುಂದಾಳುಗಳ ಮೇಲೂ ತಕ್ಕಷ್ಟಾಯಿತು. ಒಕ್ಕಲಿಗರ ಸಂಘಟನೆಯ ಕಾರ್ಯಕ್ರಮವನ್ನು ನಾವು ಕಾಂಗ್ರೆಸ್ಸಿನ ಮುಂದೆ ಇಟ್ಟಾಗ ಕಾಂಗ್ರೆಸ್ಸು ಸ್ವತಃ ಅದನ್ನು ಒಪ್ಪದಿದ್ದರೂ ಎಷ್ಟೋ ಪ್ರಾಂತಿಕ ಕಾಂಗ್ರೆಸ್ ಸಮಿತಿಗಳು ಮತ್ತು ಕಾಂಗ್ರೆಸ್ ಸದಸ್ಯರು ಒಪ್ಪಿಕೊಂಡರು. ನಾವು ಇಷ್ಟರ ಮಟ್ಟಿಗೆ ಪ್ರಯತ್ನಿಸಿದರೂ ಕಾಂಗ್ರೆಸ್ಸಿನ ಕಾರ್ಯಕ್ರಮವು ಮಾತ್ರ ಗಾಂಧೀಜಿಯವರ ೧೯೨೦ ರ ಧೋರಣೆಯಂತೆಯೇ ಇಂದಿಗೂ ನಡೆಯುತ್ತಿದೆ ಒಮ್ಮೊಮ್ಮೆ ಹೊಸ ಮುಂದಾಳುತನ ಇಣಿಕಿಕ್ಕಿದರೂ ರಾಷ್ಟ್ರದ ಕಡಿವಾಣವು ಹಳೆಯ ಮುಂದಾಳುಗಳ ಕೈಯಲ್ಲಿಯೇ ಇದೆ. ಕಳೆದ ಮೂವತ್ತು ವರುಷಗಳಿಂದ ನಮ್ಮ ಚುಕ್ಕಾಣಿ ಇವರ ಕೈಯಲ್ಲಿದೆ. ಈ ಅವಧಿಯಲ್ಲಿ ಅವರು ಜನತೆಯಲ್ಲಿ ನವಜಾಗ್ರತಿ—ನವ ಚೈತನ್ಯ—ನವಜೀವನವನ್ನು ಹುಟ್ಟಿಸಿದ್ದಾರೆ. ಅವರು ನಮ್ಮ ದೇಶದ ಚೇತನಾಕೇಂದ್ರ. ಅಂತೆಯೇ ಜನತೆಯ ಮೇಲೆ ಅವರ ಹಿಡಿತ ಅಷ್ಟೊಂದಿದೆ.

ಇಂತಹ ಪರಿಸ್ಥಿತಿಯಲ್ಲಿ ಮತ್ತು ಜಗತ್ತಿನ ವಿಷಮ ಪರಿಸ್ಥಿತಿ ನಮ್ಮಿಂದ ಕೂಡಲೇ ಕಾರ್ಯವನ್ನು ಅಪೇಕ್ಷಿಸುತ್ತಿರುವಾಗ ನಾವು ಹಿಡಿಯಬೇಕಾದ ದಾರಿಯಾವುದು ? ಇನ್ನು ಐದು ವರುಷ ಮಾತ್ರ ತಡೆದಿದ್ದರೆ ಕಾಂಗ್ರೆಸ್ಸಿನ ಮತ್ತು ದೇಶದ ಪರಿಸ್ಥಿತಿ ಬದಲಾಗಿ ಎರಡರ ಮುಂದಾಳುತನವೂ ಹಳಬರಿಂದ ಹೊಸಬರ ಕೈಗೆ ಬರಬಹುದಾಗಿದ್ದಿತು. ಬಾಬು ಸುಭಾಸ್ ಬೋಸರು ನಮ್ಮ ಮಾತನ್ನು ಮನ್ನಿಸಿದ್ದರೆ, ಕಮ್ಯುನಿಸ್ಟರು ಹಾಗು ಇನ್ನಿತರರು ನಮ್ಮ ಅಭಿಪ್ರಾಯಕ್ಕೇ ಸಮ್ಮತಿಸಿದ್ದರೆ ಎಡಪಕ್ಷವು ದೇಶದಲ್ಲೆಲ್ಲ ಬಲಿಷ್ಠವಾಗುತಿತ್ತು. ಎಂಥ ಪರಿಸ್ಥಿತಿಯಲ್ಲಿಯೂ ರಾಜೀನಾಮೆ ಕೊಡಕೂಡದೆಂದು ನಾವು ಸುಭಾಸ ಬಾಬುಗಳಿಗೆ ಕೇಳಿಕೊಂಡಿದ್ದೆವು. ಅವರು ನಮ್ಮ ಹೇಳಿಕೆಯನ್ನು ಮನ್ನಿಸಿದ್ದರೆ ಕಳೆದ ಕೆಲವು ತಿಂಗಳಿಂದ ನಡೆದ ವಿಷಾದಕರ ಘಟನೆಗಳು ನಡೆಯುತ್ತಿರಲಿಲ್ಲ. ಮಾತ್ರವಲ್ಲದೆ ಕಾರ್ಯಕಾರೀ ಸಮಿತಿಯಲ್ಲಿ ಕೂಡ ನಮ್ಮದೇ ಬಹುಮತವಾಗಬಹುದಾಗಿದ್ದಿತು. ಸುಬಾಸ್ ಬಾಬು ಅಧ್ಯಕ್ಷರಾಗಿಯೂ ಪಂಡಿತ್ ನೆಹರೂ ಕಾರ್ಯದರ್ಶಿಗಳಾಗಿಯೂ ಶರತ್ ಬೋಸ್ ಹಾಗು ಎಡಪಕ್ಷದ ಇನ್ನಿಬ್ಬರು ಕಾರ್ಯಕಾರೀ ಸಮಿತಿಯ

ಸದಸ್ಯರಾಗಿಯೂ ಇರಬಹುದಾಗಿದ್ದಿತು. ಕಾಂಗ್ರೆಸ್ಸಿನ ಹಳೆಯ ಮುಂದಾಳು ಗಳು ಈ ವ್ಯವಸ್ಥೆಗೆ ಒಪ್ಪದಿರುತ್ತಿರಲಿಲ್ಲ.

ಇಂದಿನಂತಹ ವಿಚಿತ್ರ ಪರಿಸ್ಥಿತಿಯಲ್ಲಿ ನಾವು ಏನು ಮಾಡಬೇಕೆಂಬು ದನ್ನು ನೋಡುವಾ. ರಾಷ್ಟ್ರೀಯ ಹೋರಾಟವನ್ನು ಮುಂದುವರಿಸುವುದಕ್ಕೆ, ರಾಷ್ಟ್ರೀಯ ಐಕ್ಯವನ್ನು ಸಾಧಿಸಿಕೊಳ್ಳುವುದಕ್ಕೆ ಕಾಂಗ್ರೆಸ್ಸಿನ ಹೊರತು ಯೋಗ್ಯವಾದ ಸಂಸ್ಥೆ ಬೇರೆಯಾವುದಾದರೂ ಇದೆಯೆ? ರಾಷ್ಟ್ರೀಯ ಐಕ್ಯ ಮತ್ತು ಪ್ರತಿಷ್ಠೆಯನ್ನು ಹದಗೆಡಿಸುವಂಥ ಶಕ್ತಿಗಳ ವಿರುದ್ಧ ಹೋರಾಡಿದ ಸಂದರ್ಭಗಳು ಇತಿಹಾಸದ ಉದ್ದಕ್ಕೂ ನಮಗೆ ಸಿಕ್ಕುತ್ತವೆ. ಒಮ್ಮೊಮ್ಮೆ ಇವು ರಾಷ್ಟ್ರೀಯ ಐಕ್ಯವನ್ನೂ ಪ್ರತಿಷ್ಠೆಯನ್ನೂ ಹದಗೆಡಿಸಿದುದೂ ಉಂಟು. ಇಂದಿಗೆ ಕಾಂಗ್ರೆಸ್ಸನ್ನು ಬಿಟ್ಟರೆ ಸಾಮಾಜಿಕ, ರಾಜಕೀಯ ಕ್ಷೇತ್ರದಲ್ಲಿ ಐಕ್ಯವನ್ನುಂಟುಮಾಡುವ ಪ್ರಬಲವಾದ ಸಂಸ್ಥೆ ಬೇರೊಂದಿಲ್ಲ. ಇಲ್ಲಿ ಬೇರೂರಿದ ಪರಕೀಯ ಸರಕಾರದ ವಿರುದ್ಧ ದೇಶವನ್ನೆಲ್ಲ ವ್ಯಾಪಿಸಿದ, ಪರಿಣಾಮಕಾರಿಯಾದ ಹೋರಾಟದ ಮೂರ್ತಿಮಂತ ಪ್ರತಿನಿಧಿಯೇ ಕಾಂಗ್ರೆಸ್ಸು. (ಕಮ್ಯುನಿಸ್ಟರು ಮಾತ್ರ ಇದರ ಘನತೆಯನ್ನು ಒಪ್ಪಲಿಕ್ಕಿಲ್ಲ.) ತ್ರಿವರ್ಣಧ್ವಜದ ಅಡಿಯಲ್ಲಿ ನಿಂತರೆ ಮಾತ್ರ ಭಾರತವು ಸಾಮ್ರಾಜ್ಯವಾದದ ವಿರುದ್ಧ ಹೋರಾಡಿ ಜಯಶಾಲಿಯಾಗುವುದು ಸಾಧ್ಯ. ಒಕ್ಕಲಿಗರು, ಕೂಲಿಕಾರರು, ವಿದ್ಯಾರ್ಥಿಗಳು, ತರುಣರು ಕಾಂಗ್ರೆಸ್ಸಿನ ಹೊರಗಿರುವ ರೆಂಬ ಹೊಣೆಗೇಡಿ ಕೂಗು ಕೇಳಿಬರುತ್ತಿದೆ. ಕಿಸಾನ್‌ಸಭೆ, ಟ್ರೇಡ್ ಯೂನಿಯನ್ ಕಾಂಗ್ರೆಸ್, ವಿದ್ಯಾರ್ಥಿ ಪರಿಷತ್ತು ಮುಂತಾದುವೆಲ್ಲ ಭಿನ್ನ ಭಿನ್ನವೆಂದು ಹೇಳುವುದರಲ್ಲಿ ಯಾವ ಪುರುಷಾರ್ಥವಿದೆ? ಕೆಲವು ಪ್ರಾಂತಗಳ ಹೊರತು ಉಳಿದೆಡೆಯಲ್ಲಿ ಇವುಗಳ ಸಂಘಟನೆ ಪ್ರಾರಂಭಿಕ ಸ್ಥಿತಿಯಲ್ಲಿದ್ದರೂ ಇವೆಲ್ಲಕ್ಕೂ ಉಜ್ವಲ ಭವಿತವ್ಯವಿದೆಯೆಂಬ ಮಾತನ್ನು ಮರೆಯುವಂತಿಲ್ಲ. ರಾಷ್ಟ್ರೀಯ ಹೋರಾಟದಲ್ಲಿ ಅವುಗಳ ಪಾತ್ರ ನಿಜ ವಾಗಿಯೂ ಮಹತ್ವದ್ದು. ಸಾಮ್ಯವಾದಿಗಳು ಮತ್ತು ಇತರ ಪ್ರಗತಿಪರರು, ಈ ಎಲ್ಲ ಸಂಸ್ಥೆಗಳನ್ನು ಸಂಘಟಿಸಿ ಅವುಗಳ ಮಹತ್ವವನ್ನು ಇನ್ನಷ್ಟು ಹೆಚ್ಚಿಸಬೇಕು. ಆದರೂ ಈ ಎಲ್ಲ ಸಂಘಟನೆಗಳು ಮುಖ್ಯ ಹೋರಾಟಕ್ಕೆ ಪೂರಕವಾಗಬಲ್ಲುವೇ ಹೊರತು ಹೋರಾಟವು ಇವುಗಳಿಂದಲೇ ಯಶಸ್ವಿ

ಯಾಗಲಾರದು. ಕಾಂಗ್ರೆಸ್ಸು ಇವೆಲ್ಲವುಗಳ ಸಹಕಾರದಿಂದ ಹೋರಾಟ ವನ್ನು ಇನ್ನಷ್ಟು ಬಲಶಾಲಿಯಾಗಿ ಮುಂದುವರಿಸಬೇಕು. ಕಿಸಾನ್ ಸಭೆ ಯಾಗಲಿ, ಟ್ರೇಡ್‌ಯೂನಿಯನ್ ಆಗಲಿ, ಇಂದಿನ ತಮ್ಮ ಸಂಘಟನೆ ಯಿಂದ ಸಾಮ್ರಾಜ್ಯವಾದದ ವಿರುದ್ಧ ಹೋರಾಡಿ ಯಶಸ್ವಿಯಾಗುವುದು ಅಸಂಭವ. ಈ ಕೆಲಸ ಕಾಂಗ್ರೆಸ್ಸಿಗೇ ಸೇರಿದ್ದು

ತಿಳಿಗಣ್ಣಿನಿಂದ ನೋಡಿದರೆ ನಮ್ಮನ್ನು ಎದುರಿಸುತ್ತಿರುವ ಸಮಸ್ಯೆ ಇದೇ ಎಂದು ಗೊತ್ತಾಗದಿರದು. ದೇಶದ ಬಿಡುಗಡೆಗೆ ಕಾಂಗ್ರೆಸ್ಸೇ ಗತಿ. ಕಾಂಗ್ರೆಸ್ಸೆಂದರೆ ಈ ಎಲ್ಲ ವಿಭಾಗಗಳನ್ನು ತನ್ನಲ್ಲಿ ಬೆರೆಸಿಕೊಂಡಿರುವ ಏಕಮೇವ ಸಂಸ್ಥೆಯೆಂಬುದನ್ನು ಮರೆಯಲಾಗದು. ದೇಹದಿಂದ ಬೇರೆ ಯಾದ ಅವಯವಕ್ಕೆ ತಕ್ಕ ಬಲವೂ ಇರುವುದಿಲ್ಲ, ದಾರ್ಢ್ಯವೂ ಇರುವುದಿಲ್ಲ. ಅದು ಸಾಯುವುದೇ ಖಂಡಿತ

ನಮ್ಮನ್ನು ಎದುರಿಸುತ್ತಿರುವ ಮುಖ್ಯ ಸಮಸ್ಯೆ ದೇಶದಲ್ಲೆಲ್ಲ ಸಿದ್ಧತೆ ಯನ್ನು ಮಾಡಿ ರಾಷ್ಟ್ರೀಯ ಹೋರಾಟವನ್ನು ಹೇಗೆ ನಡೆಸಬೇಕೆಂಬುದು. ಈ ಮಹತ್ಕಾರ್ಯವನ್ನು ಕಾಂಗ್ರೆಸ್ಸೊಂದೇ ನೆರವೇರಿಸಬಲ್ಲುದೆಂದು ಮೊದಲೇ ಸ್ಪಷ್ಟಪಡಿಸಿದ್ದೇನೆ ಇರಲಿ. ಇತರ ಕೆಲವು ಸಂಗತಿಗಳನ್ನು ಪರಿಶೀಲಿ ಸೋಣ. ಕಾಂಗ್ರೆಸ್ಸು ಗಾಂಧಿಜಿಯ ಯಶಸ್ವೀ ಮುಂದಾಳುತನದಲ್ಲಿ ನಡೆ ದಿದೆ. ಆದ್ದರಿಂದ ಕಾಂಗ್ರೆಸ್ಸು ಹೋರಾಟ ಹೂಡಬೇಕಾದರೆ ಗಾಂಧೀಜಿ ಯವರ ಕಾರ್ಯಕ್ರಮದಂತೆಯೇ ಸಾಗಬೇಕಾದುದು ಅನಿವಾರ್ಯ. ಆ ಕಾರ್ಯಕ್ರಮಕ್ಕೆ ನಾವು ಇನ್ನಷ್ಟು ಕಸುವು ತರಬಹುದೇ ಹೊರತು ಕಾರ್ಯ ಕ್ರಮವನ್ನೇ ಬದಲಿಸುವುದು ಸಾಧ್ಯವಿಲ್ಲ. ಯಾರೊಬ್ಬರು ಒಪ್ಪಿದರೂ ಒಪ್ಪದಿದ್ದರೂ ಹೋರಾಟದ ತಂತ್ರವು ಗಾಂಧೀಜಿಯ ಹಳೆಯ ತಂತ್ರವೇ ಎಂಬುದು ನಿಸ್ಸಂದೇಹ.

ಈ ಎಲ್ಲ ಮಾತುಗಳನ್ನು ಒಪ್ಪಿಕೊಳ್ಳುವುದೆಂದರೆ ಗಾಂಧೀವಾದಕ್ಕೆ ಶರಣು ಹೋದಂತಾಗಲ್ಲಿಲ್ಲ. ನಾವು ಸಾಮ್ಯವಾದದ ಪ್ರಚಾರವನ್ನೇನೂ ನಿಲ್ಲಿಸಿಲ್ಲ. ಒಕ್ಕಲಿಗರ, ಕೂಲಿಕಾರರ ಸಂಸ್ಥೆಗಳನ್ನೂ ಆಂದೋಲನವನ್ನೂ ಬಲಪಡಿಸುವುದಕ್ಕೆ ಸಾಧ್ಯವಾದಷ್ಟು ಯತ್ನಿಸುತ್ತಿದ್ದೇವೆ. ಗಯಾದ ಬಟ್ಟೆ ಗಿರಣಿಯ ಕೂಲಿಕಾರರು ಯುದ್ಧಕಾಲದ ಬೋನಸ್ ಬೇಡಿಕೆಯನ್ನು

ಮುಂದೆಮಾಡಿದರು. ಅದು ಸಿಗದ್ದರಿಂದ ಕೂಲಿಕಾರರು ನಮ್ಮ ಪಕ್ಷದ ನೇತೃತ್ವದಲ್ಲಿಯೇ ಸಂಪು ಹೂಡಿದರು. ಅದರಲ್ಲಿ ಮೊದಲು ಗೆದ್ದವರು ಡಾಲ್ಮಿಯಾ ನಗರದ ಕೆಲಸಗಾರರು. ಅವರು ದುಡಿದದ್ದೂ ನಮ್ಮ ಮುಂದಾಳುತನದಲ್ಲಿಯೇ. ಬಿಹಾರ್, ಸಂಯುಕ್ತ ಪ್ರಾಂತ, ಮುಂಬೈ, ಬಂಗಾಲ್ ಮತ್ತು ಉಳಿದ ಕಡೆಯಲ್ಲಿದ್ದ ನಮ್ಮ ಪಕ್ಷದ ಸದಸ್ಯರು ಕೂಲಿ ಕಾರರ ಹೋರಾಟದಲ್ಲಿ ಪ್ರಮುಖವಾದ ಪಾತ್ರವನ್ನು ವಹಿಸಿದ್ದಾರೆ. ಒಕ್ಕಲಿಗರ ಹೋರಾಟದಲ್ಲಿಯೂ ಅದೇ ಉತ್ಸಾಹ. ನಮ್ಮ ಕಾರ್ಯ ಕರ್ತರು ಕಾಂಗ್ರೆಸ್ ಸಮಿತಿಗಳ ನಿರ್ಮಾಣ, ಸೇವಾದಲ ಸಂಘಟನೆ, ರಾಷ್ಟ್ರೀಯ ಪ್ರಚಾರ ಮುಂತಾದುವುಗಳ ಮೂಲಕ ರಾಷ್ಟ್ರೀಯ ಹೋರಾಟ ವನ್ನು ಬಲಪಡಿಸುತ್ತ ಸಾಗಿದಾಗ ಕೂಲಿಕಾರರ ಕಡೆಗೆ ಸಾಕಷ್ಟು ಗಮನ ಕೊಡಲು ಸಾಧ್ಯವಾಗಲಿಲ್ಲ.

ದೇಶದ ಇಂದಿನ ಪರಿಸ್ಥಿತಿಯನ್ನು ನೋಡಿದರೆ ರಾಷ್ಟ್ರೀಯ ಹೋರಾ ಟವು ನಮ್ಮ ಯೋಜನೆಯಂತೆ ಸಾಗುವುದು ಸಾಧ್ಯವಿಲ್ಲ. ನಮ್ಮ ಕಾರ್ಯ ವನ್ನು ನಾವು ಮಾಡುತ್ತಲಿದ್ದೇವೆ. ನಮ್ಮ ವಿಚಾರಸರಣಿಯಂತೆ ನಾವು ಪ್ರಚಾರವನ್ನು ಸಾಗಿಸುತ್ತಲಿದ್ದೇವೆ. ಆದರೆ ಅದೇ ಸಮಯಕ್ಕೆ, ಹೋರಾಟ ಆರಂಭವಾಗಬೇಕೆಂದೂ ಹೇಳುತ್ತಲಿದ್ದೇವೆ. ಬೇರೆ ಮುಂದಾಳುತನದಲ್ಲಿ ಹೋರಾಟ ಆರಂಭವಾಗುವುದು ಸಾಧ್ಯವಿಲ್ಲದಾಗ ಇದ್ದ ಮುಂದಾಳುತನ ವನ್ನು ದುರ್ಬಲಗೊಳಿಸುವುದು ಹುಚ್ಚುತನವಲ್ಲವೆ? ಹೀಗೆ ಮಾಡುವುದ ರಿಂದ ನಮ್ಮ ಹೋರಾಟವು ಮಣ್ಣು ಪಾಲಾದೀತು.

ಈ ಹಲವು ವರುಷಗಳಲ್ಲಿ ಸಂಯುಕ್ತ ಮುಂದಾಳುತನದ, ಸಂಯುಕ್ತ ಹೋರಾಟದ ಮಾತುಗಳನ್ನು ನಾವು ಕೇಳುತ್ತ ಬಂದಿದ್ದೇವೆ. ಅದರ ಪುರಸ್ಕರ್ತರು, ಅದನ್ನು ಕಾರ್ಯರೂಪಕ್ಕೆ ತರುವ ಸಂದರ್ಭ ಬಂದಾಗ ಅದರಿಂದ ದೂರ ಉಳಿಯಲು ಯತ್ನಿಸುತ್ತಿದ್ದಾರೆ. ಸಂಯುಕ್ತ ರಾಷ್ಟ್ರೀಯ ಹೋರಾಟದಲ್ಲಿ ಸಂಯುಕ್ತ ಮುಂದಾಳುತನ ಅತ್ಯವಶ್ಯವಾಗಿದೆ. ಕಾಂಗ್ರೆಸ್ಸು ಘಟನಾತ್ಮಕ ಚಟುವಟಿಕೆಗಳಲ್ಲಿ ತೊಡಗಿ ಹೋರಾಟವನ್ನು ಮರೆತಾಗ ನಮ್ಮ ಕಮ್ಯುನಿಸ್ಟ್ ಮಿತ್ರರು ಮೇಲಿಂದ ಮೇಲೆ ಸಂಯುಕ್ತ ಹೋರಾಟದ ಮಾತನ್ನು ಎತ್ತುತ್ತಿದ್ದರು. ಕಾಂಗ್ರೆಸ್ಸು ಅಧಿಕಾರವನ್ನು ಬೀಸಾಡಿ ಹೋರಾ

ಟದ ಸಿದ್ಧತೆಯಲ್ಲಿದ್ದಾಗ ಕಮ್ಯುನಿಸ್ಟ್ ಪಂಡಿತರು ತಮ್ಮ ತತ್ವಗಳನ್ನು ಗಾಳಿಗೆ ತೂರಿ ಇಂದಿನ ಮುಂದಾಳುಗಳ ಟೀಕೆಯಲ್ಲಿಯೇ ತಮ್ಮ ಪೌರುಷವನ್ನು ವೆಚ್ಚಮಾಡುತ್ತಿದ್ದಾರೆ. ಮತ್ತು ಇದರ ಮೂಲಕ ನಮ್ಮ ಹೋರಾಟವು ಕುಸಿದು ಬೀಳುವಂತೆ ಮಾಡುವುದರಲ್ಲಿ ತೊಡಗಿದ್ದಾರೆ.

ನಾವು ಕೈಕೊಂಡ ಕೆಲಸದಲ್ಲಿರುವ ಕುಂದುಕೊರತೆಗಳನ್ನು ಅರಿತು ಕೊಳ್ಳುವುದು ಅತ್ಯವಶ್ಯ. ಅವುಗಳನ್ನು ಅಲಕ್ಷಿಸಿದರೆ ಅವು ಇನ್ನೂ ಬೇರು ಬಿಡುವವು. ಇಂದಿನ ಮುಂದಾಳುತನದ ವಿರುದ್ಧ ನಡೆಸಿದ ಹೋರಾಟ ನಿಜವಾಗಿಯೂ ಮೂರ್ಖತನದ್ದು—ಅಪಾಯಕಾರಕವಾದದ್ದು. ಒಂದು ಗುಂಪಿನ, ಇಲ್ಲವೆ ಪಕ್ಷದ ಹೋರಾಟದ ಪ್ರತಿಯಾಗಿ ಗಾಂಧೀಜಿಯವರು ರಾಷ್ಟ್ರೀಯ ಹೋರಾಟವನ್ನೇ ಹೂಡಿದಾಗ ಅವರನ್ನು ನಾವು ವಿರೋಧಿ ಸುವುದು ಆತ್ಮಘಾತಕವೇ ಸರಿ. ಅವರು ಆರಂಭಿಸುವ ಹೋರಾಟಕ್ಕೆ ಸಕ್ರಿಯ ಸಹಾನುಭೂತಿಯನ್ನಿತ್ತು ವಿಧೇಯರಾಗಿ ವರ್ತಿಸುವುದು ಅತ್ಯವಶ್ಯ. ಆ ಮೇಲೆ, ಹೋರಾಟವು ಮೊದಲಾಗದಿದ್ದರೆ ಅವರಿಂದ ದೂರ ಸರಿದು ನಮ್ಮಲ್ಲಿ ಯೋಗ್ಯತೆ ಇದ್ದರೆ ಆ ಹೋರಾಟದ ಹೊಣೆಗಾರಿಕೆಯನ್ನು ನಾವೇ ತೆಗೆದುಕೊಳ್ಳೋಣ.

ಇಂಥ ಪರಿಸ್ಥಿತಿಯಲ್ಲಿ ಕಾಂಗ್ರೆಸ್ ಸಾಮ್ಯವಾದೀ ಪಕ್ಷವು ಅನಾವಶ್ಯಕ ವೆಂದು ಎಷ್ಟೋ ಜನರು ತಿಳಿದಿದ್ದಾರೆ. ಇಡಿಯ ಹೋರಾಟಕ್ಕೆ ಶ್ರೇಯಸ್ಕರ ವಾದುದನ್ನು ಸಾಧಿಸುತ್ತ ಹೋಗಬೇಕೇ ಹೊರತು ಬರಿಯ ಬೊಬ್ಬೆ ಕುಟ್ಟು ವುದರಲ್ಲಿ ಪ್ರಯೋಜನವಿಲ್ಲವೆಂದು ನಾನು ನನ್ನ ಗೆಳೆಯರಲ್ಲಿ ಅರಿಕೆಮಾಡಿ ಕೊಳ್ಳುತ್ತೇನೆ. ನಮ್ಮ ಧ್ಯೇಯ ಧೋರಣೆಯು ಸರಿಯಾಗಿದ್ದರೆ ಮಾತ್ರ ನಮಗೆ ಬಲ ಬರುವುದು. ಮಾರ್ಕ್ಸ್‌ವಾದವನ್ನು ಕುರಿತು ಸುಮ್ಮನೆ ಮಾತನಾಡುವ ಉಳಿದ ಪಂಗಡಗಳಿಗಿಂತ, ನಮ್ಮ ಪಕ್ಷವು ಅದನ್ನು ಚೆನ್ನಾಗಿ ತಿಳಿದು ಭಾರತಕ್ಕೆ ಅದನ್ನು ಹೇಗೆ ಅನ್ವಯಿಸಬೇಕೆಂಬುದನ್ನು ೧೯೩೪ರಂತೆ ಇನ್ನೊಮ್ಮೆ ತೋರಿಸಿಕೊಡಬೇಕು. ಕಳೆದ ಐದು ವರುಷಗಳಲ್ಲಿ, ತೊಡ ಕಿನ ಸಂದರ್ಭಗಳಲ್ಲಿ ಕಾಂಗ್ರೆಸ್ ಸಾಮವಾದೀ ಪಕ್ಷವು ಇತರರ ತಪ್ಪನ್ನು ತಿದ್ದಿ ಸರಿಯಾದ ದಾರಿ ತೋರಿಸಿದೆ. ೧೯೩೪ ರಲ್ಲಿ ಕಮ್ಯುನಿಸ್ಟ್ ಮಹಾ ಶಯರುಗಳು ಕಾಂಗ್ರೆಸ್ಸಿನಿಂದ ದೂರ ಸರಿದು ಅದನ್ನು ನಾಶಗೊಳಿಸಲ್ಲು

ಯತ್ನಿಸಿದರು ನಾವು ಕಾಂಗ್ರೆಸ್ಸಿನಲ್ಲಿಯೇ ಉಳಿದು ಅದನ್ನು ಸಂಘಟಿಸಿ ಬಲಿಷ್ಠಗೊಳಿಸಿದೆವು. ೧೯೩೬ ರಲ್ಲಿ ಅವರು ಮರಳಿ ಕಾಂಗ್ರೆಸ್ ಸೇರಿದರು- ಕಟ್ಟಲಿಕ್ಕೋ ಕೆಡುಹಲಿಕ್ಕೋ ಎಂಬುದನ್ನು ಇತಿಹಾಸವೇ ಹೇಳುತ್ತಿದೆ. ೧೯೩೭ ರಲ್ಲಿ, ಕಾಂಗ್ರೆಸ್ಸು ಅಧಿಕಾರ ಸ್ವೀಕರಿಸಕೂಡದೆಂದು ಕಾಂಗ್ರೆಸ್ ಸಾಮ್ಯವಾದೀ ಪಕ್ಷವು ಅಭಿಪ್ರಾಯಪಟ್ಟಿತು. ಅಧಿಕಾರವನ್ನು ಸ್ವೀಕರಿಸಿ ಕ್ರಾಂತಿಕಾರೀ ಕಾರ್ಯಕ್ರಮಗಳನ್ನು ಇಟ್ಟುಕೊಳ್ಳಬೇಕೆಂದು ಕಮ್ಯುನಿಸ್ಟರು ಸೂಚಿಸಿದರು. ಕೆಲಕಾಲದಲ್ಲಿ, ಕಾಂಗ್ರೆಸ್ ಎಡಪಕ್ಷದಲ್ಲಿ ಅಧಿಕಾರ ಸ್ವೀಕರಿಸಬಾರದೆಂಬ ಅಭಿಪ್ರಾಯ ಬಲಿಯುತ್ತ ಸಾಗಿದಂತೆ, ತಾವು ದೂರ ವಿರಬೇಕಾದೀತೆಂಬ ಹೆದರಿಕೆಯಿಂದ ಕಮ್ಯುನಿಸ್ಟ ಮಿತ್ರರು ಎಡಪಕ್ಷ ದೊಡನೆ ದನಿಗೂಡಿಸಿದರು. ಚುನಾವಣೆಯಲ್ಲಿ ಸಾಮ್ಯವಾದೀ ಪಕ್ಷವು ಕಾಂಗ್ರೆಸ್ಸಿಗೆ ಹೃತ್ಪೂರ್ವಕ ಬೆಂಬಲ ಕೊಟ್ಟಿತು. ಕಮ್ಯುನಿಸ್ಟರಾದರೋ ತಮ್ಮ ಹೆಚ್ಚುಗಾರಿಕೆಯನ್ನು ಪ್ರದರ್ಶಿಸುವುದಕ್ಕಾಗಿಯೂ ಛಲವನ್ನು ಸಾಧಿಸು ವುದಕ್ಕಾಗಿಯೂ ಒಂದೇ ಒಂದು ಮತದಾರ ಸಂಘದಲ್ಲಿ ಕಾಂಗ್ರೆಸ್ಸನ್ನು ವಿರೋಧಿಸಿತು. ಕಮ್ಯುನಿಸ್ಟರು ತ್ರಿಪುರಿಯಲ್ಲಿ ಐಕ್ಯ ಮತ್ತು ಸಂಯುಕ್ತ ಮುಂದಾಳುತನದ ಬಗೆಗೆ ಕಿರಿಚಿಕೊಂಡರೂ ಕೊನೆಗೆ ಮಾತ್ರ ತದ್ವಿರುದ್ಧ ವಾಗಿ ಆಚರಿಸಿದರು. ಕಲಕತ್ತೆಯಲ್ಲಿ ಕಾಂಗ್ರೆಸ್ ಸಾಮ್ಯವಾದೀ ಪಕ್ಷವು ಸುಭಾಸರು ತಮ್ಮ ರಾಜೀನಾಮೆಯನ್ನು ಹಿಂದೆಗೆದುಕೊಳ್ಳಬೇಕೆಂದು ಧೈರ್ಯದಿಂದ ಸೂಚಿಸಿತು. ಕಮ್ಯುನಿಸ್ಟರು ಮಾತ್ರ ಎದೆಗುಂದಿ ಬಾಯಿ ಮುಚ್ಚಿಕೊಂಡಿದ್ದರು. ಇತ್ತೀಚೆಗಿನ ಘಟನೆಗಳ ಬಗೆಗೆ ಹೇಳುವುದಾದರೆ ಸ್ವಾತಂತ್ರ್ಯ ಪ್ರತಿಜ್ಞೆಗೆ ಸೇರಿಸಿದ ಉಪಸೂಚನೆಯನ್ನು ನಾವು ವಿರೋಧಿ ಸಿದೆವು. ಕಮ್ಯುನಿಸ್ಟರು ಮಾತ್ರ ಸುಮ್ಮನೆ ಒಪ್ಪಿಕೊಂಡುಬಿಟ್ಟರು. ಅವರು ತಮ್ಮ ಮಾತಿನಂತೆ ಪ್ರಾಮಾಣಿಕತನದಿಂದ ನಡೆಯುತ್ತಾರೆಂದು ಆಶಿಸೋಣವೆ? ಇಲ್ಲದಿದ್ದರೆ ಯಾವುದೊಂದು ಅಪ್ರಾಮಾಣಿಕ ಘಟನೆ ಸಂಭವಿಸಿ ಗಾಂಧೀಜಿ ಸತ್ಯಾಗ್ರಹ ಆರಂಭಿಸುವುದನ್ನೇ ನಿಲ್ಲಿಸಿಬಿಡಬಹುದು! ಅಜಾದರು ಕಾಂಗ್ರೆಸ್ ಅಧ್ಯಕ್ಷಸ್ಥಾನದ ಚುನಾವಣೆಗೆ ನಿಂತಾಗ ಸಾಮ್ಯ ವಾದೀ ಪಕ್ಷವು ಅವರಿಗೆ ಬೆಂಬಲಕೊಟ್ಟಿತು. ಕಮ್ಯುನಿಸ್ಟರು ತಟಸ್ಥ ಉಳಿದರು. ಕಾಮ್ರೇಡ್ ಪಿ. ಸಿ. ಜೋಶಿಯವರು ಒಂದು ಹೇಳಿಕೆ

ಹೊರಡಿಸಿ 'ಆಜಾದರಿಗೆ ಮತಕೊಟ್ಟರೆ ಕಾರ್ಯಕಾರೀ ಸಮಿತಿಯ ಧೋರಣೆಗೆ ಬೆಂಬಲ ಕೊಟ್ಟಂತೆ' ಎಂದು ಸಾರಿದರು. ಇದು ಎಂತಹ ವಿಚಿತ್ರವಾದ ಮಾತು! ಅಮೇರಿಕೆಯ ಕಮ್ಯುನಿಸ್ಟರು ರೂಸ್‌ವೆಲ್ಟರಿಗೆ ಮತಕೊಟ್ಟದ್ದರಿಂದ ರೂಸ್‌ವೆಲ್ಟರ ಇಡಿಯ ಧ್ಯೇಯ ಧೋರಣೆಗೆ ಬೆಂಬಲ ಕೊಟ್ಟಂತಾಯಿತೆ? ಅಧ್ಯಕ್ಷ ಚುನಾವಣೆಯಂತಹ ವಿಷಯದಲ್ಲಿ ದೇಶದ ಪ್ರಗತಿಯನ್ನು ಹೆಚ್ಚಾಗಿ ಸಾಧಿಸುವ ಉಮೇದುವಾರನಿಗೇ ಬೆಂಬಲಕೊಡುವುದು ಸರ್ವಸಾಮಾನ್ಯವಾದ ಮಾತು. ತಮ್ಮ ಧೋರಣೆಯನ್ನೇ ಅನುಸರಿಸುವ ಅಧ್ಯಕ್ಷನು ತಮಗೆ ಬೇಕಾಗಿದ್ದರೆ ತಮ್ಮ ಗುಂಪಿನ ಒಬ್ಬನನ್ನು ಚುನಾವಣೆಗೆ ನಿಲ್ಲಿಸುವ ಒಂದೇ ಒಂದು ಸರಳವಾದ ದಾರಿಯಿದೆ. ಕಾರ್ಯಕಾರೀ ಸಮಿತಿಗಿಂತ ಭಿನ್ನವಾದ ಅಭಿಪ್ರಾಯವನ್ನು ವ್ಯಕ್ತಗೊಳಿಸಲು ಹಲವು ದಾರಿಗಳಿವೆ. ಕಮ್ಯುನಿಸ್ಟರು ಮತ್ತು ಸಾಮ್ಯವಾದಿಗಳು ಮೊದಲಿನಿಂದಲೂ ಕಾರ್ಯಕಾರೀ ಸಮಿತಿಗಿಂತ ಬೇರೆ ಅಭಿಪ್ರಾಯವನ್ನು ವ್ಯಕ್ತಗೊಳಿಸುತ್ತ ಬಂದಿಲ್ಲವೆ? ಮೌಲಾನಾ ಆಜಾದರಿಗೆ ಮತಕೊಟ್ಟರೆ ಕಾರ್ಯಕಾರೀ ಸಮಿತಿಗಿಂತ ಭಿನ್ನವಾದ ಅಭಿಪ್ರಾಯವನ್ನು ತಳೆಯಬಾರದೆಂಬ ನಿರ್ಬಂಧವೇನೂ ಕಾಮ್ರೇಡ್ ಜೋಶಿಯವರಿಗೆ ಬರಲಾರದು. ಆದರೆ ಆಜಾದರು ಸಾಮ್ರಾಜ್ಯವಾದದ ಪ್ರತಿನಿಧಿಯೆಂದು ಹೇಳಲು ಮಾತ್ರ ಅವರಿಗೆ ನಿರ್ಬಂಧವಿದ್ದೇ ಇದೆ! ಇನ್ನೊಂದು ಮಾತು. ನಮ್ಮ ಪಕ್ಷವು ಸಂಧಾನವಿರೋಧಿ ಪಕ್ಷದ ಹತ್ತಿರ ಕೂಡ ಸುಳಿಯಲಿಲ್ಲ. ಕಮ್ಯುನಿಸ್ಟರಾದರೋ ತಟಸ್ಥರಾಗಿದ್ದರು. ಅವರ ಈ ತಟಸ್ಥ ವೃತ್ತಿ ಅವರ ರಾಜಕೀಯ ಕ್ಲೈಬ್ಯದ ಉದಾಹರಣೆ.

ಇವರ ಬಗೆಗೆ ಇಷ್ಟೊಂದು ಹೇಳಬೇಕಾದೀತೆಂದು ನಾನು ಯೋಚಿಸಿರಲಿಲ್ಲ. ಧ್ಯೇಯ ಧೋರಣೆಗಳ ವಿಷಯದಲ್ಲಿ ಹೇಳಬೇಕಾದುದು ಇನ್ನೂ ಹೇರಳವಾಗಿದೆ.

ಈಗ ಮೊದಲಿನ ವಿಷಯಕ್ಕೇ ಹಿಂದಿರುಗೋಣ. ನಮ್ಮ ಪಕ್ಷವು ಅನವಶ್ಯಕವಾಗಬಾರದು; ಮಾತ್ರವಲ್ಲ, ರಾಷ್ಟ್ರದ ಹೋರಾಟದಲ್ಲಿಯೂ ಆ ಹೋರಾಟದ ಸಿದ್ಧತೆಯಲ್ಲಿಯೂ ಪ್ರಮುಖ ಪಾತ್ರವಹಿಸಬೇಕು. ಇಲ್ಲಿಯ ವರೆಗಿನಂತೆ ಇನ್ನು ಮುಂದೆಯೂ ಅದು ಕಾಂಗ್ರೆಸ್ಸಿನ ಸಕ್ರಿಯ ಅಂಗ.

ವಾಗಿರಬೇಕು. ಸಂಘಟನೆಯಲ್ಲಿ ಮುಂದಾಳಾಗಬೇಕು. ಹೋರಾಟದ ಕಾವನ್ನು ಜಾಗ್ರತವಾಗಿಡಬೇಕು. ಎಲ್ಲಕ್ಕೂ ಮಹತ್ವದ್ದಾದ ಸ್ವಾತಂತ್ರ್ಯ ಸಂಗ್ರಾಮವನ್ನು ನಡೆಸುವಂತೆ ಜನತೆಯನ್ನು ಅಣಿಗೊಳಿಸಲು ಅದು ಸೊಂಟ ಕಟ್ಟಬೇಕು. ಪ್ರಚಾರ ಮತ್ತು ವಿಮರ್ಶೆಯ ಮೂಲಕ ತನ್ನ ಪ್ರಭಾವ ವನ್ನು ಬೀರಿ ಕಾಂಗ್ರೆಸ್ ಧೋರಣೆಯನ್ನು ಬದಲಿಸಬೇಕು; ತಾನು ಹೇಳುತ್ತ ಬಂದ ಮಾತನ್ನು ಆಚರಣೆಗೆ ತರಬೇಕಾದ ಕಾಲ ಕಾಂಗ್ರೆಸ್ ಸಾಮ್ಯವಾದೀ ಪಕ್ಷಕ್ಕೆ ಈಗ ಬಂದಿದೆ.

೪

# ಕಾಂಗ್ರೆಸ್ಸು ಎತ್ತ ಸಾಗಿದೆ ? ಸ್ವರಾಜ್ಯದ ಒಂದು ಚಿತ್ರ

(ಜಯಪ್ರಕಾಶರ ವ್ಯಕ್ತಿತ್ವವನ್ನು ಬಣ್ಣಿಸುತ್ತ ಆಚಾರ್ಯ ನರೇಂದ್ರದೇವರು ಒಂದು ಟಿಪ್ಪಣಿಯಲ್ಲಿ ಹೀಗೆ ಬರೆದಿದ್ದಾರೆ:—

'ಭಾರತವು ಸಾವಧಾನವಾಗಿಯೂ ನಿಶ್ಚಿತವಾಗಿಯೂ ಒಂದು ಹೊಸ ಸಾಮಾಜಿಕ ವ್ಯವಸ್ಥೆಯನ್ನು ಮುಟ್ಟುತ್ತಲಿದೆ. ಕಾಂಗ್ರೆಸ್ಸಿನ ಕಾಲಕಾಲಕ್ಕೆ ಆದ ತೀರ್ಮಾನಗಳಲ್ಲಿ ಬರಲಿರುವ ಭಾರತದ ಒಂದು ಚಿತ್ರವು ಮೂಡಿದೆ. ಈ ಎಲ್ಲ ನಿರ್ಣಯಗಳಲ್ಲಿ ಕರಾಚಿ ಕಾಂಗ್ರೆಸ್ಸಿನಲ್ಲಿ ತೀರ್ಮಾನವಾದ ಮೂಲಭೂತ ಹಕ್ಕುಗಳಿಗ ಸಂಬಂಧಿಸಿದ ಗೊತ್ತುವಳಿ ಅತ್ಯಂತ ಮಹತ್ವದ್ದು. ಕೆಲವು ಕಾಲದಿಂದೀಚೆಗೆ ಭಾವೀ ಭಾರತದ ಸ್ಪಷ್ಟವಾದ ಚಿತ್ರದ ಅವಶ್ಯಕತೆ ಕಂಡು ಬರುತ್ತಲಿತ್ತು. ಜಯಪ್ರಕಾಶ ನಾರಾಯಣರೇ ಈ ಸೂಚನೆಯನ್ನು ಮಂಡಿಸಿದ್ದರು. ಅದರ ಪರಿಣಾಮವಾಗಿ ಈ ಚಿಕ್ಕ ಪುಸ್ತಕ ಪ್ರಕಟವಾಯಿತು. ಇದಕ್ಕೆ ಗಾಂಧೀಜಿಯ ಆಶೀರ್ವಾದವೂ ದೊರೆತಿದೆ. ಇಲ್ಲಿ ಹೇಳಲಾದ ಮಾತಿಗೂ ಕಾಂಗ್ರೆಸ್ಸಿಗೂ ಯಾವ ನಿಕಟ ಸಂಬಂಧವೂ ಇಲ್ಲವೆನ್ನುವದು ನಿಜ. ಆದರೆ ಈ ಘೋಷಣೆ ರಾಷ್ಟ್ರದ ಹಿತದ ದೃಷ್ಟಿಯಿಂದಲೂ ಅದರಲ್ಲಿರುವ ಅಮೌಲ್ಯ ವಿಚಾರಗಳ ಮೂಲಕವಾಗಿಯೂ ಬಹಳ ಮಹತ್ವದ್ದು.'—ಸಂಪಾದಕ)

ನಾವು ಎಲ್ಲಿಗೆ ಹೊರಟಿದ್ದೇವೆ ?–ನಮ್ಮ ಗುರಿ ಯಾವುದು ?–ಮುಂತಾದ ಪ್ರಶ್ನೆಗಳು ಬರಿಯ ಮಾತುಗಾರಿಕೆಯವಲ್ಲ, ಇಲ್ಲವೇ ಅವ್ಯವಹಾರ್ಯದವಲ್ಲ.

ಕೋಟಿಗಟ್ಟಲೆ ದೀನ ದಲಿತರ ದೇಶವಾದ ಭಾರತದ ಭವಿಷ್ಯವು ಅವುಗಳಿಗೆ ನಾವು ಕೊಡುವ ಉತ್ತರವನ್ನೇ ಅವಲಂಬಿಸಿದೆ. ಕಾಂಗ್ರೆಸ್ಸು ಇಂಥವರ ಪ್ರತಿನಿಧಿಯೆಂದು ನಾವು ಸಾರುತ್ತಿದ್ದೇವಲ್ಲವೆ ?

ಘಟನಾ ಸಮಿತಿಯೆಂಬುದು ನಾವು ಎಂದೋ ಕಾಣಬಹುದಾದ ಕನಸಲ್ಲ. ಸ್ವಾತಂತ್ರ್ಯದ ಮತ್ತು ಪ್ರಗತಿಯ ದಾರಿಯಲ್ಲಿ ಇದು ನಮ್ಮ ಮುಂದಿನ ರಾಜಕೀಯ ಹೆಜ್ಜೆ. ಘಟನಾ ಸಮಿತಿಯ ಬೇಡಿಕೆಗೆ ಶೀಘ್ರದ ಮಹತ್ವವಿದೆ. ಇದು ಈಡೇರುವ ಕಾಲಕ್ಕೆ ನಾವು ಬದುಕುವೆವೋ ಇಲ್ಲವೋ ಎಂಬ ಸಂಶಯ ಈಗ ನಮಗೆ ಬೇಡ. ಈ ಬೇಡಿಕೆ ಇಂದೋ ನಾಳೆಯೋ ಫಲಿಸುವುದಿದ್ದು ಇದರ ಕೊನೆಯ ತೀರ್ಮಾನವಾಗುವಾಗ ನಮ್ಮೆಲ್ಲರ ಅಭಿಪ್ರಾಯವೂ ಪ್ರತಿಬಿಂಬಿತವಾಗಬೇಕೆಂದು ನಾವು ಬಯಸದಿರೆವು.

ಹಾಗಿದ್ದರೆ ಈ ಘಟನಾ ಸಮಿತಿ ಏನು ಮಾಡಬಹುದು ? ಇದರಿಂದ ನಾವು ಈ ಮೊದಲು ಕೇಳಿದ ಪ್ರಶ್ನೆಗಳಿಗೆ ಉತ್ತರ ದೊರೆಯಬಹುದು. ಘಟನಾ ಸಮಿತಿಯು, ಸ್ವತಂತ್ರ ಭಾರತದ ಸಮಾಜವು ದೃಢವಾಗಿ ನಿಲ್ಲುವಂತೆ ಭದ್ರವಾದ ನೆಲೆಗಟ್ಟನ್ನು ಹಾಕಿಕೊಡುವುದು; ಮತ್ತು ಮುಂದಿನ ಪೀಳಿಗೆಗಳ ಸ್ವಾತಂತ್ರ್ಯ, ಅಭಿವೃದ್ಧಿ, ಹಾಗು ಸುಖ ಸಂಪತ್ತುಗಳ ಅಡಿಗಲ್ಲನ್ನಿಡುವುದು.

ಘಟನಾ ಸಮಿತಿಯಲ್ಲಿ ಇರುವವರು ಯಾರು ?

ಘಟನಾ ಸಮಿತಿಯ ರಂಗಭೂಮಿಯ ಮೇಲೆ ಕಾಣಬರುವವರು ಯಾರು ? ಅಲ್ಲಿ, ನಮ್ಮ ದೇಶದ ಬಹುಸಂಖ್ಯಾಕರ ಹೃದಯದಲ್ಲಿ ಮನೆ ಮಾಡಿಕೊಂಡಿರುವ ಕಾಂಗ್ರೆಸ್ ಇರುವದಂತೂ ಸ್ವಾಭಾವಿಕ. ಘಟನಾ ಸಮಿತಿಯ ಕಾರ್ಯ-ಕಲಾಪಗಳಲ್ಲಿ ಕಾಂಗ್ರೆಸ್ಸಿನ ಹೊಣೆಯೇ ಹೆಚ್ಚಿನದೆಂಬುದು ನಿರ್ವಿವಾದ. (ಆದರೆ ಅಲ್ಪ ಸಂಖ್ಯಾಕರ ಸಮಸ್ಯೆಗಳು ತಲೆ ಎತ್ತಿದಾಗ ಆ ಅಲ್ಪ ಸಂಖ್ಯಾಕರ ಬೇಡಿಕೆಗಳನ್ನು ಗಮನಿಸಿ ಸಮಸ್ಯೆಗಳ ತೀರ್ಮಾನವಾಗಬಹುದು.) ಪರಿಸ್ಥಿತಿ ಹೀಗಿರುವಾಗ, ಈ ಮೂಲಭೂತ ಪ್ರಶ್ನೆಗಳ ಕಡೆಗೆ ಗಮನ ಕೊಟ್ಟು ಸರಿಯಾದ ದಾರಿ ಹುಡುಕುವುದು ಪ್ರತಿ ಒಬ್ಬ ಕಾಂಗ್ರೆಸ್ಸಿಗನ ಕರ್ತವ್ಯವಲ್ಲವೆ? ಈ ಮಾತು ಅನ್ವಯಿಸುವುದು ಮುಂದಾಳುಗಳಿಗೆ ಮಾತ್ರ

ವಲ್ಲ ಇದು ಮುಂದಾಳಿಗೆ ಎಷ್ಟೋ ಸಾಮಾನ್ಯ ಕಾಂಗ್ರೆಸ್ಸಿಗನಿಗೂ ಅಷ್ಟೇ ಸಂಬಂಧಿಸಿದೆ.

ಈ ಪ್ರಶ್ನೆಗಳಿಗೆ ಉತ್ತರ ಕೊಡುವ ಮೊದಲು ಕಾಂಗ್ರೆಸ್ ಘೋಷಣೆ ಯಲ್ಲಿ ಅಡಕವಾದ ತತ್ವಗಳನ್ನು ಕುರಿತು ಸ್ವಲ್ಪ ಯೋಚಿಸೋಣ. ಎಲ್ಲಕ್ಕೂ ಮಹತ್ವದ ತತ್ವವೆಂದರೆ ಭಾರತದ ಸಂಪೂರ್ಣ ಸ್ವಾತಂತ್ರ್ಯ. ಇದು ಕಾಂಗ್ರೆ ಸ್ಸಿನ ಧರ್ಮ. ಇದೇ ಅದರ ಮೊದಲ ಸೂತ್ರ.

## ಆರ್ಥಿಕ ಸ್ವಾತಂತ್ರ್ಯ

ಈ ಮುಖ್ಯ ತತ್ವವಲ್ಲದೆ ಕಾಂಗ್ರೆಸ್ ಘಟನೆಯಲ್ಲಿ ಇನ್ನೂ ಅನೇಕ ಮಾತುಗಳನ್ನು ವಿವರಿಸಿದೆ. ಎರಡನೆಯ ಮಹತ್ವದ ಮಾತೆಂದರೆ ಆರ್ಥಿಕ ಸ್ವಾತಂತ್ರ್ಯ. ಕಾಂಗ್ರೆಸ್ಸು ರೂಪಿಸಲಿರುವ ಸ್ವರಾಜ್ಯವು ಜನಸಾಮಾನ್ಯರ ಸ್ವರಾಜ್ಯವೆಂದು ಕರಾಚಿ ಕಾಂಗ್ರೆಸ್ಸಿನ ಮೂಲ ಭೂತ ಹಕ್ಕುಗಳ ನಿರ್ಣಯದಲ್ಲಿ ಸಾರಿದ್ದಾರೆ. ಆರ್ಥಿಕ ಸ್ವಾತಂತ್ರ್ಯವಿಲ್ಲದ ರಾಜಕೀಯ ಸ್ವಾತಂತ್ರ್ಯ ನೀರ ಲ್ಲಿಯ ಹೋಮದಂತೆ ವ್ಯರ್ಥ ಈ ಆರ್ಥಿಕ ಸ್ವಾತಂತ್ರ್ಯದ ಗುರಿಯನ್ನು ಸ್ಪಷ್ಟವಾಗಿ ಹೇಳಿದ್ದರೂ ಅದನ್ನು ದೊರಕಿಸಿಕೊಳ್ಳುವ ಸಾಧನಗಳನ್ನು ತಕ್ಕಷ್ಟು ಸ್ಪಷ್ಟಗೊಳಿಸಿಲ್ಲ. ಆದ್ದರಿಂದ ಕಾಂಗ್ರೆಸ್ಸು ಹೇಳಿರುವ ಆರ್ಥಿಕ ಸ್ವಾತಂತ್ರ್ಯವನ್ನು ಯಾವಾಗಲೂ ನೆನಪಿನಲ್ಲಿಟ್ಟುಕೊಳ್ಳಬೇಕು. ಏಕೆಂದರೆ ರಾಜಕೀಯ ಸ್ವಾತಂತ್ರ್ಯದ ನಂತರ ಇದೇ ಹೆಚ್ಚಿನದು. ಇದನ್ನು ಕುರಿತು ಹಿಂದಿನಿಂದ ಯೋಚಿಸೋಣ.

ಕಾಂಗ್ರೆಸ್ಸು ಸಾರಿದ ಮಹತ್ವದ ತತ್ವಗಳಲ್ಲಿ ಧರ್ಮಸ್ವಾತಂತ್ರ್ಯ, ಹಕ್ಕು, ಬಾಧ್ಯತೆಗಳ ಹೊಣೆಗಾರಿಕೆ, ಅಲ್ಪ ಸಂಖ್ಯಾಕರ ಧರ್ಮಸಂಸ್ಕೃತಿಗಳ ಸಂರ ಕ್ಷಣೆ, ಭಿನ್ನ ಭಿನ್ನ ಜನರಲ್ಲಿ ಇಲ್ಲವೇ ಜನಾಂಗಗಳಲ್ಲಿ ಭೇದವೆಣಿಸದಿರುವಿಕೆ, ಹೆಣ್ಣು ಗಂಡುಗಳಲ್ಲಿ ಸಮಾನತೆ, ರಾಷ್ಟ್ರ ರಾಷ್ಟ್ರಗಳ ನಡುವೆ ಶಾಂತಿ, ಮತ್ತು ಎಲ್ಲ ಸಾಮಾಜಿಕ ಕಲಹಗಳನ್ನು ಸಮಾಧಾನಕರವಾಗಿ ಕೊನೆಗೊಳಿಸುವುದು ಇವು ಕೆಲವು. ಕಾಂಗ್ರೆಸ್ ಘಟನೆಯಲ್ಲಿ ಇವುಗಳ ಹೊರತಾಗಿ ಇನ್ನೂ ಕೆಲವು ಉದಾತ್ತ ತತ್ವಗಳನ್ನು ಸಾರಲಾಗಿದೆ.

ಈ ತತ್ವಗಳೆಲ್ಲ ಉದಾತ್ತವಿದ್ದುದರಿಂದಲೇ ಕಾಂಗ್ರೆಸ್ಸಿಗೆ ದೇಶದ ದೃಷ್ಟಿಯಿಂದಲೂ ಅಂತರ್ರಾಷ್ಟ್ರೀಯ ದೃಷ್ಟಿಯಿಂದಲೂ ಮಹತ್ವದ ಸ್ಥಾನವಿದೆ. ಆದರೆ ಇಷ್ಟು ಮಾತ್ರ ಸಾಲದು. ಜನತೆಯು ಮುಂದಿನ ತನ್ನ ಸ್ಪಷ್ಟವಾದ ಮಾರ್ಗವನ್ನು ಕಂಡುಕೊಳ್ಳಲು ಸಾಧ್ಯವಾಗುವಂತೆ, ಮತ್ತು ಈ ದಾರಿಯಲ್ಲಿ ಬರುವ ಗಂಡಾಂತರಗಳಿಂದ ಕಾಪಾಡಿಕೊಳ್ಳುವಂತೆ ಅವುಗಳನ್ನು ಜನತೆಯ ಮುಂದೆ ತಕ್ಕಷ್ಟು ಸ್ಪಷ್ಟವಾಗಿ ಇಡಲಿಲ್ಲ.

ಆದ್ದರಿಂದ ನಾನೇ ಅದನ್ನು ಸ್ಪಷ್ಟಗೊಳಿಸುತ್ತೇನೆ. ಭಾರತದ ಜೀವಾಳದ ಪ್ರಶ್ನೆಯೆಂದರೆ ದಾರಿದ್ರ್ಯ. ನಮ್ಮ ಸಾಮಾಜಿಕ ಜೀವನದ ಈ ನಗ್ನ ಸತ್ಯವು ನಮ್ಮ ಬುದ್ಧಿಮತ್ತೆ ಮತ್ತು ಸಾಧನಗಳಿಗೆ ಆಹ್ವಾನವಿತ್ತಿದೆ. ಕಾಂಗ್ರೆಸ್ಸು ಈ ಸಮಸ್ಯೆಯನ್ನು ಚನ್ನಾಗಿ ತಿಳಿದುಕೊಂಡದ್ದರಿಂದಲೇ ಅದು ಆರ್ಥಿಕ ಸ್ವಾತಂತ್ರ್ಯವನ್ನು ಎತ್ತಿ ಹಿಡಿದಿದೆ. ಆದರೆ ಈ ಆರ್ಥಿಕ ಸ್ವಾತಂತ್ರ್ಯವೆಂದರೇನೆಂಬುದನ್ನು ಸ್ಪಷ್ಟಪಡಿಸಿಲ್ಲವೆಂಬುದೇ ಒಂದು ದೊಡ್ಡ ತೊಂದರೆ. ಇಂಥಹ ಸಂದರ್ಭದಲ್ಲಿ ಅಸ್ಪಷ್ಟವಾದ ಹೇಳಿಕೆಯು ಮಹಾ ಅಪಾಯಕರ. ಏಕೆಂದರೆ ಕಾಂಗ್ರೆಸ್ಸು ಆರ್ಥಿಕ ಸ್ವಾತಂತ್ರ್ಯವನ್ನು ಘೋಷಿಸಿದ್ದರಿಂದ ತಮ್ಮ ಬಡತನವು ಕಾಂಗ್ರೆಸ್ಸಿನಿಂದಲೇ ನೀಗಬಹುದೆಂದು ದೀನದಲಿತರೆಲ್ಲ ಬಾಯಿತೆರೆದು ಕುಳಿತಿದ್ದಾರೆ. ಕಾಂಗ್ರೆಸ್ಸು ಅದನ್ನು ಭಾವಾವೇಶದಿಂದಲೇ ಸಾರಿದ್ದರೆ ಅದನ್ನು ಬಳಕೆಗೆ ತರುವ ರೀತಿ ಗೊತ್ತಾಗದೆ ಯೋಜನೆಯು ನಿಷ್ಫಲವಾದೀತು. ಸಮಸ್ಯೆಯನ್ನು ಸ್ಪಷ್ಟವಾದ, ತಿಳಿಯಾದ, ನಿರ್ದುಷ್ಟವಾದ ರೀತಿಯಲ್ಲಿ ಬಿಡಿಸಬೇಕೇ ಹೊರತು ಬರಿಯ ಭಾವಾವೇಶ ಸಾಲದು, ಹಾಗಾದರೆ ಅಂತಹ ಉಪಾಯಗಳು ಯಾವವು ?

## ನಿರ್ದುಷ್ಟ ಕಲ್ಪನೆಗಳು

ಆರ್ಥಿಕ ಸ್ವಾತಂತ್ರ್ಯವನ್ನು ಶೋಧಿಸುವ ದಾರಿಯಲ್ಲಿ ಎದುರಿಸಬೇಕಾದ ಮೊದಲನೇ ವಿಘ್ನವೆಂದರೆ ಮೊದಲೇ ರೂಢಮೂಲವಾಗಿರುವ ಕೆಲವು ವಿಚಾರಗಳು. ನಮಗೆ ಗೊತ್ತಾಗದಂತೆಯೇ ಇವು ನಮ್ಮ ಬುದ್ಧಿಶಕ್ತಿಯನ್ನು ಮೊಟಕು ಮಾಡುತ್ತವೆ. ನಾವು ಬದುಕಿರುವ ಈ ಬಂಡವಲುವಾದದ ಯುಗದಲ್ಲಿ ಜಗತ್ತಿನ ಪ್ರಬಲ ಬಂಡವಲುಗಾರ ರಾಷ್ಟ್ರವಾದ ಇಂಗ್ಲಂಡಿನ ಮೂಲಕ ನಮಗೆ ಬಂಡ

ವಲುವಾದದ ಭಾಷೆ, ಶಿಕ್ಷಣ ಪದ್ಧತಿ, ನ್ಯಾಯದಾನ, ಆರ್ಥಿಕ ಮತ್ತು ರಾಜಕೀಯ ಸಂಸ್ಥೆಗಳು ಮುಂತಾದವುಗಳ ನಿಕಟ ಸಂಬಂಧವುಂಟಾಗಿದೆ. ಇಂಗ್ಲಂಡ್, ಅಮೇರಿಕೆ ಮುಂತಾದ ಬಂಡವಲುಗಾರ ರಾಷ್ಟ್ರಗಳ ಆಚಾರ-ವಿಚಾರಗಳು ನಮ್ಮ ಮನೋರಂಗವನ್ನೆಲ್ಲ ವ್ಯಾಪಿಸಿ ಅವು ಪ್ರಕೃತಿಯಂತೆ ಅಚಲ ಹಾಗೂ ಸ್ಥಿರವೆಂದು ತೋರತೊಡಗಿವೆ. ಸಾರಾಂಶವೇನೆಂದರೆ ಯಾವ ಪ್ರಯತ್ನವೂ ಇಲ್ಲದೆ ನಾವು ಬಂಡವಲುವಾದದ ತತ್ವಗಳನ್ನು ಅನುಸರಿಸುತ್ತ ಬಂದಿದ್ದೇವೆ. ಇಷ್ಟೇ ಅಲ್ಲ, ಬಂಡವಲುಗಾರಿಕೆಯ ಸಂಸ್ಥೆಗಳೆಂದರೆ ಸಮಾಜ ರಚನೆಗೆ ಆಧಾರವಾದ ಶಾಶ್ವತ ತತ್ವವೆಂಬುದನ್ನು ಭಾವಿಸುತ್ತ ಬಂದಿದ್ದೇವೆ.

ಹೀಗೆ ನಮ್ಮಲ್ಲಿ ಹೆರವರ ವಿಚಾರಗಳು ಸೇರಿಕೊಂಡಿರುವುದರಿಂದ ನಮ್ಮ ಸಮಾಜದ ಪುನರ್‌ರಚನೆಯ ಯೋಚನೆ ಬಂದಾಗಲೆಲ್ಲಾ ನಮ್ಮ ಎದುರಿಗೆ ಮರಳಿ ಮರಳಿ ಬಂಡವಲುಗಾರಿಕೆಯ ಸಂಸ್ಥೆಗಳೇ ಬಂದು ನಿಲ್ಲುತ್ತವೆ. ಅದ್ದರಿಂದ ನಾವು ಅವುಗಳನ್ನೇ ಹಿಂಬಾಲಿಸುತ್ತೇವೆ. ಕಾಂಗ್ರೆಸ್ ಮಂತ್ರಿಮಂಡಲಗಳು ದೊಡ್ಡ ಪ್ರಮಾಣದ ಉದ್ಯೋಗ ದಂಧೆಗಳ ವಿಷಯದಲ್ಲಿ ತಳೆದ ಧೋರಣೆಯನ್ನು ಇದಕ್ಕೆ ಉದಾಹರಣೆಯಾಗಿ ತೋರಿಸಬಹುದು. ಕೂಲಿಕಾರರ ಮಸೂದೆ, ಸಂಬಳ, ಕಬ್ಬಿನ ಬೆಲೆ ಮುಂತಾದ ಇನ್ನಿತರ ವಿಷಯಗಳಲ್ಲಿ ಕೈ ಹಾಕಿದರೆ ತಮ್ಮ ಪ್ರಾಂತದ ಸಂಪತ್ತು—ಬಂಡವಲು—ಕರಗಬಹುದೆಂದು ನಮ್ಮ ಮಂತ್ರಿ ಮಂಡಲಗಳು ಹೆದರಿದುವು. ಆದ್ದರಿಂದ ಬಂಡವಲುಗಾರಿಕೆಯ ಉದ್ಯೋಗ ವ್ಯವಹಾರಗಳಿಗೆ ಉತ್ತೇಜನ ಕೊಡುವುದು ಅನಿವಾರ್ಯವೆಂದು ಅವು ತಿಳಿಯಲೇಬೇಕಾಯಿತು. ಇಂತಹ ಒಂದು ಸಂಕುಚಿತ ಯೋಚನಾ ಕೋನವಿದ್ದಮೇಲೆ ಅವರು ಹಾಗೆ ಮಾಡುವುದು ಅಸ್ವಾಭಾವಿಕವೇನೂ ಅಲ್ಲ.

## ಬಂಡವಲುಗಾರಿಕೆಯ ಪ್ರಭಾವ

ರಾಷ್ಟ್ರವನ್ನು ಈ ದೃಷ್ಟಿಕೋನವನ್ನಿಟ್ಟುಕೊಂಡು ಪುನರ್ರಚಿಸುವುದಾದರೆ ಅದರ ಹಣೆಬರಹವೇನಾದೀತೆಂಬುದನ್ನು ಸುಲಭವಾಗಿ ಯೋಚಿಸಬಹುದು. ಬಂಡವಲುಗಾರರ ಉದ್ಯೋಗ ಅವರ ಸಂಪತ್ತು ಅವರ ವಾಣಿಜ್ಯ ಇವೆಲ್ಲ ಬಹುಮುಖವಾಗಿ ಬೆಳೆದು ರಾಷ್ಟ್ರದ ಆರ್ಥಿಕ ಮತ್ತು ರಾಜಕೀಯ ಜೀವನದ ಸೂತ್ರಗಳೆಲ್ಲಾ ಅವರ ಕೈ ಸೇರುವುವು. ಇದರಿಂದ ದೇಶದ

ತುಂಬ ದಾರಿದ್ರ್ಯವೂ ನಿರುದ್ಯೋಗವೂ ಹೆಡೆಯೆತ್ತಿ ನಿಲ್ಲುವುದು. ಬಂಡವಲುಗಾರರ ಹಿಂಸೆ, ಸುಲಿಗೆಯು ನಿರಂತರವಾಗಿ ಮುಂದುವರಿಯುವುದು. ಇಂಥ ಪರಿಸ್ಥಿತಿ ನಿರ್ಮಾಣವಾಗುವುದೆಂಬುದನ್ನು ತೀರ ಸುಲಭವಾಗಿ ಕಂಡುಕೊಳ್ಳಬಹುದು. ಏಕೆಂದರೆ ಇಂದು ನಾವು ಬಾಳುತ್ತಿರುವುದು ವಿರೋಧಾಭಾಸವುಳ್ಳ ವಿಚಾರಗಳ ಮಧ್ಯದಲ್ಲಿ ನಮ್ಮ ಮನಸ್ಸು ಒಂದುಕಡೆಯಲ್ಲಿ ಬಂಡವಲುಗಾರ ಆಚಾರ-ವಿಚಾರಗಳ ಕೊಳ್ಳಿಗೆ ಗುರಿಯಾಗಿದೆ; ಇನ್ನೊಂದು ಕಡೆಯಲ್ಲಿ ಇಂದಿನ ಬಂಡವಲುಗಾರಿಕೆಯು ನಾಗರಿಕತೆ ನಮ್ಮ ಕಣ್ಣೆದುರಿನಲ್ಲಿಯೇ ಪತನ ಹೊಂದುತ್ತ ತನ್ನ ನಿಷ್ಫಲತೆ ನಿರ್ದಯತೆ ಮತ್ತು ದುಷ್ಪರಿಣಾಮಗಳನ್ನು ಸ್ಪಷ್ಟವಾಗಿ ತೋರಿಸುತ್ತಿದೆ ಇತ್ತ ನಮ್ಮ ತಲೆಯಲ್ಲಿ ಬಂಡವಲುಗಾರಿಕೆಯ ವಿಚಾರಗಳು ತುಂಬಿದ್ದರೂ ಅತ್ತ ಅದರ ದುರ್ಬಲತೆ ದುರ್ದೆಸೆಗಳಿಗೆ ನಾವು ನಿಟ್ಟುಸಿರು ಬಿಡುತ್ತಲಿದ್ದೇವೆ. ಬಂಡವಲುವಾದದ ಈ ಸ್ಪಷ್ಟವಾದ ದುರ್ದೆಸೆ ನಾವು ಕುರುಡರಾದರೆ ಮಾತ್ರ ಕಾಣಲಾರದು. ಆದ್ದರಿಂದ ಗೊತ್ತು ಗುರಿ ಇಲ್ಲದ ನಮ್ಮ ರಾಷ್ಟ್ರೀಯ ನಿರ್ಮಾಣ ಕಾರ್ಯವು ನಮ್ಮನ್ನು ಭೀಕರ ಸಾಮಾಜಿಕ ಅಧಃಪತನದತ್ತ ಕರೆಯೊಯ್ಯದೆ ಬಿಡದು.

ನಾವು ಹಿಡಿದ ದಾರಿಯಲ್ಲಿ ಇನ್ನೂ ಒಂದು ಭೀಕರ ಗಂಡಾಂತರವು ಪ್ರಾಪ್ತವಾಗುವ ಸಂದರ್ಭವಿದೆ. ಬಂಡವಲುಗಾರಿಕೆಯ ದೃಷ್ಟಿಯಿಂದ ಸಮಾಜದ ಪುನರ್‌ರಚನೆಯಾಗಬೇಕೆನ್ನುವ ಕಾಂಗ್ರೆಸ್ಸಿಗರಲ್ಲಿ ಬಹುಸಂಖ್ಯಾಕರಿಗೆ ತಮ್ಮ ಹಿತಾಹಿತಗಳ ಅರಿವಿಲ್ಲ ಆದರೆ ಸ್ಪಷ್ಟ ಅರಿವು ಇದ್ದೂ ತಮ್ಮ ವೈಯಕ್ತಿಕ ಸ್ವಾರ್ಥಕ್ಕಾಗಿ ಉದ್ಯೋಗ ವ್ಯವಹಾರಗಳಲ್ಲಿ, ಬ್ಯಾಂಕುಗಳಲ್ಲಿ, ವಿಮಾ ಸಂಸ್ಥೆಗಳಲ್ಲಿ ಮತ್ತು ಇನ್ನಿತರ ಬಂಡವಲುವಾದೀ ಚಟುವಟಿಕೆಗಳಲ್ಲಿ ತೊಡಗಿದ ಕಾಂಗ್ರೆಸ್ಸಿಗರ ಸಂಖ್ಯೆಯೇನೂ ಕಡಿಮೆಯಿಲ್ಲ. ಇಂಥವರಿಗೆ ಸ್ವಾತಂತ್ರ್ಯವು ಬೇಕಾಗಿರುವ ಮುಖ್ಯವಾದ ಉದ್ದೇಶವು ಬೇರೆಯಾಗಿಯೇ ಇದೆ. ಭಾರತದ ಬಂಡವಲುಗಾರಿಕೆ ಬ್ರಿಟಿಷ್ ಬಂಡವಲುಗಾರಿಕೆಯಿಂದ ಬಿಡುಗಡೆಯಾಗಿ ತನ್ನ ಪ್ರತಿಷ್ಠೆಯನ್ನು ಬೆಳೆಸಬೇಕೆಂಬ ಹಂಚಿಕೆ ಇವರದು. ಕಾಂಗ್ರೆಸ್ಸಿನಲ್ಲಿ ಹೆಚ್ಚಾಗಿ ಸುಶಿಕ್ಷಿತ ಮಧ್ಯಮ ವರ್ಗವೇ ತುಂಬಿಕೊಂಡಿದೆ. ಸಾಮಾಜಿಕ ಮೆಟ್ಟಲುಗಳನ್ನೇರುತ್ತ, ಸಮಾಜದ ದೃಷ್ಟಿಯಲ್ಲಿ ಮೇಲ್ವರ್ಗದವರೆಂದು ಮೆರೆಯುವ ಶ್ರೀಮಂತ ವರ್ಗಕ್ಕೆ ಸರಿಯೆನ್ನಿಸಿಕೊಳ್ಳಬೇಕೆನ್ನು

ವುದೇ ಮಧ್ಯಮ ವರ್ಗದ ಪ್ರತಿಯೊಬ್ಬನ ಧ್ಯೇಯವಾಗಿದೆ. ಬಂಡವಲುಗಾರಿಕೆಯ ಸೌಕರ್ಯಗಳ ಕಡೆಗೆ ದೃಷ್ಟಿಯಿಟ್ಟ ಇಂಥ ವರ್ಗಗಳ ಓಘವು ನಮ್ಮ ರಾಷ್ಟ್ರವನ್ನು ದುರ್ದೆಸೆಗೆ ಗುರಿ ಮಾಡದೆ ಬಿಡದು. ಆದ್ದರಿಂದ ನಾವು ಇನ್ನಷ್ಟು ಜಾಗರೂಕರಾಗಿರತಕ್ಕದ್ದು;

## ಮಾನಸಿಕ ಪರಿಳಿತ

ಈ ವಿಷಯವನ್ನು ಕಾಂಗ್ರೆಸ್ಸಿಗರೊಂದಿಗೆ ಚರ್ಚಿಸುವಾಗ ಅವರು ತಳೆದ ಹಲವು ತರದ ಭಾವನೆಗಳು ಒಂದೊಂದಾಗಿ ಹೊರಬರುತ್ತಿವೆ. ಅವರಿಗೆ ಭವಿಷ್ಯವು ಸುಖಮಯವಾಗಿ ಕಾಣುತ್ತಿರುವುದರಿಂದ ಅವರು ಪೂರ್ಣ ಸಂತುಷ್ಟರಾಗಿದ್ದಾರೆ. ರಾಷ್ಟ್ರದ ಚುಕ್ಕಾಣಿಯು ಸರ್ವರ ಕಲ್ಯಾಣದ ಮತ್ತು ನಿಷ್ಪಕ್ಷಪಾತ ನ್ಯಾಯದ ಆದರ್ಶವನ್ನು ಇಟ್ಟುಕೊಂಡ ಸಮರ್ಥರ ಕೈಯಲ್ಲಿರುವುದರಿಂದ ಎಂತಹ ಗಂಡಾಂತರಗಳಿಂದಲೂ ಪಾರುಗಾಣಬಹುದೆಂಬುದು ಇವರ ಹಲವು ಭಾವನೆಗಳಲ್ಲಿ ಒಂದು. ಇಂಥ ಯೋಗ್ಯ ಮುಂದಾಳುಗಳು ಬಂಡವಲುಗಾರಿಕೆಯ ಅತಿರೇಕವನ್ನು ತಡೆಯುವುದರ ಮೂಲಕವೂ ಎಲ್ಲ ವರ್ಗಗಳಲ್ಲಿ 'ಸಮತೂಕ'ವನ್ನಿಡುವ ಮೂಲಕವೂ ಅದರಿಂದ ಬರುವ ಗಂಡಾಂತರಗಳನ್ನು ಖಂಡಿತವಾಗಿ ನಿವಾರಿಸುವರೆಂದು ಇವರು ತಿಳಿದಿದ್ದಾರೆ.

ಇಂಥ ಯೋಚನೆಗಳಿಂದ ತೃಪ್ತಿ ಪಡುವವರಿಗೆ ನಮ್ಮ ಮುಂದೆ ಇರುವ ಸಮಸ್ಯೆಯ ಕಲ್ಪನೆಯೇ ಇಲ್ಲ. ಮೂಲ ಸಮಸ್ಯೆ ನಮ್ಮ ಸಮಾಜದ ನೆಲೆಗಟ್ಟೂ ಸ್ವಭಾವವೂ ಎಂತಹದಿರಬೇಕೆಂಬುದೇ ಹೊರತು ಸಮಾಜದೊಳಗಿನ ಯಾವುದೊಂದು ಅನ್ಯಾಯವನ್ನು ತೆಗೆದುಹಾಕುವುದಲ್ಲ. ಆರ್ಥಿಕ ಸಮಸ್ಯೆಗಳ ಸ್ಪಷ್ಟ ಘೋಷಣೆಯೇ ರಾಜನೀತಿ. ರಾಷ್ಟ್ರೀಯ ಪಾರ್ಲಿಮೆಂಟೂ ರಾಷ್ಟ್ರೀಯ ಸರಕಾರವೂ ಅಸ್ತಿತ್ವದಲ್ಲಿ ಬಂದೊಡನೆ ಕರ, ತೆರಿಗೆ, ಹಣಕಾಸು, ವಿನಿಮಯ, ದೇಶದ ಸಾಲ, ರೇಲ್ವೆ ದರ, ರಾಷ್ಟ್ರೀಯ ಮತ್ತು ಅಂತರ್‌ರಾಷ್ಟ್ರೀಯ ವಾಣಿಜ್ಯ, ಸಂಬಳ ಪ್ರಮಾಣ, ದಿನದ ದುಡಿತದ ಅವಧಿಯ ಪ್ರಮಾಣ, ಒಕ್ಕಲುತನ, ಕೈಗಾರಿಕೆ, ಔದ್ಯೋಗೀಕರಣ ಮುಂತಾದ್ದನ್ನೆಲ್ಲ ಕೈಕೊಳ್ಳಬೇಕಾಗುತ್ತದೆ. ಈ ಸಮಸ್ಯೆಗಳನ್ನೆಲ್ಲ ಮುಂದೂಡುವುದರಲ್ಲಿ ಅರ್ಥವಿಲ್ಲ ಇವುಗಳಿಗೆ ಕೂಡಲೆ ಸ್ಪಷ್ಟ ಹಾಗು ನಿರ್ದಿಷ್ಟ ಉತ್ತರ ದೊರೆಯಬೇಕು.

ಧ್ಯೇಯವಾದಿಗಳಾದ ರಾಷ್ಟ್ರನಾಯಕರು ಇವುಗಳಿಗೆ ಉತ್ತರಿಸಿದರೆ ಭಾರತೀಯ ಸಮಾಜದ ನೆಲೆಗಟ್ಟನ್ನು ಹಾಕಿದ ಹಾಗೆ ಆಗುತ್ತದೆ. ನಮ್ಮ ಸಮಾಜ ರಚನೆ ಬಂಡವಲುಗಾರ ಪದ್ಧತಿಯ ಮೇಲೆ ಆಗಬೇಕೆಂದು ಕೆಲವರು ಸೂಚಿಸಿದರೆ ಇನ್ನು ಕೆಲವರು ಇನ್ನೊಂದು ದಾರಿ ತೋರಿಸಬಹುದು. ಇಂಥವರ ಹೇಳಿಕೆಯ ಅಭಿಪ್ರಾಯ ಸಾಮಾಜಿಕ ವರ್ಗಗಳಲ್ಲಿ ಸಾಮಾನ್ಯವಾಗಬೇಕೆಂದಲ್ಲ. ವ್ಯವಹಾರದ ಆಡಳಿತದಲ್ಲಿ ಯಾವ ವರ್ಗದ ಮೇಲುಗೈಯಾಗಬೇಕೆಂಬುದು ಮಾತ್ರ. ಇಂಥ ಆರ್ಥಿಕ ಮೂಲ ಸಮಸ್ಯೆಗಳನ್ನು ಅವರು ಬಿಡಿಸುವ ರೀತಿಗಳು ಬಂಡವಲುಗಾರಿಕೆಗೆ ಪೋಷಕವಾಗಿಬಿಟ್ಟರೆ ಜನತೆಯೆಲ್ಲವೂ ಬಂಡವಲುವಾದದ ಮಂಗ ಮುಷ್ಟಿಯಲ್ಲಿ ಸಿಕ್ಕುಬಿಡುವುದು. ಮತ್ತು ಆರಂಭದಲ್ಲಿ ಅವರಿಗೆ ಹೊಳೆಯದ ಯಾವುದೋ ಒಂದು ಸ್ಥಿತಿಗೆ ರಾಷ್ಟ್ರ ಗುರಿಯಾಗುವುದು.

ಬಂಡವಲುಗಾರಿಕೆಯ ದಾರಿ ಒಮ್ಮೆ ಹಿಡಿದು ಬಿಟ್ಟರೆ ಸಾಕು! ಆ ಮೇಲೆ ನಮ್ಮ ಗಮನ ಅದನ್ನು ಉಳಿಸಿಕೊಳ್ಳುವುದರ ಕಡೆಗೂ ಬೆಳೆಸಿಕೊಳ್ಳುವುದರ ಕಡೆಗೂ ಹೋಗುವುದೇ ಹೊರತು ಅದಕ್ಕೆ 'ತಡೆ ಹಾಕು'ವುದರ ಕಡೆಗೆ ಹೋಗುವುದಿಲ್ಲ. ಅರ್ಥಾತ್ ನಾವೇ ಅದರ ಹಿಡಿತದಲ್ಲಿ ಸಿಕ್ಕುಬಿಡುವೆವು. ಆಗ ರಾಷ್ಟ್ರದ ಹಿತ ಬಂಡುವಾಲಗಾರಿಕೆಯಿಂದ ಮಾತ್ರ ಸಾಧ್ಯವೆನ್ನುವ ಪರಿಸ್ಥಿತಿ ಉಂಟಾಗುವದು. ಬಂಡವಲುಗಾರಿಕೆಗೆ ಪೆಟ್ಟು ಬಿದ್ದರೆ ಕೂಲಿಯ ದರ ಇಳಿಯುವುದು, ನಿರುದ್ಯೋಗ ತಲೆಯೆತ್ತುವುದು, ಒಕ್ಕಲುತನದ ಹ್ರಾಸವಾಗುವುದು. ರಾಷ್ಟ್ರದ ಹಿತಾಕಾಂಕ್ಷಿಗಳಾದ ಮುಂದಾಳುಗಳ ಗತಿಯೇ ಹೀಗಾದ ಮೇಲೆ ಅವರ ಉತ್ತರಾಧಿಕಾರಿಗಳ ಪಾಡು ಕೇಳಬೇಕೆ?—ರಾಷ್ಟ್ರದ ಎಲ್ಲ ಸಾಧನ ಸಾಮುಗ್ರಿಯನ್ನೂ ಈ ಬಂಡವಲುಗಾರ ವರ್ಗದ ಪದತಲದಲ್ಲಿಡಲು ಹವಣಿಸುವುದೇ ಸರಿ! ಕಾಂಗ್ರೆಸ್ಸಿನೊಳಗಿನ, ನಾನು ಹಿಂದೆ ಉದಾಹರಿಸಿದ ಸಂಧಿಸಾಧಕರ ಪ್ರಯತ್ನಗಳು ಈ ಪರಿಸ್ಥಿತಿಗೆ ಇನ್ನಷ್ಟು ಪುಟ ಕೊಡುವವು. ಆಗ ಕಾಂಗ್ರೆಸ್ಸಿನಲ್ಲಿಯೇ ಲಂಚಗುಳಿತನ, ಉದ್ಯೋಗವನ್ನು ಅರಸುವಿಕೆ, ಅಧಿಕಾರ ಲಾಲಸೆ, ಸ್ವಾರ್ಥ ಮುಂತಾದುವು ಮನೆಮಾಡುವವು. ಇದಕ್ಕೆ ಹಿಂದಿನ ಕಾಂಗ್ರೆಸ್ ಮಂತ್ರಿಮಂಡಲಗಳು ಅಧಿಕಾರದಲ್ಲಿದ್ದಾಗಿನ ಅನೇಕ ಉದಾಹರಣೆಗಳು ದೊರೆಯುತ್ತವೆ.

ಇದೆಲ್ಲದರಿಂದ ಬಂಡವಲುಗಾರರಿಗೆ ಪ್ರಯೋಜನವಾಗುವುದಾದರೆ ಜನ ಸಾಮಾನ್ಯರಿಗೂ ಏಕಾಗಬಾರದು ?—ಎಂಬ ಪ್ರಶ್ನೆ ಮುಂದೆ ಬರಬಹುದು. ಪ್ರತಿಸಲವೂ ಅವರು ಹಾಗೆಯೇ ಮಾಡುವರೆಂದು ನಮ್ಮ ಅಭಿಪ್ರಾಯವಲ್ಲ. ಆದರೆ ನಾವು ಇಂಥ ವಿಚಾರ ಸರಣೆಯೊಳಗಿನ ಅಪಾಯವನ್ನು ತೋರಿಸಿ ಜನರು ಈ ವಿಷಯದಲ್ಲಿ ಚೆನ್ನಾಗಿ ಯೋಚಿಸಬೇಕೆಂದು ಕೇಳಿಕೊಳ್ಳುತ್ತೇವೆ. ಈ ಸಮಸ್ಯೆಯನ್ನು ಇನ್ನೊಂದು ದೃಷ್ಟಿಯಿಂದಲೂ ವಿವೇಚಿಸಬಹುದು. ರಾಜಕೀಯ ಅಧಿಕಾರವು ಜನಸಾಮಾನ್ಯರ ಕೈಗೆ ಬಂತೆಂದು ಯೋಚಿಸುವಾ. ಆದರೆ ಅವರು ಆ ಅಧಿಕಾರವನ್ನು ತಮ್ಮ ಕೈಯಲ್ಲಿಟ್ಟುಕೊಂಡು ಅದನ್ನು ತಮ್ಮ ಸೌಖ್ಯಾಭಿವೃದ್ಧಿಗಾಗಿ ಉಪಯೋಗಿಸಿಕೊಳ್ಳುವುದು ಹೇಗೆ? ಜನ ಸಾಮಾನ್ಯರ ಕಡೆಗೆ ಬಂದ ಅಧಿಕಾರವನ್ನು ನಾವು ಅವರ ಪರವಾಗಿ ಬಂಡ ವಲುಗಾರ ವರ್ಗಕ್ಕೆ ಒಪ್ಪಿಸಿಬಿಟ್ಟರೆ ಜನಸಾಮಾನ್ಯರಿಗೆ ಅದರ ಲಾಭವೇನೂ ಆಗಲಾರದೆಂದು ನಾವು ಸ್ಪಷ್ಟಪಡಿಸಿದ್ದೇವೆ. ಬಂಡವಲುಗಾರ ವರ್ಗವನ್ನು ಸಾಕಿ ಸಲಹಿ ಅದರ ಆರ್ಥಿಕ ವಿಕಾಸಕ್ಕೆ ಇಂಬುಗೊಟ್ಟರೆ ನಾವು ಜನತೆಯ ಕೈಗೆ ಬಂದ ಅಧಿಕಾರವನ್ನು ಈ ವರ್ಗಕ್ಕೆ ಒಪ್ಪಿಸಿದಂತಾಗುವುದರಲ್ಲಿ ಸಂದೇಹ ವಿಲ್ಲ.

## ಮೇಲಿನ ಹಂತದ ವರ್ಗಗಳು

ಕಾಂಗ್ರೆಸ್ಸಿನ ಗೆಲುವೆಂದರೆ ಜನತೆಯ ಗೆಲುವು ಎಂಬುದು ತೋರಿಕೆಗೆ ಸರಿಯಾದುದೇನೋ ನಿಜ. ಆದರೆ ವಸ್ತುಸ್ಥಿತಿ ಸ್ವಲ್ಪ ಭಿನ್ನವಿದೆ. ಏಕೆಂದರೆ ಕಾಂಗ್ರೆಸ್ಸಿನಲ್ಲಿ ಮೇಲ್ವರ್ಗಗಳ ಹಿತ ಸಂರಕ್ಷಣೆಗಾಗಿ ಹೆಣಗುವ ಎಷ್ಟೋ ಜನರು ಸೇರಿಕೊಂಡಿದ್ದಾರೆಂಬ ಮಾತನ್ನು ಮೇಲೆಯೇ ಹೇಳಿದ್ದೇನೆ. ಇಂಥ ಕಾಂಗ್ರೆಸ್ಸಿಗರು ತಮ್ಮ ಶಿಕ್ಷಣ ಮತ್ತು ಸಾಮಾಜಿಕ ಸ್ಥಾನಮಾನಗಳ ಮೂಲಕ ಕಾಂಗ್ರೆಸ್ಸಿನೊಳಗಿನ ಕೆಳವರ್ಗಕ್ಕಿಂತಲೂ ಮೇಲ್ವರ್ಗದ ವಿಷಯದಲ್ಲಿ ಹೆಚ್ಚು ಆತ್ಮೀಯ ಭಾವವನ್ನು ತಾಳಿದ್ದಾರೆ. ಹೀಗಾಗಿ ಅವರ ಸಂಖ್ಯಾಬಲ ಎಷ್ಟು ಕಡಿಮೆ ಇದ್ದರೂ ಕಾಂಗ್ರೆಸ್ಸು ಅವರಿಗೆ ಅನುಕೂಲವಾದ ಧೋರಣೆಯನ್ನೇ ರೂಪಿಸುತ್ತಿದೆ ಆದ್ದರಿಂದ ಕಾಂಗ್ರೆಸ್ಸಿನ ವಿಜಯವೆಂದರೆ ಶ್ರೇಷ್ಠವರ್ಗದ ವಿಜಯವೆನ್ನಬಹುದು. ಮುಂದಿನ ಚುನಾವಣೆಯಲ್ಲಿ ವಿಜಯಿಯಾಗುವುದು ಜನತೆಯೋ ಮೇಲ್ವರ್ಗವೋ ಎಂಬುದನ್ನು ನೋಡಬೇಕು.

ನಾವು ಮುಂದೆ ಮಾಡಿದ ಸಮಸ್ಯೆಯನ್ನು ಬಿಡಿಸಲು ಇನ್ನೊಂದು ಮಾರ್ಗ ಸೂಚಿತವಾಗಿದೆ. ಭಾರತವು ಮುಖ್ಯವಾಗಿ ಒಕ್ಕಲುತನದ ದೇಶ ವಾಗಿರುವುದರಿಂದಲೂ ನಮ್ಮಲ್ಲಿ ಎಷ್ಟೋ ಜನರ ಹಿತಸಂಬಂಧಗಳಿಗೆ ಹಳ್ಳಿಯೇ ಮೂಲವಾಗಿರುವುದರಿಂದಲೂ ಹಳ್ಳಿಯ ಸೊಗಸಾದ ಜೀವನ ಚಿತ್ರವು ಮುಂದೆ ಬರುತ್ತಿದೆ. ಬಡತನ ಹಾಗು ಬಂಡವಲುಗಾರಿಕೆಯ ಮಾತು ಬಂದಾಗ ಹಳ್ಳಿಯು ತನ್ನ ಗ್ರಾಮೋದ್ಯೋಗಗಳ ಮೂಲಕವಾಗಿ ಸ್ವಯಂಪೂರ್ಣವಾಗುವು ದೆಂದು ಈ ಜನರು ಹೇಳುತ್ತಾರೆ. ದುರ್ದೈವದಿಂದ ಈ ವಿಷಯದಲ್ಲಿ ಚೆನ್ನಾಗಿ ಯೋಚಿಸಿದವರು ತೀರ ಕಡಿಮೆ. ಮತ್ತು ಅಂತಹ ಜನರಿಗೆ ರಾಜಕೀಯ ಜ್ಞಾನದ ಗಂಧಗಾಳಿ ಕೂಡ ಇಲ್ಲವೆನ್ನಬೇಕಾಗುತ್ತದೆ. ಹಳ್ಳಿಯ ಕೈಗಾರಿಕೆಗಳ ಪುನರ್ರಚನೆಯಾಗಿ ಹಳ್ಳಿಗರಿಗೆ ಆರ್ಥಿಕ ಸ್ವಾತಂತ್ರ್ಯ ದೊರೆಯಬೇಕೆಂಬು ದನ್ನು ಒಪ್ಪಿಕೊಳ್ಳೋಣ. ಹೀಗಿದ್ದರೂ ಈ ಪ್ರಶ್ನೆಯ ಮಹತ್ವದ ಭಾಗಕ್ಕೆ ಸರಿಯಾದ ಉತ್ತರ ದೊರೆತಂತಾಗುವದಿಲ್ಲ. ಬರಿಯ ಗ್ರಾಮಕೈಗಾರಿಕೆ ಯಿಂದಲೇ ರಾಷ್ಟ್ರದ ಅಭಿವೃದ್ಧಿಯಾದೀತೆಂದು ಯಾವ ಬುದ್ಧಿವಂತನೂ ತಿಳಿ ಯಲಾರ. ಇಂದಿನ ನಾಗರಿಕತೆಗೆ ತಕ್ಕ ಜೀವನ ಮಟ್ಟವು ಬೆಳೆಯಬೇಕಾದರೆ, ಜೀವನಕ್ಕೆ ತಕ್ಕ ಅನುಕೂಲತೆಗಳನ್ನು ಕಲ್ಪಿಸಿ ಕೊಡಬೇಕಾದರೆ, ಪ್ರಗತಿಗೆ ದಾರಿಯಾಗಬೇಕಾದರೆ ದೊಡ್ಡ ಪ್ರಮಾಣದ ಯಾಂತ್ರಿಕ ಸಲಕರಣೆಗಳನ್ನು ಉಪಯೋಗಿಸಲೇಬೇಕು.

## ಸರಕಾರದ ಒಡೆತನ

ಹಳ್ಳಿಯ ಪುನರ್ಘಟನೆಯ ದೃಷ್ಟಿಯಿಂದಲೂ, ದಾರಿದ್ರ್ಯ ಶೋಷಣೆ ಗಳನ್ನು ಕೊನೆಗೊಳಿಸುವ ಸದುದ್ದೇಶದಿಂದಲೂ, ರಾಷ್ಟ್ರದ ಆರ್ಥಿಕ ಪುನರ್ ರಚನೆಯನ್ನು ಪರಿಶೀಲಿಸಿದವರಲ್ಲಿ ಅಖಿಲ ಭಾರತ ಗ್ರಾಮೋದ್ಯೋಗ ಸಂಘದ ಕಾರ್ಯದರ್ಶಿ ಪ್ರೊ. ಜೆ. ಸಿ. ಕುಮಾರಪ್ಪನವರನ್ನು ಯಾರೂ ಸರಿಗಟ್ಟಲಾರರು. ಕುಮಾರಪ್ಪನವರು ಕೂಲಂಕಷವಾದ ಪರಿಶೀಲನೆಯನಂತರ ಉದ್ಯೋಗ ಗಳನ್ನು ಎರಡು ವಿಧವಾಗಿ ವಿಂಗಡಿಸಿದರು. ಮೊದಲನೆಯದು, ವಿಕೇಂದ್ರೀ ಕೃತವಾದ—ಬೇರೆ ಬೇರೆಯಾಗಿ ಸ್ವಾಯತ್ತವಾಗಿ ನಡೆಯಬಹುದಾದ— ಉದ್ಯೋಗಗಳು. ಎರಡನೆಯದು, ಕೇಂದ್ರೀಕರಣದ ಹೊರತು ನಡೆಯ

ಲಾರದಂಥ ಉದ್ಯೋಗಗಳು. ಎರಡನೆಯ ತರಗತಿಯಲ್ಲಿ ಉಕ್ಕು, ಕಣಿಗಳು, ಸಾರಿಗೆ ರೇಲ್ವೆ, ಹಡಗು. ಮತ್ತು ವಾಹನ—ವಿದ್ಯುಚ್ಛಕ್ತಿ, ವಿಮಾನ, ಸಂರಕ್ಷಣೆ, ಯಂತ್ರ ನಿರ್ಮಾಣ ಮೊದಲಾದವುಗಳ ಸಮಾವೇಶವಾಗುತ್ತದೆ.

ಆದ್ದರಿಂದ ನಮ್ಮ ಗ್ರಾಮನಿಷ್ಠ ರಾಜನೀತಿಜ್ಞರು ಸುರಮ್ಯವಾದ ಹಳ್ಳಿಯ ಸಾಮಾಜಿಕ ಜೀವನದಲ್ಲಿ ಕೂಡ ಔದ್ಯೋಗಿಕರಣವೂ, ಕೆಲಮಟ್ಟಿಗೆ ಪಟ್ಟಣದ ವಾತಾವರಣವೂ ಸೇರ್ಪಡೆಯಾಗಲೇಬೇಕೆಂಬುದನ್ನು ನೆನಪಿನಲ್ಲಿಡಬೇಕು ಇದಲ್ಲದೆ ಈಗ ಇರುವ, ಇಲ್ಲವೆ ಮುಂದೆ ನಿರ್ಮಿತವಾಗಬಹುದಾದ ದೊಡ್ಡ ಪ್ರಮಾಣದ ಉದ್ಯೋಗಗಳ ವಿಷಯದಲ್ಲಿ ಏನು ಮಾಡಬೇಕೆಂಬ ಪ್ರಶ್ನೆ ಮುಂದೆ ಬರುತ್ತದೆ ಅವುಗಳ ಒಡೆತನ ಯಾರ ಕೈಯಲ್ಲಿರಬೇಕು?—ಅವುಗಳನ್ನು ನಡೆಸುವವರು ಯಾರು?—ಲಾಭಕ್ಕಾಗಿ ಹಾತೊರೆಯುವ ಬಂಡವಲುಗಾರ ವ್ಯಕ್ತಿಗಳೋ, ಧಾರಾಳವಾದ ಬದುಕಿಗಾಗಿ ಹಾತೊರೆಯುವ ದೀನ ದಲಿತರೋ,? ಈ ಎಲ್ಲ ಉದ್ಯೋಗಗಳು ಜನತೆಯ, ಎಂದರೆ ಸರಕಾರದ ಹಿಡಿತದಲ್ಲಿರಬೇಕೆಂದೂ ಜನತೆಯ ಕಲ್ಯಾಣಕ್ಕಾಗಿ ಸರಕಾರವೇ ಅವುಗಳ ಆಡಳಿತ ನಡೆಸಬೇಕೆಂದೂ ಕುಮಾರಪ್ಪನವರು ನಿಸ್ಸಂದಿಗ್ಧವಾಗಿ ಹೇಳಿರುವುದು ತುಂಬ ಸಂತೋಷದ ಸಂಗತಿ. ಅವರು ಈ ನಿರ್ಣಯಕ್ಕೆ ಬಂದ ಕಾರಣಗಳಂತೂ ಸ್ಪಷ್ಟವೇ ಇವೆ. ಅವಶ್ಯವಿದ್ದ ದೊಡ್ಡ ಪ್ರಮಾಣದ ಉದ್ಯೋಗಗಳು ಬಂಡವಲುಗಾರರ ಕೈಯಲ್ಲಿದ್ದರೆ ಬಡತನ ಮತ್ತು ಸುಲಿಗೆ ಶಾಶ್ವತವಾಗುವುದರಲ್ಲಿ ಸಂದೇಹವಿಲ್ಲ. ಇಷ್ಟೇ ಅಲ್ಲ, ಬಂಡವಲುಗಾರರು ಶಕ್ತಿಸಂಪನ್ನರಾಗಿ ಹಳ್ಳಿಗಳ ಸಣ್ಣ ಪುಟ್ಟ ಕೈಗಾರಿಕೆಗಳನ್ನು ಸದೆಬಡಿಯುವುದಲ್ಲದೆ ಅಧಿಕಾರಸೂತ್ರವನ್ನು ತಾವೇ ಹಿಡಿದುಕೊಳ್ಳುವರು.

## ಹಳ್ಳಿಯ ಆರ್ಥಿಕ ವ್ಯವಸ್ಥೆ

ಸ್ವಯಂಪೂರ್ಣವಾದ ಹಳ್ಳಿಗಳ ಆರ್ಥಿಕ ವ್ಯವಸ್ಥೆ ಎಷ್ಟೇ ರಮ್ಯವೆನಿಸಿದರೂ ಅವ್ಯವಹಾರ್ಯವಾದುದು ಮಾತ್ರವಲ್ಲ, ರಾಜಕೀಯ ಜೀವನ ಸಮತೆಗೆ ಅಪಾಯಕಾರಿಯೂ ಆಗಿರುವುದರಿಂದ ಅದನ್ನು ರಾಜಕೀಯ ಪುನರ್ರಚನೆಯ ತಳಹದಿಯೆಂದು ತಿಳಿಯಕೂಡದು ಇತಿಹಾಸದಲ್ಲಿ ಮೊದಲಿನಿಂದ ಕೊನೆಯವರೆಗೆ ಕಂಡುಬರುವ ಭಾರತದ ರಾಜಕೀಯ ಅನೈಕ್ಯ ಇದಕ್ಕೆ ನಿದರ್ಶನವಾಗಿದೆ. ಹಳ್ಳಿಗಳ ಸ್ವಯಂಪೂರ್ಣ ಆರ್ಥಿಕ ವ್ಯವಸ್ಥೆಯು ಮೂಲತಃ

ಸಾಂಸ್ಕೃತಿಕ ಒಕ್ಕಟ್ಟು ಉಂಟಾದದ್ದು ನಿಜವಾದರೂ ಭಾರತದ ಇತಿಹಾಸದಲ್ಲಿ ಮೊದಲಿನಿಂದ ಕೊನೆಯವರೆಗೆ ರಾಜಕೀಯ ಅನೈಕ್ಯ ಬೆಳೆದದ್ದೂ ಗಮನ ದಲ್ಲಿಡಬೇಕಾದ ಮಾತು. ಒಂದು ರಾಷ್ಟ್ರವು ಐಕ್ಯದಿಂದಿರಬೇಕಾದರೆ ಹಳ್ಳಿ ಗಳು ಎಷ್ಟು ದೂರದಲ್ಲಿಯೇ ಇರಲಿ, ಅವುಗಳ ರಾಜಕೀಯ ಆರ್ಥಿಕ ಮತ್ತು ಸಾಂಸ್ಕೃತಿಕ ಜೀವನದ ಸೂತ್ರಗಳೆಲ್ಲ ಒಂದಡೆಯಲ್ಲಿ ಕೇಂದ್ರೀಕೃತವಾಗುವುದು ಅವಶ್ಯ.

ನಮ್ಮ ಸಮಸ್ಯೆಗಳಿಗೆ ಮೂರನೆಯ ಒಂದು ಪರಿಹಾರವೂ ಮುಂದೆ ಬಂದಿದೆ. ಇದನ್ನು ಸೂಚಿಸಿದವರು ಸತ್ಯ ಮತ್ತು ಅಹಿಂಸೆಯು ಎಲ್ಲವನ್ನೂ ಪರಿಹರಿಸುವುದೆಂದು ಹೇಳುತ್ತಾರೆ ವಾದಕ್ಕಾಗಿ ಇದನ್ನು ಒಪ್ಪಿಕೊಂಡರೂ ಎಷ್ಟರ ಮಟ್ಟಿಗೆ ಇದು ಸಾಧ್ಯವೆಂಬುದನ್ನು ನೋಡಬೇಕಲ್ಲವೆ ? ಸತ್ಯ ಅಹಿಂಸೆ ಗಳೆಂದರೆ ಪವಾಡಗಳನ್ನು ಮಾಡಬಲ್ಲ ಮಂತ್ರಗಳಲ್ಲ; ಅವು ಸಮಾಜದ ರೀತಿ ಸೂತ್ರಗಳು. ಅಹಿಂಸೆಯು ದಾರಿದ್ರ್ಯವನ್ನು ನಿರ್ಮೂಲನಗೊಳಿಸುವುದು ಎಂಬುದು, ಎಂತು ನಿರ್ಮೂಲನಗೊಳಿಸುವುದು ಎಂಬ ಪ್ರಶ್ನೆಗೆ ಉತ್ತರವಲ್ಲ. ಆದರೂ ಸತ್ಯ ಅಹಿಂಸೆಗಳನ್ನು ಪ್ರತಿಪಾದಿಸುತ್ತಿರುವ ಮತ್ತು ಅದರಂತೆ ನಡೆಯುದಿರುವ ಜನ ಈ ಪ್ರಶ್ನೆಗೆ ಉತ್ತರಿಸುವ ರೀತಿ ಮಾತ್ರ ಇದೇ. ಜಮೀನು ದಾರಿಯ ಮತ್ತು ಬಂಡವಲುಗಾರಿಕೆಯ ನಿರ್ಮೂಲನದ ಪ್ರಶ್ನೆ ಮುಂದೆ ಬಂದಾಗ, ನಿರ್ಮೂಲನದ ಮಾತನ್ನೆತ್ತುವುದು ಅಹಿಂಸಾ ತತ್ವಕ್ಕೆ ವಿರುದ್ಧ ವಾದುದೆಂದು ನಮ್ಮನ್ನು ಎಚ್ಚರಿಸುತ್ತಿದ್ದಾರೆ. ಜಮೀನುದಾರರೂ ಬಂಡ ವಲುಗಾರರೂ ಒಕ್ಕಲಿಗ ಮತ್ತು ಕೂಲಿಕಾರರೊಂದಿಗೆ ಅಕ್ಕಪಕ್ಕದಲ್ಲಿರಬಲ್ಲ ರೆಂದೂ, ಮತ್ತು ಬಡವರೂ ಸಿರಿವಂತರೂ ಸುಖವಾಗಿ ಬಾಳಬಲ್ಲರೆಂದೂ ಇವರ ಹೇಳಿಕೆ. ಇಂಥ ಜನ ಗಾಂಧೀವಾದವನ್ನು ಸುಲಿಗೆಯ ಸಾಧನ ವನ್ನಾಗಿಯಾದರೂ ಬಳಸಿಕೊಂಡಿರಬೇಕು—ಇಲ್ಲವೇ ಯೋಚಿಸುವ ಗೋಜನ್ನೇ ಬಿಟ್ಟಿರಬೇಕು.

## ಗಾಂಧೀಜಿಯ ಧೋರಣೆ

ಗಾ ಈ ವಿಷಯದಲ್ಲಿ ಗಾಂಧೀವಾದವನ್ನು ಬಲ್ಲವರಾದ ಪ್ರೊ. ಕುಮಾರಪ್ಪ ನವರ ಅಭಿಪ್ರಾಯವನ್ನು ಈಗಾಗಲೇ ಕೊಡಲಾಗಿದೆ. ಈ ಸಮಸ್ಯೆಗಳ

ವಿಷಯದಲ್ಲಿ ಗಾಂಧೀಜಿಯ ಧೋರಣೆ ಸ್ಪಷ್ಟವೇ ಇದೆ. ಗಾಂಧೀಜಿ ಬಂಡವಲುಗಾರಿಕೆಯನ್ನು ತಿರಸ್ಕರಿಸಿದ್ದಾರೆ. ಸಾಮಾಜಿಕ ಒಡೆತನದ ವಿಷಯದಲ್ಲಿ ಅವರ ಅಭಿಪ್ರಾಯ ಅನುಕೂಲವಾದುದು. ದೊಡ್ಡ ಪ್ರಮಾಣದ ಉದ್ಯೋಗಗಳಲ್ಲಿ ವೈಯಕ್ತಿಕ ಲಾಭಕ್ಕೆ ಅವರ ಸಮ್ಮತಿ ಇಲ್ಲ—ಮತ್ತು ಈ ಉದ್ಯೋಗಗಳ ಸಮಾಜ ಸ್ವಾಮ್ಯವನ್ನು ಒಪ್ಪಿಕೊಂಡಿದ್ದಾರೆ. ಜಯಪ್ರಕಾಶರು ಒಂದು ಗೊತ್ತುವಳಿಯಲ್ಲಿ ಸ್ವತಂತ್ರ ಭಾರತದ ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ಮೂಲ ತತ್ವಗಳನ್ನು ವಿವರಿಸಿದ್ದಾರೆ. ಗಾಂಧೀಜಿಯವರು ಈ ವಿವರಣೆಗೆ ಒಂದು ಟಿಪ್ಪಣಿಯನ್ನು ಬರೆದಿದ್ದಾರೆ. ಮೇಲಿನ ಸಮಸ್ಯೆಗಳ ಬಗೆಗೆ ಗಾಂಧೀಜಿಯವರ ಸ್ಪಷ್ಟವಾದ ಅಭಿಪ್ರಾಯ ಈ ಟಿಪ್ಪಣಿಯಲ್ಲಿದೆ. ಓದುಗರು ಅದನ್ನು ಓದಿ ಅದರ ಮಹತ್ವವನ್ನು ಕುರಿತು ಯೋಚಿಸಬೇಕು. ಹಡಗುಪಡೆ, ಕಣಿ ಮತ್ತು ದೊಡ್ಡ ಕೈಗಾರಿಕೆಗಳ ರಾಷ್ಟ್ರೀಕರಣ, ಜಮೀನುದಾರಿಯ ನಿರ್ಮೂಲನ, ಹೊಲಗಳ ಹಂಚಿಕೆ, ಮುಂತಾದ ಅತ್ಯುಗ್ರವೆನಿಸಬಹುದಾದ ಕಾರ್ಯಕ್ರಮಗಳಿಗೆ ಗಾಂಧೀಜಿ ತಮ್ಮ ಒಪ್ಪಿಗೆಯ ಮುದ್ರೆಯನ್ನೊತ್ತಿದ್ದಾರೆ. ಹೊಲಗಳ ಹಂಚಿಕೆಯೆಂದರೆ ಪ್ರತಿಯೊಬ್ಬ ಒಕ್ಕಲಿಗನಿಗೆ ಜೀವನಕ್ಕೆ ಅಗತ್ಯವಿದ್ದ ಹೊಲ-ಗದ್ದೆಗಳನ್ನು ಮಾತ್ರ ಕೊಡುವುದು. ತಾವು ಕಡು ಗಾಂಧೀವಾದಿಗಳೆಂಬು ಎಷ್ಟೋ ಜನರು ಹೆಮ್ಮೆಪಡುತ್ತಾರೆ. ಎಂದ ಮೇಲೆ ಜಯಪ್ರಕಾಶರ ಗೊತ್ತುವಳಿಯುಲ್ಲಿ ವಿವರಿಸಲಾದ ಮತ್ತು ಗಾಂಧೀಜಿಯ ಒಪ್ಪಿಗೆ ಪಡೆದ ಈ ವಿಚಾರಗಳಿಗೆ ಮನ್ನಣೆ ಕೊಡುವುದು ಅವರ ಕರ್ತವ್ಯವಲ್ಲವೆ? ಅವರು ಹಾಗೆ ಮಾಡಿದರೆ ಕಾಂಗ್ರೆಸ್ಸಿನ ಇತಿಹಾಸದಲ್ಲಿ ಒಂದು ಹೊಸ ಅಧ್ಯಾಯವು ಮೊದಲಾಯಿತೆನ್ನಬಹುದು.

## ಸಾಮ್ಯವಾದೀ ತಳಹದಿ

ಇದನ್ನು ಕಾರ್ಯರೂಪಕ್ಕೆ ತರುವಾಗ ಅವಸರದಿಂದ ದುಡುಕಬಾರದು ಎಂದು ಗಾಂಧೀಜಿ ಎಚ್ಚರಿಸಿದ್ದಾರೆ ಜಯಪ್ರಕಾಶರ ಸಾಮ್ಯವಾದೀ ಕಾರ್ಯಕ್ರಮವನ್ನು ವಿರೋಧಿಸುವವರಿಗೆ ಈ ಒಂದು ಮಾತಿನ ಮರೆಯಲ್ಲಿ ಆಶ್ರಯ ಸಿಗುವಂತಿದೆ. ಯಾವುದೊಂದು ಯೋಜನೆಯನ್ನು ಬಳಕೆಗೆ ತರುವ ವೇಗದ ಬಗೆಗೆ ಕಾದಾಡುವದಕ್ಕಿಂತ ಮೊದಲು ಆ ಯೋಜನೆ ಮಾನ್ಯವೋ ಹೇಗೆಂಬು

ದನ್ನು ಮೊದಲು ನಿರ್ಣಯಿಸೋಣ ವೇಗದ ವಿಷಯದಲ್ಲಿ ಹೆಚ್ಚಿಗೆ ಹೇಳುವುದೇನೂ ಉಳಿದಿಲ್ಲ. ವೈಯಕ್ತಿಕ ಲಾಭವನ್ನೂ ಆರ್ಥಿಕ ಹಕ್ಕುಗಳನ್ನೂ ತಾವಾಗಿಯೇ ಬಿಟ್ಟುಕೊಡುವಂತೆ ಜನರ ಮನವೊಲಿಸುವುದು ಕಷ್ಟಸಾಧ್ಯ ಇದಲ್ಲದೆ ಪ್ರತ್ಯಕ್ಷ ಕಾರ್ಯಾಚರಣೆಗಿಂತ ಮೊದಲು ಇಂಥ ಒಪ್ಪಿಗೆ ದೊರೆಯುವುದೂ ಸಾಧ್ಯವಿಲ್ಲ. ಈಗ ನಾವು ಚರ್ಚಿಸುತ್ತಿರುವ ವಿಷಯವೆಲ್ಲ ಕಾಂಗ್ರೆಸ್ಸು ಅಧಿಕಾರಕ್ಕೆ ಬಂದರೆ ಮಾತ್ರ ಸಾಧ್ಯವೆಂಬುದನ್ನು ಎಂದಿಗೂ ಮರೆಯಕೂಡದು. ಕಾಂಗ್ರೆಸ್ಸು ಅಧಿಕಾರ ಸ್ವೀಕರಿಸಿದೊಡನೆ ಮೊಟ್ಟಮೊದಲು ರಾಷ್ಟ್ರದ ಪುನರ್ ರಚನೆಗೆ ಕೈಹಾಕಬೇಕು ಪುನರ್‌ರಚನೆ ಒಮ್ಮೆಲೇ ಸಾಧ್ಯವಿಲ್ಲದಿದ್ದರೂ ಅವಸರವು ಗಂಡಾಂತರದ್ದಾದರೂ, ನೆಲಗಟ್ಟನ್ನು ಕಟ್ಟಬೇಕಾದುದು ಅತ್ಯಗತ್ಯ. ಇಲ್ಲದಿದ್ದರೆ ಕಟ್ಟಡವು ಏಳುವುದು ಸಾಧ್ಯವಿಲ್ಲ. ಬಂಡವಲುಗಾರರಿಗಾಗಿ ನಮ್ಮ ಕೆಲಸ ನಿಲ್ಲಬಾರದು—ಇಲ್ಲವೇ ಅವರ ತೃಪ್ತಿಗಾಗಿ ನಾವು ಕಾಲಹರಣವನ್ನೂ ಮಾಡಬಾರದು. ಅವರ ಮನವೊಲಿಸುವುದು ಎಷ್ಟರಮಟ್ಟಿಗೆ ಸಾಧ್ಯವೆಂಬುದನ್ನು ನಾನು ಹೇಳಲಾರೆ. ಕಾಂಗ್ರೆಸ್ ಮಂತ್ರಿಮಂಡಲಗಳ ಅನುಭವವನ್ನೇ ನೋಡೋಣ. ಸಂಬಂಧಿಸಿದವರು ವಿರೋಧಿಸಿದರೂ ಮುಂಬೈ ಮಂತ್ರಿಮಂಡಲವು ಮದ್ಯಪ್ರತಿಬಂಧ ಯೋಜನೆಯನ್ನು ಬಿಟ್ಟುಬಿಟ್ಟಿತೆ? ಇಲ್ಲವೇ ಹೆಂಡದ ವ್ಯಾಪಾರಿಗಳು ಒಪ್ಪಿಗೆ ಕೊಡುವವರೆಗೆ ಮಂತ್ರಿಮಂಡಲವು ಈ ಯೋಜನೆಯನ್ನು ತಡೆ ಹಿಡಿಯಬೇಕಾಗಿದ್ದಿತೆ? ಅಹಿಂಸೆಯಲ್ಲಿ ವಿಶ್ವಾಸವಿದ್ದವರು ಯಾರೂ ಹೀಗೆ ಹೇಳಲಾರರು. ಅದರಂತೆ, ಮದ್ರಾಸ್ ಮಂತ್ರಿಮಂಡಲವು ಸಾಹುಕಾರರ ಒಪ್ಪಿಗೆ ಪಡೆದೇ ಋಣ ವಿಮೋಚನೆ ಕಟ್ಟಳೆಯನ್ನು ಮಾಡುವುದು ಸಾಧ್ಯವಿದ್ದಿತೆ? ಜಮೀನುದಾರರ ವಿರೋಧಕ್ಕಾಗಿ ಬಿಹಾರ್ ಮಂತ್ರಿಮಂಡಲವು ಹೊಲದ ಉತ್ಪನ್ನ ತೆರಿಗೆಯನ್ನು ಎತ್ತಬಾರದಾಗಿದ್ದಿತೆ? ಸರಕಾರವು ಜನತೆಯಿಂದ ಪಡೆದುಕೊಂಡ ತನ್ನ ಅಧಿಕಾರವನ್ನು ಜನತೆಯ ಕಲ್ಯಾಣಕ್ಕಾಗಿ ಉಪಯೋಗಿಸಬೇಕೆಂದೂ ವಿರೋಧಿಗಳನ್ನು ಲೆಕ್ಕಿಸಬಾರದೆಂದೂ ಈ ಸಂಗತಿಗಳಿಂದ ಸ್ಪಷ್ಟವಾಗುತ್ತದೆ. ಶ್ರೀ ಜಯಪ್ರಕಾಶರು ಸೂಚಿಸಿದ ಯೋಜನೆಯನ್ನಾಗಲಿ, ಅಥವಾ ಇಂತಹ ಬೇರೆ ಯೋಜನೆಯನ್ನಾಗಲಿ ಕಾರ್ಯರೂಪಕ್ಕೆ ತಂದರೆ ಕಾಂಗ್ರೆಸ್ಸಿಗೆ ಸಂಪೂರ್ಣ ಬೆಂಬಲ ಸಿಗುವುದರಲ್ಲಿ ಸಂದೇಹವಿದೆಯೆ? ಕಾಂಗ್ರೆಸ್ಸು ಇಂಥ ಯೋಜನೆಯನ್ನು

ಕೈಕೊಳ್ಳಲು ಹಿಂದೆ ಮುಂದೆ ನೋಡಿದರೆ ಅದು ಜನತೆಯ ದ್ರೋಹ ಬಗೆದ ಅಪರಾಧಕ್ಕೆ ಗುರಿಯಾಗಬೇಕಾದೀತು.

ಘಟನಾ ಸಮಿತಿಯ ಹೊಸ್ತಿಲಲ್ಲಿ ನಿಂತ ನಾವು ಇಂದು ಎತ್ತ ಸಾಗಿದ್ದೇವೆಂಬುದನ್ನೂ, ಜನತೆ ನಮ್ಮನ್ನು ಯಾವಾಗ ಹಿಂಬಾಲಿಸಬೇಕಾದೀತೆಂಬುದನ್ನೂ ಅವರಿಗೆ ತಿಳಿಸಿ ಹೇಳಬೇಕು. ಸವಿನಯ ಕಾಯಿದೆ ಭಂಗವನ್ನು ಆರಂಭಿಸುವ ಮೊದಲು ಅಂತಿಮ ನಿರ್ಣಯಕ್ಕಾಗಿ ಅಖಿಲ ಭಾರತ ಕಾಂಗ್ರೆಸ್ ಸಮಿತಿಯನ್ನು ಕರೆಯಬಹುದು. ನಮ್ಮ ಗೊತ್ತುಗುರಿಗಳನ್ನು ಅವರ ಮುಂದಿಡಲು ಅಂದೊಂದು ಸುಸಂಧಿ. ಜಯಪ್ರಕಾಶರ ಸೂಚನೆಗಳು ಗಾಂಧೀಜಿಯವರ ಒಪ್ಪಿಗೆ ಪಡೆದಿದ್ದರಿಂದ ಆ ಘೋಷಣೆಗೆ ಅವು ತಳಹದಿಯಾಗಬಹುದು. ಗಾಂಧೀಜಿಯ ಮುಂದಾಳುತನದಲ್ಲಿ ಹೆಮ್ಮೆ ಪಟ್ಟುಕೊಳ್ಳುವ ನಮ್ಮ ಕಾಂಗ್ರೆಸ್ ನಾಯಕರು ಈ ವಿಷಯದಲ್ಲಿ ಅವರನ್ನು ಹಿಂಬಾಲಿಸುವರೋ?

[ ಇದರ ಬಗೆಗೆ ಗಾಂಧೀಜಿಯವರ ಅಭಿಪ್ರಾಯವನ್ನು ಪರಿಶಿಷ್ಟದಲ್ಲಿ ನೋಡಬಹುದು. ]

# ಭಾರತದಲ್ಲಿ ಸಾಮ್ಯವಾದೀ ಸಂಘಟನೆಯ ಸಮಸ್ಯೆಗಳು

[ಈ ಪ್ರಕರಣ ಮೊಟ್ಟ ಮೊದಲು ೧೯೪೧ನೆಯ ಎಪ್ರಿಲ್ ೩೦ರಲ್ಲಿ ಪ್ರಕಟವಾಯಿತು. ಆ ಪ್ರಕಟನೆಯ ಮುನ್ನುಡಿಯಲ್ಲಿ ಶ್ರೀ. ಪುರುಷೋತ್ತಮ ತ್ರಿಕಮದಾಸರು ಹೀಗೆ ಬರೆದಿದ್ದಾರೆ: —

**ಶ್ರೀ ಜಯಪ್ರಕಾಶರು, ಸಾಮ್ಯವಾದಿಗಳ ಸಂಘಟನೆಗಾಗಿ ನಮ್ಮ ಪಕ್ಷವು ಮಾಡಿದ ಪ್ರಯತ್ನವನ್ನೂ ಅದರ ಸೋಲಿಗೆ ಉಂಟಾದ ಕಾರಣಗಳನ್ನೂ ಇಲ್ಲಿ ತಿಳಿಯಾದ, ಅಪ್ರತಿಮವಾದ ಶೈಲಿಯಲ್ಲಿ ಬರೆದಿದ್ದಾರೆ ಎಷ್ಟೋ ಕಡೆಯಲ್ಲಿ ಅವರು ಸ್ವಾಭಾವಿಕ ಉದಾರತೆ ಮತ್ತು ತಾಳ್ಮೆಯ ಫಲವಾಗಿ ಹೇಳಬೇಕಾದುದನ್ನು ಕಡಿಮೆಯಾಗಿಯೇ ಹೇಳಿದ್ದಾರೆ. ಮತ್ತು ಕೆಲವೆಡೆಗಳಲ್ಲಿ ಪಕ್ಷದ ಕಾರ್ಯಕಾರೀ ಮಂಡಲವು ಸ್ವೀಕರಿಸಿದ ಧೋರಣೆಯ ಹೊಣೆಯನ್ನು ಸ್ವತಃ ತಮ್ಮ ಮೇಲೆ ತೆಗೆದುಕೊಂಡಿದ್ದಾರೆ.**

*　　*　　*　　*　　*

[ ‘ ಇಂತಹ ಪ್ರಯೋಗವನ್ನು ಮಾಡಿದ್ದಕ್ಕಾಗಿ ನಮಗೆ ವಿಷಾದವಿಲ್ಲ ಆಗಿನ ವಿಷಾದದ ಹಲವು ಅನುಭವಗಳನ್ನು ನೆನೆಸಿಕೊಂಡರೆ ಈ ಪ್ರಯತ್ನ ವ್ಯರ್ಥವಾದದ್ದಕ್ಕಾಗಿಯೂ ನಮಗೆ ದುಃಖವಿಲ್ಲ. ಕಮ್ಯುನಿಷ್ಟರನ್ನು ನಮ್ಮೊಳಗೆ ಸೇರಿಸಿಕೊಂಡಂದಿನಿಂದ ಮಿತಿಯಿಲ್ಲದಷ್ಟು ವಾದವಿವಾದಗಳು ತಲೆಯೆತ್ತಿದುವು. ನಮ್ಮಲ್ಲಿ ಒಡಕು ತೊಡಕುಗಳನ್ನು ಹುಟ್ಟಿಸಲು ಅವರು ಮಾಡಿದ ಪ್ರಯತ್ನಗಳನ್ನು ಕಂಡೂ ಕಾಣದವರಂತೆ ಸುಮ್ಮನಿದ್ದೆವು. ಅದು ಹೇಗೂ ಇರಲಿ. ಈ ಪ್ರಯೋಗದಿಂದ ನಿಶ್ಚಯವಾಗಿಯೂ ಒಂದು ಒಳ್ಳೆಯ ಪರಿಣಾಮವಾಗಿದೆ. ಈ ಪ್ರಯೋಗವನ್ನು ಕೈಕೊಂಡಿರದಿದ್ದರೆ ನಮ್ಮ ಮನಸ್ಸಿನಲ್ಲಿ ಉಂಟಾಗಬಹುದಾದ ತಳಮಳವು ಇಂದು ಇಲ್ಲ. ಇದಕ್ಕಾಗಿ ಕೆಲವು ಅಮೌಲ್ಯ ವರುಷಗಳನ್ನು ಹಾಳು ಮಾಡಿಕೊಂಡಿದ್ದೇನೋ ನಿಜ. ಆದರೂ ನಾವು ಈ ಪ್ರಯತ್ನದಿಂದ ತೃಪ್ತರಾಗಿ ನಮ್ಮ ಮುಂದಿರುವ ಮಹತ್ಕಾರ್ಯಕ್ಕೆ ಅಣಿಯಾಗಿದ್ದೇವೆ. ಅದೊಂದು ಕೆಟ್ಟ ಕನಸಾಗಿದ್ದಿತು ಅದನ್ನು ಸಂಪೂರ್ಣವಾಗಿ ಮರೆತು ನಮ್ಮ ಕಾರ್ಯವನ್ನು ಮುಂದುವರಿಸುವಾ ]

೧೯೩೪ರಲ್ಲಿ ಸವಿನಯ ಕಾಯಿದೇ ಭಂಗವು ಕೊನೆಗೊಂಡ ಮೇಲೆ, ಸಾಮ್ಯವಾದದ ಆಂದೋಲನವು ಆರೇಳು ವರುಷಗಳಲ್ಲಿ ಬಹಳ ಬೇಗ ಹಬ್ಬಿ

ಕೊಂಡಿತು ಈ ಉತ್ಕರ್ಷದ ಕತೆಯೇ ಕಾಂಗ್ರೆಸ್ ಸಾಮ್ಯವಾದೀ ಪಕ್ಷದ ಇತಿಹಾಸ.

೧೯೩೪ ರಲ್ಲಿ ಸತ್ಯಾಗ್ರಹವನ್ನು ಉಪಸಂಹರಿಸಿದಾಗ, ಎಂದರೆ ನಮ್ಮ ಪಕ್ಷದ ಸ್ಥಾಪನೆಗಿಂತ ಮೊದಲು ಭಾರತದ ರಾಜಕೀಯದಲ್ಲಿ ಸಾಮ್ಯವಾದದ ಹೆಸರೂ ಇದ್ದಿಲ್ಲವೆಂದರೆ ತಪ್ಪಲ್ಲ. ಮೀರತ್ ರಾಜದ್ರೋಹದ ಕಟ್ಲೆಳೆ (ಖಟ್ಲೆ) ಯ ಕಾಲದಲ್ಲಿ ಕೊಂಚ ಮಟ್ಟಿಗೆ ಸಾಮ್ಯವಾದದ ಪ್ರಚಾರವಾಗಿತ್ತು. ಆದರೆ ಈ ದೇಶದ ರಾಜಕೀಯ ಜೀವನದಲ್ಲಿ ಅದರ ಪ್ರಭಾವ ಕಂಡುಬಂದಿರಲಿಲ್ಲ; ಮತ್ತು ಅದು ಅನ್ಯದೇಶದಿಂದ ಆಯಾತವಾದ ವಸ್ತುವೆಂದು ಜನರು ಭಾವಿಸಿದ್ದರು. ಶ್ರೀ ಎಂ. ಎನ್. ರಾಯರು ೧೯೩೧ ರಲ್ಲಿ ಭಾರತಕ್ಕೆ ಗುಪ್ತವಾಗಿ ಮರಳಿ ತಮ್ಮದೊಂದು ಪಂಗಡವನ್ನು ಕಟ್ಟಿಕೊಂಡಿದ್ದರು ಈ ಪಂಗಡವು ಕೂಡ ಅಜ್ಞಾತವಾಗಿಯೇ ಉಳಿದು ಭಾರತದ ರಾಜಕೀಯದಲ್ಲಿ ಎಳ್ಳಷ್ಟೂ ಕಾರ್ಯ ಮಾಡಲು ಸಾಧ್ಯವಾಗಲಿಲ್ಲವೆನ್ನಬಹುದು. ವೈಯಕ್ತಿಕವಾಗಿ ಕ್ರಾಂತಿಕಾರೀ ಮುಂದಾಳುಗಳಾದ ಪಂ. ನೆಹರೂ ಮತ್ತು ಸುಭಾಸ್ ಬೋಸರು ತಮ್ಮ ಭಾಷಣಗಳಿಂದ ಮಧ್ಯಮ ವರ್ಗದ ಅನೇಕ ಸುಶಿಕ್ಷಿತರಲ್ಲಿ ಸಾಮ್ಯವಾದೀ ವಿಚಾರಗಳನ್ನು ಬಿತ್ತಿದ್ದರು. ಆದರೆ ಇದರಿಂದ ಹೇಳಿಕೊಳ್ಳುವಂತಹ ಸಂಘಟಿತ ಆಂದೋಲನವೇನೂ ಆಗಿರಲಿಲ್ಲ. ಆದ್ದರಿಂದ ಕಾಂಗ್ರೆಸ್ ಸಾಮ್ಯವಾದೀ ಪಕ್ಷವು ೧೯೩೪ ರಲ್ಲಿ ಭಾರತದ ರಾಜಕೀಯ ಭೂಪಟದಲ್ಲಿ ತನ್ನ ಸ್ಥಾನವನ್ನು ಆಕ್ರಮಿಸಿ ಬರಿಯ ಆರೇಳು ವರುಷಗಳಲ್ಲಿ ವಿಶೇಷವಾದ ಪ್ರಭಾವವನ್ನು ಬೆಳೆಸಿಕೊಂಡಿತೆಂಬುದು ಅತಿಶಯೋಕ್ತಿಯ ಮಾತಲ್ಲ.

ಸಾಮ್ಯವಾದೀ ಆಂದೋಲನದ ಈ ಆರು ವರುಷಗಳಲ್ಲಿ ತುಂಬ ಅನುಭವವೂ ಎಣಿಕೆಯಿಲ್ಲದಷ್ಟು ಕಷ್ಟಗಳೂ ಬಂದಿವೆ. ನಮ್ಮ ಪಕ್ಷವು ಎದುರಿಸಬೇಕಾದ ಅನೇಕ ಕಷ್ಟಗಳಲ್ಲಿ ಒಂದನ್ನು ಮಾತ್ರ ಇಲ್ಲಿ ಚರ್ಚಿಸುತ್ತೇನೆ. ಸಾಮ್ಯವಾದೀ ಆಂದೋಲನಕ್ಕೆ 'ಸಾಮ್ಯವಾದೀ ಸಂಘಟನೆ'ಯಷ್ಟು ಮಹತ್ವದ ಗುರಿ ಇನ್ನೊಂದಿಲ್ಲ. ಸಂಘಟನೆಯನ್ನು ಸಾಧಿಸುವಾಗ ಬಂದ ಸಮಸ್ಯೆಗಳನ್ನು ಅರಿತುಕೊಂಡು ಮುಂದಿನ ದಾರಿಯನ್ನು ಸುಗಮವಾಗಿಟ್ಟುಕೊಳ್ಳುವುದು ಇಂದಿಗೆ ಅತ್ಯಂತ ಅವಶ್ಯವಾದ ಮಾತು. ಈ ವಿಷಯವು ಜನಸಾಮಾನ್ಯರಿಗೆ ಸ್ವಲ್ಪ ಮಟ್ಟಿಗೆ ಮಾತ್ರ ಸಂಬಂಧಿಸಿದ್ದರೂ ಸಾಮ್ಯವಾದೀ ಪಕ್ಷದ

ಸದಸ್ಯರಾದ ನಮಗೆ ಇದು ಜೀವಾಳದ ಪ್ರಶ್ನೆ. ತಕ್ಕಷ್ಟು ಪ್ರಚುರವಾಗಿರುವ ಈ ಸಂಗತಿಗಳನ್ನು ಕುರಿತು ಅಧಿಕೃತವಾದ ಒಂದೂ ಪ್ರಕಟನೆ ಹೊರಟಿರುವುದಿಲ್ಲ ಮಾತ್ರವಲ್ಲ, ನಮ್ಮ ಪಕ್ಷದ ವಿರೋಧಿಗಳು ಸತ್ಯಸಂಗತಿಗಳನ್ನು ಬಚ್ಚಿಟ್ಟು ಬೇಕಾದಂತೆ ಅಪಪ್ರಚಾರ ನಡೆಸಿದ್ದಾರೆ. ಆಮದರಿಂದ ನಮ್ಮ ಪಕ್ಷದ ಸದಸ್ಯರಿಗೂ ಹಿತಚಿಂತಕರಿಗೂ ಸರಿಯಾದ ತಿಳುವಳಿಕೆಯನ್ನು ಕೊಡುವುದರ ಜೊತೆಗೆ ಮಾರ್ಗದರ್ಶನವನ್ನೂ ಮಾಡಬಹುದೆಂಬ ದೃಷ್ಟಿಯಿಂದ ಈ ಪುಸ್ತಕವನ್ನು ಪ್ರಕಟಿಸಲಾಗಿದೆ. ಇದರ ಕಿಂಚಿತ್ ಲಾಭವನ್ನು ಜನಸಾಮಾನ್ಯರು ಕೂಡ ಪಡೆಯಬಹುದು.

'ಸಾಮ್ಯವಾದೀ ಸಂಘಟನೆ'ಯೆಂದರೆ ಸರಿಯಾದ ತಿಳುವಳಿಕೆಯಾಗಲಾರದು. ತಮ್ಮಷ್ಟಕ್ಕೆ ತಾವೇ ಸಾಮ್ಯವಾದಿಗಳೆಂದು ಹೇಳಿಕೊಳ್ಳುವವರ ಸಂಘಟನೆಯೆಂದು ಇದರ ಅರ್ಥವೊ? ಸಂಘಟನೆಯೆಂದರೆ ಅರ್ಥವೇನು? ಅದರ ಅರ್ಥ ಐಕ್ಯವೆಂದಾದರೆ ಧ್ಯೇಯ ಧೋರಣಗಳಲ್ಲಿ ಐಕ್ಯವೊ, ಸಂಘಟನೆಯಲ್ಲಿ ಐಕ್ಯವೊ? ಸಾಮ್ಯವಾದಿಗಳೆಂದು ಹೇಳಿಕೊಳ್ಳುವವರಲ್ಲಿ ಅನೇಕ ಪ್ರಕಾರದವರಿದ್ದಾರೆ. ಸಾಮ್ಯವಾದಿಗಳೆಂದು ಜಂಬ ಕೊಚ್ಚಿಕೊಳ್ಳುವವರು ಉದಾರಮತವಾದಿಗಳಲ್ಲಿ ಕೂಡ ಇದ್ದಾರೆ. ಗಾಂಧೀಜಿ ತಾನೂ ಒಬ್ಬ ಸಾಮ್ಯವಾದಿಯೆಂದು ಹೇಳಿಕೊಳ್ಳುತ್ತಾರೆ. ಕಾಂಗ್ರೆಸ್ ಸಾಮ್ಯವಾದೀ ಪಕ್ಷದಂತೆ, ನಿಜವಾದ ಸಾಮ್ಯವಾದವೆಂದರೆ ಮಾರ್ಕ್ಸ್‌ವಾದವೆಂದು ತಿಳಿಯುವವರು ಇನ್ನೂ ಅನೇಕರಿದ್ದಾರೆ. ಮಾರ್ಕ್ಸ್‌ವಾದವನ್ನು ತಮ್ಮ ಗುರಿಯನ್ನಾಗಿ ಮಾಡಿಕೊಂಡ ಬೇರೆ ಬೇರೆ ಗುಂಪುಗಳನ್ನೂ ವ್ಯಕ್ತಿಗಳನ್ನೂ ಹೇಗೆ ಒಂದುಗೂಡಿಸುವುದೆಂಬುದನ್ನೇ ಇಲ್ಲಿ ಚರ್ಚಿಸಲಾಗಿದೆ.

ಸಾಮ್ಯವಾದೀ ಪಕ್ಷವು ಸ್ಥಾಪಿತವಾದೊಡನೆ ಈ ಪ್ರಶ್ನೆ ಹೇಗೆ ಉದ್ಭೂತವಾಯಿತೆಂಬುದನ್ನು ನೋಡೋಣ. ಆ ಮೇಲೆ ನಮ್ಮ ಪಕ್ಷದ ಇಂದಿನ ಪರಿಸ್ಥಿತಿಯನ್ನೂ ಯಾವ ಪರಿಸ್ಥಿಯನ್ನು ದಾಟಿ ಅದು ಇಂದಿನ ಪರಿಸ್ಥಿತಿಗೆ ಬಂದು ಮುಟ್ಟಿತೆಂಬುದನ್ನೂ ಪರಿಶೀಲಿಸೋಣ.

ನಮ್ಮ ಪಕ್ಷವು ತಲೆಯೆತ್ತಿದಾಗ ಮಾರ್ಕ್ಸ್‌ವಾದವನ್ನು ಗುರಿಯಾಗಿಟ್ಟುಕೊಂಡ ಮತ್ತು ಅಖಿಲಭಾರತದಲ್ಲಿ ಹಬ್ಬುವ ಆಸೆಯನ್ನಿಟ್ಟುಕೊಂಡ ಇನ್ನೆರಡು ಪಕ್ಷಗಳಿದ್ದುವು. ಮೊದಲನೆಯದು ಕಮ್ಯುನಿಸ್ಟ್ ಪಕ್ಷ, ಎರಡನೆಯದು

ರಾಯ್ ಪಕ್ಷ. ಇದಲ್ಲದೆ ದೇಶದಲ್ಲಿ ಅದೇ ಕಾಲಕ್ಕೆ ಅಥವಾ ಕೊಂಚ ತರುವಾಯ, ಪಂಜಾಬ್ ಸಾಮ್ಯವಾದೀ ಪಕ್ಷ ಮತ್ತು ಬಂಗಾಲ್ ಕೂಲಿಕಾರ ಪಕ್ಷಗಳಂತಹ ಚಿಕ್ಕಪುಟ್ಟ ಮಾರ್ಕ್ಸ್‌ವಾದೀ ಸಂಗಡಗಳು ಹುಟ್ಟಿದವು. ನಮ್ಮ ಪಕ್ಷವು ಇಂಥ ಸ್ಥಳಿಕ ಹಾಗೂ ರಾಷ್ಟ್ರೀಯ ಪಕ್ಷಗಳನ್ನು ಒಂದುಗೂಡಿಸಿ ಒಂದೇ ಒಂದು ಸಾಮ್ಯವಾದೀ ಪಕ್ಷವನ್ನು ನಿರ್ಮಿಸಲು ಮೊದಲಿನಿಂದಲೂ ಹೆಣಗಿತು. ಇಂದಿನ ಪರಿಸ್ಥಿತಿಯ ಮೇರೆಗೆ ನೋಡಿದರೆ ನಮ್ಮ ಪಕ್ಷದ ಎಲ್ಲ ಪ್ರಯತ್ನಗಳು ವ್ಯರ್ಥವಾದುವೆಂಬುದನ್ನು ಒಪ್ಪಿಕೊಳ್ಳಬೇಕು. ನಮ್ಮಲ್ಲಿ ದುಡಿಯುವ ಉತ್ಸಾಹವಿರಲಿಲ್ಲವೆಂಬುದೂ ಸಾಹಸವಿರಲಿಲ್ಲವೆಂಬುದೂ ಈ ನಿಷ್ಫಲತೆಗೆ ಕಾರಣವಲ್ಲ. ಅದಕ್ಕೆ ಕಾರಣವಾದುದು ಉಳಿದ ಪಕ್ಷಗಳ—ವಿಶೇಷವಾಗಿ ಕಮ್ಯುನಿಸ್ಟ ಪಕ್ಷದ—ಪಕ್ಷಾಭಿಮಾನ ಮತ್ತು ಭೇದಬುದ್ಧಿ. ಹೀಗೆ ನಮ್ಮ ಪ್ರಯತ್ನವು ನಿಷ್ಫಲವಾದುದರ ಇತಿಹಾಸವನ್ನಷ್ಟು ನೋಡುವಾ.

## ೧

## ರಾಯ್ ಪಕ್ಷ

ಮೊದಲು ರಾಯ್‌ಪಕ್ಷವನ್ನೇ ತೆಗೆದುಕೊಳ್ಳುವಾ. ನಮ್ಮ ಪಕ್ಷದ ಸ್ಥಾಪನೆಯನ್ನು ರಾಯ್‌ಗುಂಪು ಉತ್ಸಾಹದಿಂದ ಸ್ವಾಗತಿಸಿತು. ಆ ಪಕ್ಷದ ಕೆಲವರು ನಮ್ಮ ಪಕ್ಷದ ಜೊತೆಗೆ ಆರಂಭದಿಂದಲೂ ಕೆಲಸಮಾಡಿದರು. ಸ್ವತಃ ರಾಯ್‌ಪಕ್ಷವು ಕೂಡ ನಮ್ಮ ವಿಷಯದಲ್ಲಿ ಸಹಾನುಭೂತಿಯನ್ನೂ ಸಹಕಾರವನ್ನೂ ವ್ಯಕ್ತಪಡಿಸಿತು. ಆದ್ದರಿಂದ ರಾಯ್‌ವಾದಿಗಳನ್ನು, ನಮ್ಮ ಪಕ್ಷದಲ್ಲಿ ಸೇರಲು ಕೇಳಿಕೊಂಡೆವು. ಕೆಲವು ತಿಂಗಳಲ್ಲಿ ಇಡಿಯ ರಾಯ್ ಪಕ್ಷವೇ ಕಾಂಗ್ರೆಸ್ ಸಾಮ್ಯವಾದೀ ಪಕ್ಷದಲ್ಲಿ ಕೂಡಿಕೊಂಡಂತಾಗಿದ್ದಿತು. ಮತ್ತು ಇದರಿಂದ ಭಾರತದ ಮೂರು ಮಾರ್ಕ್ಸ್‌ವಾದಿ ಸಂಗಡಗಳಲ್ಲಿ ಕನಿಷ್ಟ ಎರಡಾದರೂ ಕೂಡಿಕೊಳ್ಳುವ ಆಸೆ ಕಂಡು ಬರತೊಡಗಿತು. ಆದರೆ ದೈವನಿಯಮ ಹಾಗಿರಲಿಲ್ಲ.

ಈ ಕತೆಯ ಮನೋರಂಜಕ ಘಟನೆಯನ್ನು ಕೇಳಿರಿ. ನಮ್ಮ ಪಕ್ಷವು ರಾಷ್ಟ್ರೀಯ ಹೋರಾಟದ ಹೊಟ್ಟೆಯಲ್ಲಿಯೇ ಹುಟ್ಟಿದ್ದರಿಂದ ತುಂಬ ಅನು

ಕೂಲ ಪರಿಸ್ಥಿತಿಯಲ್ಲಿತ್ತು. ಇದರ ಲಾಭ ಪಡೆಯುವುದಕ್ಕಾಗಿ ಇನ್ನುಳಿದ ಪ್ರತಿಯೊಂದು ಪಕ್ಷವು ನಮ್ಮ ಪಕ್ಷವನ್ನು ತನ್ನ ಕೈಯಲ್ಲಿಟ್ಟುಕೊಳ್ಳುವ ಹೊಂಚು ಹಾಕತೊಡಗಿತು. ಇದು ಅಸಾಧ್ಯವೆಂದು ತೋರಿ ಬಂದ ಕೂಡಲೇ, ಉಳಿದ ಪಕ್ಷಗಳ ಬೆಳವಣಿಗೆಗೆ ಅಡ್ಡಿಯಾಗಿರುವ ಈ ಪಕ್ಷವನ್ನು ನಾಶ ಮಾಡುವ ವ್ಯರ್ಥ ಪ್ರಯತ್ನ ನಡೆಯಿತು. ಇದು ರಾಯ್ ಮತ್ತು ಕಮ್ಯುನಿಸ್ಟ್ ಪಕ್ಷದ ನಡತೆಯ ಸಂಕ್ಷಿಪ್ತ ಇತಿಹಾಸ.

ರಾಯ್ ಪಂಗಡವು ನಮ್ಮೊಡನೆ ಕೂಡಿದಾಗ ಮೂಲ ಧ್ಯೇಯ ಧೋರಣೆಗಳ ಬಗೆಗೆ ಯಾವ ಭಿನ್ನಾಭಿಪ್ರಾಯವೂ ಇರಲಿಲ್ಲ. ಆದರೆ ಒಂದೇ ಒಂದು ವರುಷದಲ್ಲಿ, ಎಂದರೆ ೧೯೩೭ನೆ ಜನೆವರಿಯಲ್ಲಿ ಮೀರತ್ತಿನಲ್ಲಿ ಕೂಡಿದ ನಮ್ಮ ಪಕ್ಷದ ದ್ವಿತೀಯ ಸಮ್ಮೇಲನಕ್ಕಿಂತ ಮೊದಲು ಹಲವು ಭಿನ್ನಾಭಿಪ್ರಾಯಗಳು ತಲೆದೋರಿದುವು. ಈ ಭಿನ್ನಾಭಿಪ್ರಾಯಗಳು ಒಂದು ಪ್ರಕಟನೆಯ ರೂಪದಿಂದ ಪ್ರಕಟವಾದುವು. ಅದರಲ್ಲಿ, ನಮ್ಮ ಪಕ್ಷವು ಕಾಂಗ್ರೆಸ್ಸಿನ ಎಡಪಕ್ಷವೆಂದು ಕೆಲಸಮಾಡಬೇಕೆಂದೂ ಸಾಮ್ಯವಾದೀ ಪಕ್ಷವೆಂದು ಕೆಲಸ ಮಾಡಕೂಡದೆಂದೂ ಸೂಚಿಸಿದ್ದರು. ಇಷ್ಟೇ ಅಲ್ಲ, ಕಾಂಗ್ರೆಸ್ ಸಾಮ್ಯವಾದೀ ಪಕ್ಷವು ಸಾಮ್ಯವಾದೀ ಪಕ್ಷವಾಗಿ ಬಾಳಕೂಡದೆಂದೂ ಸಾರಿದ್ದರು.

ಇದರಿಂದ ಇನ್ನೊಂದು ಮನೋರಂಜಕ ವಿಷಯ ವ್ಯಕ್ತವಾಗುತ್ತದೆ. ನಮ್ಮ ಒಕ್ಕಟ್ಟಿನ ದಾರಿಯಲ್ಲಿ ವಿಘ್ನ ಬರಲು ಕಾರಣವೆಂದರೆ ಪ್ರತಿಯೊಂದು ಸಣ್ಣ ಪಕ್ಷವೂ ತಾನೇ ಶುದ್ಧ ಮಾರ್ಕ್ಸವಾದಿಯೆಂದೂ, ಆದ್ದರಿಂದ ಉಳಿದ ಪಕ್ಷಗಳನ್ನು ಸ್ವಾಧೀನಪಡಿಸಿಕೊಳ್ಳಬೇಕೆಂದೂ ಇಲ್ಲವೆ ನಾಶ ಮಾಡಬೇಕೆಂದೂ ತಿಳಿದದ್ದು. ರಾಯ್ ಪಕ್ಷವೂ ಇಂಥ ದುರಭಿಮಾನಕ್ಕೆ ಒಳಗಾಗಿದ್ದಿತು. ಆದ್ದರಿಂದ ಇನ್ನೊಂದು ಸಾಮ್ಯವಾದೀ ಪಕ್ಷವು ಅನವಶ್ಯಕವೆಂದೂ ಅಪಾಯಕಾರಿಯೆಂದೂ ಅದು ತಿಳಿದುಕೊಳ್ಳುವುದು ಸ್ವಾಭಾವಿಕ. ತನ್ನ ಪ್ರಭಾವಕ್ಕೆ ಒಳಗಾಗುವ ಮತ್ತು ತನ್ನ ಕೈಗೊಂಬೆಯಾಗಿ ಬಾಳುವ ಎಡಪಕ್ಷವೊಂದಿದ್ದರೆ ಸಾಕೆಂದು ಅದರ ತಿಳಿವಳಿಕೆಯಾಗಿದ್ದಿತು. ಮೊದಲಿಗೆ ನಮಗೆ ಇದೆಲ್ಲವೂ ತಿಳಿಯದ್ದರಿಂದ ಈ ಎಲ್ಲ ಪಕ್ಷ ಪಂಗಡಗಳ ಐಕ್ಯಕ್ಕೆ ಪ್ರಯತ್ನ ಪಟ್ಟೆವು. ನಿಜವಾದ ಮಾತೆಂದರೆ ನಾವು ಬರಿಯ ಐಕ್ಯಸಾಧನೆಯಲ್ಲಿಯೇ ತೊಡಗಿದ್ದರಿಂದ ಈ ಪಕ್ಷ ಪಂಗಡಗಳು ತಮ್ಮ ನಿಜವಾದ ಸ್ವರೂಪವನ್ನು ತೋರಿಸುವ

ವರೆಗೆ ನಮಗೆ ಈ ಮಾತು ಗೊತ್ತಾಗಲೇ ಇಲ್ಲ. ಮೇಲೆ ಹೇಳಿದ ಘೋಷಣೆಯನ್ನು ರಾಯ್ ಪಕ್ಷವು ಮೀರತ್ತಿನಲ್ಲಿ ಸೇರಿದ ನಮ್ಮ ಪಕ್ಷದ ಕಾರ್ಯಕಾರೀ ಸಮಿತಿಯ ಮುಂದೆ ಮಂಡಿಸಿತು. ಆಗ ರಾಯ್ ಸಂಗಡದ ಸದಸ್ಯರಿಬ್ಬರು ನಮ್ಮ ಪಕ್ಷವೇ ನಿಜವಾದ ಮಾರ್ಕ್ಸವಾದೀ ಪಕ್ಷವಾದುದರಿಂದ ನಮ್ಮ ಪಕ್ಷದ ಯೋಜನೆಯನ್ನೇ ಸ್ವೀಕರಿಸಬೇಕೆಂದು ಮತ ಕೊಟ್ಟರು. ಅಧಿವೇಶನದಲ್ಲಿ ಈ ವಿಷಯವು ಚರ್ಚೆಗೆ ಬಂದಾಗ ರಾಯ್ ವಾದಿಗಳಲ್ಲಿಯೇ ಎರಡು ಸಂಗಡವಾದುವು. ಕೆಲವರು ಕಾರ್ಯಕಾರೀ ಸಮಿತಿಯ ಯೋಜನೆಗೆ ಬೆಂಬಲ ಕೊಟ್ಟರು. ಇನ್ನು ಕೆಲವರು ಒಂದು ಉಪಸೂಚನೆಯನ್ನು ಮಂಡಿಸಿ, ತಳ್ಳಿಹಾಕಲಾದ ಮೇಲಿನ ಘೋಷಣೆಗೆ ಮತ್ತೆ ಜೀವ ತುಂಬಲು ಹವಣಿಸಿದರು. ಆದರೆ ಅವರನ್ನು ಸಂಪೂರ್ಣ ಸದೆ ಬಡಿದೆವು. ಮಹತ್ವದ ಈ ಭಿನ್ನಾಭಿಪ್ರಾಯವು ಬೆಳಕಿಗೆ ಬಂದಮೇಲೆ ಕೂಡ ರಾಯ್‌ವಾದಿಗಳು ಸಾಮ್ಯವಾದೀ ಪಕ್ಷದೊಡನೆ ಸಮರಸವಾಗುವವರಂತೆ ನಟಿಸಿ ಕೆಲಸ ಮಾಡುತ್ತಲಿದ್ದರು. ಮುಂಬೈ ಕೂಲಿಕಾರರ ಆಂದೋಲನದಲ್ಲಿ ತಲೆದೋರಿದಂತೆ ಮತಭೇದಗಳು ಆಗಿಂದಾಗ ತಲೆದೋರಿದರೂ ಅವು ಮಹತ್ವದವಾಗಿರಲಿಲ್ಲ.

ಈ ಪರಿಸ್ಥಿತಿ, ೧೯೩೬ ರ ಕೊನೆಯಲ್ಲಿ ಶ್ರೀ ಎಂ. ಎನ್. ರಾಯರು ಸೆರೆಮನೆಯಿಂದ ಬಿಡುಗಡೆಯಾಗುವವರೆಗೂ ಹಾಗೆಯೇ ಇತ್ತು. ಶ್ರೀ. ರಾಯರು ಮೊದಲಿಗೆ ನಮ್ಮ ಪಕ್ಷದೊಂದಿಗೆ ವಿಶ್ವಾಸದಿಂದ ನಡೆದುದಲ್ಲದೆ ನಮ್ಮ ಪಕ್ಷವನ್ನು ಸೇರುವ ಯೋಚನೆಯನ್ನೂ ಮಾಡಿದ್ದರು. ಆದರೆ ಸ್ವಲ್ಪ ಕಾಲದಲ್ಲಿಯೇ ನಮ್ಮ ಪಕ್ಷವನ್ನೂ ಅದರ ಮೂಲ ಧ್ಯೇಯ ಧೋರಣೆಗಳನ್ನೂ ಕುರಿತು ಸಾರ್ವಜನಿಕ ವ್ಯಾಖ್ಯಾನಗಳಲ್ಲಿ ಟೀಕಿಸತೊಡಗಿದರು. 'ಕಾಂಗ್ರೆಸ್ಸಿನಲ್ಲಿ ಇನ್ನೊಂದು ಪಕ್ಷದ ಅಗತ್ಯವಿಲ್ಲ,' 'ಜಮೀನುದಾರಿಯ ನಿರ್ಮೂಲನವು ಈಗಿನ ಮಹತ್ವದ ಸಮಸ್ಯೆಯಲ್ಲ,' 'ಒಕ್ಕಲಿಗರ ಸಂಘಟನೆಯನ್ನು ಕಾಂಗ್ರೆಸ್ ಸಮಿತಿಗಳೇ ಮಾಡುತ್ತಿರುವುದರಿಂದ ಉಳಿದವರು ಮಾಡುವುದು ಯೋಗ್ಯವಲ್ಲ' (ಆ ಕಾಲದಲ್ಲಿ ನಮ್ಮ ಪಕ್ಷವು ಕೃಷಿಕ ಸಭೆಗಳನ್ನು ಸಂಘಟಿಸುವುದರಲ್ಲಿಯೂ ಜಮೀನುದಾರೀ ಪದ್ಧತಿಯನ್ನು ನಿರ್ಮೂಲಿಸುವ ಆಂದೋಲನದಲ್ಲಿಯೂ ತೊಡಗಿತ್ತು.) ಎಂದು ಅವರು ಮೇಲಿಂದ ಮೇಲೆ ಸಾರುತ್ತಲಿದ್ದರು. ಆದರೂ ಕಾಂಗ್ರೆಸ್ ಸಾಮ್ಯವಾದೀ ಪಕ್ಷದಲ್ಲಿ ಸೇರಿದ ತಮ್ಮ ಅನುಯಾಯಿಗಳಿಗೆ

ಅಲ್ಲಿಯೇ ಉಳಿಯಲು ಅವರು ಒಪ್ಪಿಗೆ ಕೊಟ್ಟರು. ಆದರೆ ಇದು ಬಹಳ ದಿನ ನಡೆಯಲಿಲ್ಲ. ೧೯೩೭ ರಲ್ಲಿ ನಡೆದ ದಿಲ್ಲಿಯ ಅಧಿವೇಶನದ ಕಾಲಕ್ಕೆ ತಮ್ಮ ಅನುಯಾಯಿಗಳನ್ನು ನಮ್ಮ ಪಕ್ಷದಿಂದ ಹೊರಗೆ ತರಲು ಅವರು ಒಮ್ಮೆಲೇ ಗುಪ್ತವಾಗಿ ನಿರ್ಣಯಿಸಿದರು. ಈ ತೀರ್ಮಾನಕ್ಕೆ ಕಾರಣವೇನೆಂಬುದನ್ನು ಅವರು ಸಾರ್ವಜನಿಕವಾಗಿ ಹೇಳಲೇ ಇಲ್ಲ. ಮುಂದಾಳೂ ಅವನ ಅನುಯಾಯಿಗಳೂ ಅಗಲಿ ಬೇರೆ ಬೇರೆಯಾಗಿ ಉಳಿಯುವ ವಿಷಮ ಪರಿಸ್ಥಿತಿ ಬಂದದ್ದೇ ಇದಕ್ಕೆ ಕಾರಣವಿರಬಹುದು. ನಮ್ಮ ಪಕ್ಷವು ತನ್ನ ಕೈಗೊಂಬೆಯಾಗಲಾರದೆಂದು ಅವರಿಗೆ ಮನವರಿಕೆಯಾಗಿರಬಹುದು; ಇಲ್ಲವೆ ತಾವು ಗಳಿಸಬೇಕೆಂದಿರುವ ಕೀರ್ತಿಗೆ ಇದೊಂದು ಸಾಧನವಾಗಬಹುದೆಂಬ ಅವರ ಆಸೆ ಕರಗಿ ಹೋಗಿರಬಹುದು. ಕಾರಣವು ಯಾವುದಾದರೇನು, ರಾಯ್‌ವಾದಿಗಳು ಕಾಂಗ್ರೆಸ್ ಸಾಮ್ಯವಾದೀ ಪಕ್ಷದಿಂದ ಸಿಡಿದು ಹೋದದ್ದು ನಿಜ. ಅವರು ತಮ್ಮ ರಾಜೀನಾಮೆಯನ್ನು ಒಪ್ಪಿಸುವಾಗ ಕಾಂಗ್ರೆಸ್ ಸಾಮ್ಯವಾದೀ ಪಕ್ಷವು ಕಾಂಗ್ರೆಸ್ಸನ್ನು ದುರ್ಬಲಗೊಳಿಸುವುದೆಂದು ಟೀಕಿಸಿದರು. ಶ್ರೀ. ಎಂ. ಎನ್. ರಾಯರ ಆ ಮೇಲಿನ ಮುಖ್ಯ ಚಟುವಟಿಕೆಯೆಂದರೆ ತಮ್ಮ ಇಂಡಿಪೆಂಡೆಂಟ್ ಇಂಡಿಯಾ ಎಂಬ ಪತ್ರಿಕೆಯಲ್ಲಿ ನಮ್ಮ ಪಕ್ಷವನ್ನು ಮನವಾರೆ ನಿಂದಿಸುವುದು. ನಮ್ಮ ಪಕ್ಷವನ್ನು ಕೈವಶಪಡಿಸಿಕೊಳ್ಳುವುದು ಸಾಧ್ಯವಾಗಲಿಲ್ಲವೆಂದಮೇಲೆ ಅದರ ನಾಶವನ್ನಾದರೂ ಮಾಡಬೇಕಲ್ಲವೆ ?

ಅಂತೂ ನಮ್ಮ ರಾಯ್‌ವಾದೀ ಮಿತ್ರರು ಒಂದೂವರೆ ವರುಷಕ್ಕಿಂತ ಹೆಚ್ಚು ಕಾಲ ನಮ್ಮೊಡನೆ ನಿಕಟವಾಗಿ ಸಹಕರಿಸಿ ಕೊನೆಗೆ ಚನ್ನಾಗಿ ಕೈತೋರಿಸಿ ನಮ್ಮಿಂದ ಅಗಲಿದರು. ಇಲ್ಲಿಯವರೆಗೆ ಗಳಿಸಿದ ಅಲ್ಪ ಸ್ವಲ್ಪ ಐಕ್ಯವನ್ನೂ ಹಾಳು ಮಾಡಿದ ಹೊಣೆ ರಾಯ್‌ವಾದಿಗಳದು—ವಿಶೇಷತಃ ಶ್ರೀ ಎಂ. ಎನ್. ರಾಯರದು. ರಾಯ್‌ವಾದಿಗಳ ಇತ್ತೀಚೆಯ ರಾಜಕೀಯ ಚಟುವಟಿಕೆಗಳನ್ನು ನೋಡಿದರೆ ಡೆಮೊಕ್ರೆಟಿಕ್ ಪ್ಯೂಪಿಲ್ಸ್ ಪಕ್ಷವು ನಮ್ಮನ್ನು ಅಗಲಿದ್ದರಿಂದ ಸಾಮ್ಯವಾದಕ್ಕೆ ಯಾವ ಹಾನಿಯೂ ಆಗಿಲ್ಲವೆಂಬ ಮಾತು ಸ್ಪಷ್ಟವಾಗುತ್ತದೆ. ಆದರೂ ಶ್ರೀ. ರಾಯರ ವಿಷಯದಲ್ಲಿ ನಾವು ಪಡಬಹುದಾದ ಅಭಿಪ್ರಾಯವು ಅವರ ಎಲ್ಲ ಅನುಯಾಯಿಗಳಿಗೂ ಅನ್ವಯಿಸುವುದೆನ್ನಲಾರೆ. ರಾಯ್‌ವಾದೀ ಪಕ್ಷಕ್ಕೆ ಮರುಳಾದ ಎಷ್ಟೋ ಜನರು ಆ ಪಕ್ಷಕ್ಕೆ ಬಲಿಯಾದ

ದ್ದಲ್ಲದಿದ್ದರೆ ಅವರಿಂದ ಸಾಮ್ಯವಾದದ ಸೇವೆ ಇನ್ನೂ ಹೆಚ್ಚಾಗುತ್ತಿತ್ತೆಂಬಲ್ಲಿ ಸಂದೇಹವಿಲ್ಲ.

೨

## ಬಂಗಾಲ್ ಕೂಲಿಕಾರ ಪಕ್ಷ ಮತ್ತು ಪಂಜಾಬ್ ಸಾಮ್ಯವಾದೀ ಪಕ್ಷ

ಕಮ್ಯುನಿಸ್ಟ್ ಪಕ್ಷದೊಂದಿಗೆ ಇದ್ದ ನಮ್ಮ ಸಂಬಂಧದ ಕತೆಗಿಂತ ಮುಂಚೆ ಮೇಲಿನ ಎರಡು ಪಕ್ಷಗಳ ಪುರಾಣವನ್ನು ಮುಗಿಸಿ ಬಿಡುವಾ.

ಬಂಗಾಲ್ ಕೂಲಿಕಾರ ಪಕ್ಷವು ನಮ್ಮ ಪಕ್ಷದ ಕಡುಹಗೆಯಾಗಿಯೇ ಉದಯ ಹೊಂದಿತು. ಆದರೆ ನಮ್ಮ ಪಕ್ಷವು ಮಾತ್ರ ಅವರ ಎಲ್ಲ ವಿರೋಧ ಪನ್ನೂ ಸಹಿಸಿ ಸಹಕಾರಕ್ಕಾಗಿ ಅವರ ಮನವೊಲಿಸತೊಡಗಿತು. ನಮ್ಮ ಪ್ರಯತ್ನ ಸ್ವಲ್ಪ ಕಾಲದಲ್ಲಿಯೇ ಯಶಸ್ವಿಯಾಯಿತು; ಮತ್ತು ಎರಡೂ ಪಕ್ಷ ಗಳ ಚಟುವಟಿಕೆಗಳನ್ನು ಸಾಗಿಸಿಕೊಂಡು ಹೋಗಲು ಬಂಗಾಲ್ ಕಾಂಗ್ರೆಸ್ ಸಾಮ್ಯವಾದೀ ಪಕ್ಷ ಮತ್ತು ಬಂಗಾಲ್ ಕೂಲಿಕಾರ ಪಕ್ಷದ ಒಂದು ಸಂಯುಕ್ತ ಸಮಿತಿಯು ಸಮಪ್ರಾತಿನಿಧ್ಯದ ತಳಹದಿಯ ಮೇಲೆ ಸ್ಥಾಪಿತವಾಯಿತು. ಈ ಕೂಲಿಕಾರ ಪಕ್ಷವು ಕೆಲಕಾಲದ ಮೇಲೆ ಕಮ್ಯುನಿಸ್ಟರನ್ನು ಕೂಡಿಕೊಂಡಿತು. ಆ ಮೇಲೆ ನಮ್ಮ ಮತ್ತು ಈ ಕೂಲಿಕಾರ ಪಕ್ಷದ ಸಂಬಂಧವು ನಮ್ಮ ಮತ್ತು ಕಮ್ಯುನಿಸ್ಟ್ ಪಕ್ಷದ ಸಂಬಂಧದಂತೆಯೇ ಉಳಿಯಿತು. ಸ್ವಲ್ಪ ಕಾಲಾ ನಂತರ ಕೂಲಿಕಾರ ಪಕ್ಷವು ಕಮ್ಯುನಿಸ್ಟ್ ಪಕ್ಷದಿಂದ ದೂರ ಸಿಡಿದು ಸ್ವತಂತ್ರ ವಾದುದಲ್ಲದೆ ಪುರೋಗಾಮಿ ಪಕ್ಷದ ಜೊತೆಗೆ ಸಹಕರಿಸತೊಡಗಿತು. ಈಗ ನಾವು ಪುರೋಗಾಮಿ ಪಕ್ಷದೊಂದಿಗೆ ಹೇಗೋ ಹಾಗೆ ಇವರ ಜೊತೆಗೂ ಸ್ನೇಹ ದಿಂದಲೂ ಸಹಕಾರ ಭಾವನೆಯಿಂದಲೂ ನಡೆಯುತ್ತಿದ್ದೇವೆ.

ಹಳೆಯ ನೌಜವಾನ್ ಭಾರತ ಸಭೆಯ ಹೊಟ್ಟೆಯಿಂದಲೇ ಹುಟ್ಟಿದ ಪಂಜಾಬ್ ಸಾಮ್ಯವಾದೀ ಪಕ್ಷದೊಂದಿಗೆ ನಮ್ಮ ಪಕ್ಷವು ವಿಶ್ವಾಸದಿಂದ ವರ್ತಿಸತೊಡಗಿತ್ತು. ಪಂಜಾಬ್ ಸಾಮ್ಯವಾದೀ ಪಕ್ಷವು ಕೂಡ ನಮ್ಮ ಪಕ್ಷ ದೊಂದಿಗೆ ಮೊದಲಿನಿಂದಲೂ ಸೌಹಾರ್ದಯುಕ್ತವಾಗಿದ್ದುದಲ್ಲದೆ ನಮ್ಮ ಪಕ್ಷ

ದೊಂದಿಗೆ ಕೂಡಿಕೊಳ್ಳಲಿಕ್ಕೂ ಸಿದ್ಧವಿತ್ತು. ಆದರೆ ಮಧ್ಯದಲ್ಲಿ ಕೆಲವು ತಾತ್ವಿಕ ತೊಂದರೆಗಳಿದ್ದುವು. ಉದಾಹರಣೆಗಾಗಿ–ಪಂಜಾಬ್ ಸಾಮ್ಯವಾದೀ ಪಕ್ಷವು ಕಾಂಗ್ರೆಸ್ಸಿನ ಬಗೆಗೆ ತುಂಬ ಹಗೆತನವನ್ನು ತಾಳಿದ್ದಿತು. ಅಂತೂ ಕ್ರಮೇಣ ಈ ತೊಂದರೆಗಳೆಲ್ಲ ಇಲ್ಲದಂತಾಗಿ ಪಂಜಾಬ್ ಸಾಮ್ಯವಾದೀ ಪಕ್ಷವು ಕಾಂಗ್ರೆಸ್ ಸಾಮ್ಯವಾದೀ ಪಕ್ಷದಲ್ಲಿ ಸಮಾವೇಶವಾಯಿತು.

ಪಂಜಾಬ್ ಕೀರ್ತಿ ಕಿಸಾನ್ ಪಕ್ಷದ ವಿಷಯವನ್ನೂ ಇಲ್ಲಿಯೇ ನೋಡೋಣ. ನಾವು ಈ ಪಕ್ಷದೊಂದಿಗೆ ಎಂದಿನಿಂದಲೂ ಗೆಳೆತನದಿಂದಲೇ ಇದ್ದೇವೆ. ಮತ್ತು ಒಂದಾನೊಂದು ಕಾಲದಲ್ಲಿ ಈ ಪಕ್ಷದ ಅನೇಕ ಕೆಲಸಗಾರರು ನಮ್ಮ ಪಂಜಾಬ್ ಸಾಮ್ಯವಾದೀ ಪಕ್ಷದ ಸದಸ್ಯರಾಗಿದ್ದರು.

೭

## ಕಮ್ಯೂನಿಸ್ಟ ಪಕ್ಷ

ಈಗ, ಭಾರತದ ಕಮ್ಯುನಿಸ್ಟ ಪಕ್ಷಕ್ಕೂ ನಮಗೂ ಇರುವ ಸಂಬಂಧವನ್ನು ನೋಡೋಣ. ನಮ್ಮ ಅವರ ಸಂಬಂಧದ ಈ ಕತೆಯನ್ನು ನಾಲ್ಕು ಭಾಗಗಳಾಗುವಂತೆ ವಿಭಾಗಿಸಬಹುದು. ನಮ್ಮ ಪಕ್ಷದ ಸ್ಥಾಪನೆಯಿಂದ ೧೯೩೬ ನೇ ಜನೆವರಿಯಲ್ಲಿ ಮೀರತ್ ಅಧಿವೇಶನ ಜರುಗುವವರೆಗೆ ಮೊದಲನೆಯದು. ಅಲ್ಲಿಂದ ೧೯೩೭ ನೇ ಅಗಸ್ಟವರೆಗೆ ಎರಡನೆಯದು. ೩೭ ನೇ ಅಗಸ್ಟಿನಿಂದ ಯುರೋಪ್ ಯುದ್ಧದ ಆರಂಭದವರೆಗೆ ಮೂರನೆಯದು. ಅಲ್ಲಿಂದ ಇಲ್ಲಿಯವರೆಗೆ ನಾಲ್ಕನೆಯದು

ಮೊದಲನೆಯ ಭಾಗದ ಕಾಲದಲ್ಲಿ ಕಮ್ಯುನಿಸ್ಟ ಪಕ್ಷವು ನಮ್ಮ ವಿಷಯದಲ್ಲಿ ತೀರ ವೈರಭಾವದಿಂದಿದ್ದಿತು. ನಾವು ಮಾತ್ರ ಆ ಪಕ್ಷದ ಪ್ರೀತಿ ವಿಶ್ವಾಸವನ್ನೂ ಸಹಕಾರವನ್ನೂ ದೊರಕಿಸಲು ತುಂಬ ಯತ್ನಿಸಿದೆವು. ಆ ಪಕ್ಷದ ವಿಷಯದಲ್ಲಿ ನಮ್ಮ ದೃಷ್ಟಿಕೋನವು ಮೊದಲಿನಿಂದ ಕೊನೆಯವರೆಗೆ ಒಂದೇ ಸಮನಾಗಿದ್ದಿತು ಇಂದಿಗೂ, ಕಮ್ಯುನಿಸ್ಟ ಪಕ್ಷವು ದ್ವೇಷವನ್ನೂ ಪ್ರತಿಸ್ಪರ್ಧಿತ್ವವನ್ನೂ ಹಾಗೆಯೇ ಸಾಗಿಸಿದ್ದರೂ ಎರಡು ಪ್ರಬಲ ಕ್ರಾಂತಿಕಾರಿ

ಪಕ್ಷಗಳು ಸಹಕರಿಸಬೇಕೆಂಬ ನಮ್ಮ ಧೋರಣೆ ಎಂದಿನಂತೆಯೇ ಇದೆ. ಆದರೆ ಮುಂದೆ ವಿವರಿಸುವ ಅನುಭವಗಳ ಮೂಲಕ ಇದು ಸಾಧ್ಯವೆಂದು ಮಾತ್ರ ನಮಗೆ ತೋರುತ್ತಿಲ್ಲ.

ನಮ್ಮ ಪಕ್ಷದ ಸ್ಥಾಪನೆಯ ಜೊತೆಗೇ ನಾವು ಕಮ್ಯುನಿಸ್ಟರ ಕಡು ವಿರೋಧ ವನ್ನೂ ತಿರಸ್ಕಾರವನ್ನೂ ಎದುರಿಸಬೇಕಾಯಿತು. ಅಂತರ್ ರಾಷ್ಟ್ರೀಯ ಕಮ್ಯುನಿಸ್ಟ್ ಸಂಸ್ಥೆಯಿಂದ ಕಲಿತ ಕೆಲವು ಗಿಳಿಮಾತುಗಳನ್ನು ಕಾಂಗ್ರೆಸ್ ಸಾಮ್ಯವಾದೀಪಕ್ಷವೆಂದರೆ 'ಸಾಮಾಜಿಕ ಫ್ಯಾಸಿಸ್ಟ್' ಪಕ್ಷ, ಕ್ರಾಂತಿಕಾರೀ ಬಂಡವಲುಗಾರರ ಪಕ್ಷ, ಎಂಬ ಮಾತುಗಳನ್ನು ಅವರು ನಮ್ಮ ಮೇಲೆ ಪ್ರಯೋಗಿಸಿದರು. ಈ ವಿರೋಧ ಭಾವವನ್ನು ತಳೆದದ್ದು ಭಾರತದ ಕಮ್ಯುನಿಸ್ಟ್ ಪಕ್ಷ ಮಾತ್ರವಲ್ಲ—ಬ್ರಿಟನ್ನಿನಲ್ಲಿರುವ ಇವರ ವಂದಿಮಾಗಧರಾದ ಶ್ರೀ. ಪಾಮ್‌ದತ್ತರಂಥವರು ಕೂಡ ಹಾಗೆಯೇ ಮಾಡಿದರು. ಆ ಕಾಲದಲ್ಲಿ ಪ್ರಪಂಚದ ಎಲ್ಲ ಕಮ್ಯುನಿಸ್ಟ್ ಪಕ್ಷಗಳೂ ಮೂರನೆಯ ಅಂತರ್ ರಾಷ್ಟ್ರೀಯದ ೬ನೇ ಅಧಿವೇಶನವು ಗೊತ್ತುಮಾಡಿದ ಒಂದು ಶುದ್ಧ ಸಾಂಪ್ರದಾಯಿಕ ಧೋರಣೆಯನ್ನು—ಎಲ್ಲ ಕಮ್ಯುನಿಸ್ಟ್ ಪಕ್ಷಗಳೂ ಒಂದೇ ದಾರಿಯನ್ನು ಹಿಡಿಯಬೇಕೆಂಬ ಧೋರಣೆಯನ್ನು—ಅನುಸರಿಸುತ್ತಿದ್ದುವು. ಈ ಧೋರಣೆಯ ಮೂಲಕ, ಕೂಲಿಕಾರ ಸಂಘಗಳೂ ಸಾಮ್ಯವಾದೀ ಪಕ್ಷಗಳೂ ತಮ್ಮ ಹಗೆಗಳೆಂದು ಎಲ್ಲ ಕಮ್ಯುನಿಸ್ಟರು ಪ್ರತಿಯೊಂದು ಕಡೆಯಲ್ಲಿಯೂ ತಿಳಿಯಬೇಕಾಯಿತು. ಸ್ಪಷ್ಟವಾಗಿ ಹೇಳುವುದಾದರೆ, ಕಮ್ಯುನಿಸ್ಟರಲ್ಲಿ ಬಂಡವಲುಗಾರರ ವಿಷಯಕವಾದ ದ್ವೇಷಕ್ಕಿಂತ ಸಾಮ್ಯವಾದಿಗಳ ವಿಷಯಕವಾದ ದ್ವೇಷವು ಹೆಚ್ಚಾಗಿತ್ತು. ಇದರ ಫಲವಾಗಿ ಜಗತ್ತಿನ ಸಾಮ್ಯವಾದೀ ಚಟುವಟಿಕೆಗಳಲ್ಲೆಲ್ಲ ಹಗೆತನವೂ ಕಾದಾಟವೂ ಮೊದಲಾದುವು.

ಭಾರತದಲ್ಲಿ ಕೂಡ, ಕಮ್ಯುನಿಸ್ಟ್ ಪಕ್ಷಕ್ಕೆ ಇನ್ನೊಂದು ಸ್ವತಂತ್ರ ಸಾಮ್ಯವಾದೀ ಪಕ್ಷದ ಅಸ್ತಿತ್ವ ಸಹನೆಯಾಗಲಿಲ್ಲವೆಂಬುದು ನಿಶ್ಚಿತ. ಮಾರ್ಕ್ಸ್‌ವಾದದ ತಮ್ಮ ಗುತ್ತಿಗೆಯನ್ನೇ ಕಸಿದುಕೊಳ್ಳುವರೆಂಬ ಭಯದಿಂದಲೋ ಏನೋ ಅವರು ನಮ್ಮೊಡನೆ ಹೋರಾಡಲು ಅಣಿಯಾದರು.

ತಿಳಿಗೇಡಿತನದ ಇಂಥ ವಿರೋಧಕ್ಕೆ ಪ್ರತಿಯಾಗಿ ನಮ್ಮ ಪಕ್ಷವು ತಳೆದ ಧೋರಣೆ ಯಾವುದು ? ನಾವು ಪ್ರತಿ ದಾಳಿ ಹೂಡಲಿಲ್ಲ. ನಮ್ಮನ್ನು ನಿಂದಿಸಿ

ರಕ್ಕೆ ಇಂಬುಗೊಡಬಾರದೆಂಬ ಕರಾರಿಗೆ ಗಮನಕೊಡಲಿಲ್ಲ. ಇದು, ಕಮ್ಯುನಿಸ್ಟ್ ಪಕ್ಷವು ತೀರ ಮೊದಲಿನಿಂದಲೂ ಹಿಡಿದ ಮಾರ್ಗವೆಂದೂ ಇದನ್ನು ಅವರು ಬೇಗನೆ ತಿದ್ದಿಕೊಳ್ಳುವರೆಂದೂ ನಾವು ಭಾವಿಸಿದೆವು.

ಈ ಸಂದರ್ಭದಲ್ಲಿ ಕಾಂಗ್ರೆಸ್ ಸಾಮ್ಯವಾದೀ ಪಕ್ಷ ಮತ್ತು ಕಮ್ಯುನಿಸ್ಟ್ ಪಕ್ಷಕ್ಕಿದ್ದ ಭಿನ್ನಾಭಿಪ್ರಾಯವನ್ನು ತಿಳಿದುಕೊಳ್ಳುವುದು ಯೋಗ್ಯವಾದೀತು. ನಮಗೂ ಅವರಿಗೂ ಆಳವಾದ ಮತಭೇದಗಳಿದ್ದುದರಿಂದ ಒಮ್ಮಿಂದೊಮ್ಮೆ ಐಕ್ಯವು ಸಾಧ್ಯವಾದೀತೆಂದು ನಾವು ತಿಳಿದಿರಲಿಲ್ಲ. ಐಕ್ಯವು ಪರಸ್ಪರರು ಸಹಕರಿಸುವುದರಿಂದ ಸಾಧ್ಯವೇ ಹೊರತು ಕಾದಾಡುವುದರಿಂದ ಸಾಧ್ಯವಿಲ್ಲವೆಂದು ನಾವು ದೃಢವಾಗಿ ನಂಬಿದ್ದೆವು. ಕಮ್ಯುನಿಸ್ಟ್ ಪಕ್ಷವು ಐಕ್ಯವನ್ನು ನಿಜವಾಗಿಯೂ ಬಯಸಿ ಅದೇ ಭಾವನೆಯಿಂದಲೇ ನಡೆದಿದ್ದರೆ ಆ ಕತೆಯೇ ಬೇರೆಯಾಗುತ್ತಿದ್ದಿತು.

ಕಮ್ಯುನಿಸ್ಟ್ ಪಕ್ಷವು ಈಗ ಹೇಗೋ ಹಾಗೆ ಆಗಲೂ ಮೂರನೇ ಅಂತರ್‌ರಾಷ್ಟ್ರೀಯ ಸಂಸ್ಥೆಯ ಶಾಖೆಯಾಗಿದ್ದಿತು. ಆದರೆ ಕಾಂಗ್ರೆಸ್ ಸಾಮ್ಯವಾದೀ ಪಕ್ಷವು ಮೊದಲಿನಿಂದಲೂ ಒಂದು ಸ್ವತಂತ್ರ ಸಂಸ್ಥೆಯಾಗಿ ಉಳಿದಿದೆ. ಇಷ್ಟೇ ಅಲ್ಲ, ಅದರ ಧೋರಣೆ, ಹುಟ್ಟಿನಿಂದಲೂ ಮೂರನೆಯ ಅಂತರ್‌ರಾಷ್ಟ್ರೀಯ ಸಂಸ್ಥೆಯ ಧೋರಣೆಗೆ ವಿರುದ್ಧವಾಗಿದೆ. ಆದರೆ ಕಮ್ಯುನಿಸ್ಟ್ ಪಕ್ಷವು ಮೂರನೇ ಅಂತರ್‌ರಾಷ್ಟ್ರೀಯವನ್ನು ಅನುಸರಿಸುತ್ತಿದ್ದುದರಿಂದ ಅದು ಕಾಂಗ್ರೆಸ್ಸಿನಿಂದ ಹೊರಗೆ ಉಳಿಯುದಲ್ಲದೆ ಅದನ್ನು ವಿರೋಧಿಸುತ್ತಿತ್ತು. ಅದು ಕಾಂಗ್ರೆಸ್ ವಿರುದ್ಧವಾಗಿ ಅನೇಕ ಸಂಸ್ಥೆಗಳನ್ನು ಕಟ್ಟಲು ಹೆಣಗಿ ಒಕ್ಕಲಿಗ, ಕೂಲಿಕಾರ ಪಕ್ಷಗಳಂತಹ ಅಲ್ಪ ಜೀವಿ ಸಂಸ್ಥೆಗಳನ್ನೂ ಸಾಮ್ರಾಜ್ಯವಿರೋಧೀ ಸಂಘದಂತಹ ಗರ್ಭಮೃತ ಸಂಸ್ಥೆಯನ್ನೂ ಸ್ಥಾಪಿಸಿದ್ದಿತು. ನಮ್ಮ ಕಾಂಗ್ರೆಸ್ ಸಾಮ್ಯವಾದೀ ಪಕ್ಷವಾದರೋ ಈ ಮೂರನೆಯ ಅಂತರ್‌ರಾಷ್ಟ್ರೀಯ ಕಮ್ಯುನಿಸ್ಟ್ ಪಕ್ಷದ ಧೋರಣೆಯನ್ನು ಹಿಡಿಯುವುದರ ಬದಲು ಕಾಂಗ್ರೆಸ್ಸಿನಲ್ಲಿಯೇ ಉಳಿದು ರಾಷ್ಟ್ರೀಯ ಹೋರಾಟಕ್ಕಾಗಿ ಅದನ್ನು ಬಲಪಡಿಸಲು ಯತ್ನಿಸುತ್ತಿದ್ದಿತು. ಆದರೆ ಕಮ್ಯುನಿಸ್ಟರು ಕಾಂಗ್ರೆಸ್ಸನ್ನು ಬಂಡವಲುಗಾರರ ಸಂಸ್ಥೆಯೆಂದು ಬಗೆದು ಅದನ್ನು ಕಡು ವಿರೋಧಿ[illegible] ರಾಗಿದ್ದರು. ನಮ್ಮ ಪಕ್ಷವು ಮಾತ್ರ ಕಾಂಗ್ರೆಸ್ಸು ಜನತೆಯ

ಸಂಸ್ಥೆಯೆಂದೂ ಆದ್ದರಿಂದ ತಾನು ಅದರಲ್ಲಿ ಸೇರಿ ತನ್ನ ಧೋರಣೆಯಂತೆ ಅದನ್ನು ಬಲಪಡಿಸಬೇಕೆಂದೂ ಭಾವಿಸಿದ್ದಿತು. ಮೂರನೆಯ ಮಹತ್ವದ ಭಿನ್ನಾಭಿಪ್ರಾಯವೆಂದರೆ ಟ್ರೇಡ್ ಯೂನಿಯನ್ನುಗಳ ಸಂಘಟನೆಗೆ ಸಂಬಂಧಿಸಿದ್ದು. ಕಮ್ಯುನಿಸ್ಟ್ ಪಕ್ಷವು ಮೂರನೇ ಅಂತರ್‌ರಾಷ್ಟ್ರೀಯದ ಆಜ್ಞೆಯನ್ನು ಕೊಂಚವೂ ಮೀರದೆ ಟ್ರೇಡ್ ಯೂನ್ಯಿನಲ್ಲಿ ಒಡಕು ಹುಟ್ಟಿಸಿ ತನ್ನದೇ ಆದ ರೆಡ್ ಟ್ರೇಡ್ ಯೂನಿಯನ್ ಸಂಸ್ಥೆಯೊಂದನ್ನು ಕಟ್ಟಿಕೊಂಡಿದ್ದಿತು. ಪ್ರತಿಯೊಂದು ಸಣ್ಣ ಪಕ್ಷವೂ ತನ್ನದೇ ಆದ ಟ್ರೇಡ್ ಯೂನಿಯನ್ ಕಟ್ಟಿಕೊಂಡರೆ ಕೂಲಿಕಾರ ಒಕ್ಕಲಿಗ ಸಂಸ್ಥೆಗಳ ಹಣೆಬರಹ ಏನಾಗುವುದೆನ್ನುವುದನ್ನು ಹೇಳುವುದು ಕಷ್ಟ. ಪ್ರತಿಯೊಂದು ಉದ್ಯಮದ, ಪ್ರತಿಯೊಂದು ಕಾರಖಾನೆಯ ಕೂಲಿಕಾರರ ಸಂಘಗಳಲ್ಲಿ ಒಡಕು ಹುಟ್ಟಿ ಅವು ತಮ್ಮತಮ್ಮಲ್ಲಿ ಕಾದಾಡಿಕೊಳ್ಳುವ ವಿರುದ್ಧ ಸಂಸ್ಥೆಗಳಾಗುವವು. ನಮ್ಮ ಕಮ್ಯುನಿಸ್ಟ್ ಬಾಂಧವರಿಗೂ ಮೂರನೆಯ ಅಂತರ್‌ರಾಷ್ಟ್ರೀಯ ಸಂಸ್ಥೆಗೂ ಮಾರ್ಕ್ಸ್‌ವಾದದ ಇಂತಹ ಮೂಲ ತತ್ವವು ಕೂಡ ತಿಳಿಯದಿದ್ದುದು ಸೋಜಿಗವೇ ಸರಿ. ಟ್ರೇಡ್ ಯೂನಿಯನ್ನುಗಳ ವಿಷಯದಲ್ಲಿ ಕೂಡ ಕಾಂಗ್ರೆಸ್ ಸಾಮ್ಯವಾದೀ ಪಕ್ಷದ ಧೋರಣೆ ಬೇರೆಯಾಗಿ—ನಿಜವಾದ ಮಾರ್ಕ್ಸ್‌ವಾದಕ್ಕೆ ಸರಿಯಾಗಿ ಇದ್ದಿತು. ನಮ್ಮ ಪಕ್ಷಕ್ಕೆ ಮೊದಲಿನಿಂದಲೂ ಟ್ರೇಡ್‌ಯೂನಿಯನ್ನುಗಳ ಐಕ್ಯದಲ್ಲಿ ವಿಶ್ವಾಸವಿದ್ದುದರಿಂದ ನಾವು ಕೊನೆಯವರೆಗೂ ಆ ಧ್ಯೇಯ ಸಾಧನೆಗಾಗಿ ಯತ್ನಿಸಿದೆವು. ಈ ಐಕ್ಯವಾಗುವವರೆಗೆ ನಮ್ಮ ಪಕ್ಷವು ಅಖಿಲ ಭಾರತ ಟ್ರೇಡ್ ಯೂನಿಯನ್ ಕಾಂಗ್ರೆಸ್ಸಿನೊಡನೆ ಸಹಕರಿಸಿತು. ನಮ್ಮ ಪಕ್ಷದ ನಿಯಂತ್ರಣದಲ್ಲಿದ್ದ, ಮತ್ತು ನಾವು ಸಂಘಟಿಸಿದ ಎಲ್ಲ ಕೂಲಿಕಾರ ಸಂಸ್ಥೆಗಳು ಅಖಿಲ ಭಾರತ ಟ್ರೇಡ್ ಯೂನಿಯನ್ ಕಾಂಗ್ರೆಸ್ಸನ್ನು ಸೇರಲೇಬೇಕೆಂದು ತೀರ್ಮಾನಿಸಿದೆವು. ಆಗಿನ ಇಂಥ ಮೂರು ಕೂಲಿಕಾರ ಸಂಸ್ಥೆಗಳಲ್ಲಿ ಈ ಟ್ರೇಡ್ ಯೂನಿಯನ್ ಕಾಂಗ್ರೆಸ್ಸನ್ನೇ ಆಯುವುದರಲ್ಲಿ ನಮ್ಮ ಪಕ್ಷವು ಸರಿಯಾದ ನಿರ್ಣಯವನ್ನೇ ಮಾಡಿತು. ಏಕೆಂದರೆ ಉಳಿದ ಎರಡು ಸಂಸ್ಥೆಗಳು ಕೆಲವು ಕಾಲದ ನಂತರ ಅಖಿಲ ಭಾರತ ಟ್ರೇಡ್ ಯೂನಿಯನ್ ಕಾಂಗ್ರೆಸ್ಸಿನಲ್ಲಿ ಕೂಡಿಕೊಂಡುವು. ನಮಗೂ ಕಮ್ಯುನಿಸ್ಟ್ ಪಕ್ಷಕ್ಕೂ ಇದ್ದ ಭಿನ್ನತೆಗೆ ಇಲ್ಲಿ ಇನ್ನೊಂದು ಉದಾಹರಣೆ ಇದೆ. ಈ ಉದಾಹರಣೆ

ನಾವು ಅತ್ಯಂತ ಮಹತ್ವದ್ದೆಂದು ತಿಳಿದಿರುವ ಮತ್ತು ಅದರ ಸಾಧನೆಗಾಗಿ ಹೆಣಗುತ್ತಿರುವ ಸಾಮ್ಯವಾದೀ ಪಂಗಡಗಳ ಐಕ್ಯಕ್ಕೇ ಸಂಬಂಧಿಸಿದ್ದು. ಕಮ್ಯುನಿಸ್ಟ್ ಪಕ್ಷವು ತಾನು ಮಾತ್ರವೇ ಏಕಮೇವ ಸಾಮ್ಯವಾದೀ ಸಂಸ್ಥೆಯೆಂದು ತಿಳಿದು ಉಳಿದ ತತ್ಸಮ ಸಂಸ್ಥೆಗಳನ್ನು ವೈರಿಯೆಂದೇ ಭಾವಿಸುತ್ತಿತ್ತು. ಆದರೆ ನಮ್ಮ ಪಕ್ಷವಾದರೋ ಎಲ್ಲ ಸಾಮ್ಯವಾದೀ ಪಂಗಡಗಳ ಸಹಕಾರವನ್ನು ಬಯಸಿ ಸಂಯುಕ್ತ ಸಾಮ್ಯವಾದೀ ಪಕ್ಷದ ಸ್ಥಾಪನೆಗೆ ಯತ್ನಿಸುತ್ತಲಿತ್ತು

ಇಂದಿನಂತೆ ಅಂದಿನ ದಿನಗಳಲ್ಲಿ ಕೂಡ, ನಾವು ಸಾಮ್ಯವಾದಿಗಳಲ್ಲವೆಂಬುದೂ ಮತ್ತು ಮಾರ್ಕ್ಸ್‌ವಾದದ ಗಂಧಗಾಳಿ ಕೂಡ ನಮಗೆ ಗೊತ್ತಿಲ್ಲವೆಂಬುದೂ ಕಮ್ಯುನಿಸ್ಟರು ನಮ್ಮ ಮೇಲೆ ಉಗ್ರವಾಗಿ ದಾಳಿ ಮಾಡುವ ರೀತಿಯಾಗಿತ್ತು. ಮಾರ್ಕ್ಸ್ ಮತ್ತು ಲೆನಿನ್ನನ ನಿಜವಾದ ಪರಿವ್ರಾಜಕರೆಂದರೆ ತಾವೇ ಎಂದು ಅವರು ಬೆನ್ನು ತಟ್ಟಿಕೊಳ್ಳುತ್ತಿದ್ದರು. ಈ ಸ್ವಯಂನಿರ್ಮಿತ ಪರಿವ್ರಾಜಕರು ಮುಂದೆ ಸ್ವಲ್ಪ ಕಾಲದಲ್ಲಿಯೇ ತಮ್ಮ ಮೂಲ ಧೋರಣೆಗಳನ್ನೆಲ್ಲ ಮರೆತುಬಿಡತೊಡಗಿದರು---ತಮ್ಮ ಮಾತುಗಳನ್ನು ತಾವೇ ಹಿಂದೆಗೆದುಕೊಳ್ಳತೊಡಗಿದರು. ತಾವು ಅರ್ಧಮರ್ಧ ಅರಗಿಸಿಕೊಂಡ ಮಾರ್ಕ್ಸ್ ತತ್ವಗಳೆಲ್ಲ ತಮಗೇ ಮುಳುವಾದವೆಂದು ಅವರಿಗೆ ತೋರಿರಬೇಕು. ಮುಂದೆ ಎರಡು ವರುಷಗಳಲ್ಲಿಯೇ, ತಾವು ಕಟ್ಟಿದ ಕೂಲಿಕಾರ ಸಂಸ್ಥೆ (ರೆಡ್‌ಟ್ರೇಡ್ ಸಂಸ್ಥೆ)ಗಳನ್ನೆಲ್ಲ ವಿಸರ್ಜಿಸಿ ಕಾಂಗ್ರೆಸ್ಸಿನೆಡೆಗೆ ಧಾವಿಸಿಬಂದರು. ಮತ್ತು ಹೆಸರಿನ ಮಟ್ಟಿಗಾದರೂ ಸಾಮ್ಯವಾದಿಗಳ ಐಕ್ಯಕ್ಕೆ ಒಪ್ಪಿಗೆಕೊಟ್ಟು ಅಖಿಲ ಭಾರತ ಟ್ರೇಡ್ ಯೂನಿಯನ್ ಕಾಂಗ್ರೆಸ್ಸನ್ನು ಸೇರಿದರು ಹೀಗೆ, ಕಮ್ಯುನಿಸ್ಟ್ ಪಕ್ಷವು ಪ್ರತಿಪಾದಿಸುತ್ತಿರುವ ಗಿಳಿಪಾಠದ ಮಾರ್ಕ್ಸ್ ತತ್ವಗಳಿಂದ ಕಾಂಗ್ರೆಸ್ ಸಾಮ್ಯವಾದೀ ಪಕ್ಷದ ಮಾರ್ಕ್ಸ್‌ವಾದವೇ ಯೋಗ್ಯವಾದುದೆಂದು ಸಿದ್ಧವಾಯಿತು

ಈ ಕತೆಯನ್ನು ಮುಂದುವರಿಸುವಾ. ಕಮ್ಯುನಿಸ್ಟರು ತೋರಿಸುತ್ತಿರುವ ಹಗೆತನಕ್ಕಾಗಿ, ಕಾಂಗ್ರೆಸ್ ಸಾಮ್ಯವಾದೀ ಪಕ್ಷದಲ್ಲಿ ಯಾವ ಕಮ್ಯುನಿಸ್ಟ್ ಸದಸ್ಯನನ್ನೂ ಸೇರಿಸಿಕೊಳ್ಳ ಕೂಡದೆಂದು ತೀರ್ಮಾನವಾಯಿತು. ಈ ತೀರ್ಮಾನಕ್ಕೆ ಕಮ್ಯುನಿಸ್ಟರ ಧೋರಣೆಯೇ ಕಾರಣವಾಗಿತ್ತು. ಹೀಗಿದ್ದರೂ, ಆರಂಭ

ದಿಂದಲೂ, ಇಂಥ ನಿರ್ಬಂಧವು ಅನವಶ್ಯಕವೆನಿಸುವ ಪರಿಸ್ಥಿತಿಯನ್ನು ನಿರ್ಮಿಸಲಿಕ್ಕೂ ಸಹಕಾರದ ಮೂಲಕ ಎರಡೂ ಪಕ್ಷಗಳನ್ನು ಒಂದುಗೂಡಿಸಲಿಕ್ಕೂ ನಮ್ಮ ಕಾರ್ಯಕಾರೀ ಸಮಿತಿ ನಿರ್ಧರಿಸಿತ್ತು. ಆದ್ದರಿಂದ ನಮ್ಮ ಪಕ್ಷದ ಕಾರ್ಯದರ್ಶಿಯೂ ಕಾರ್ಯಕಾರೀ ಮಂಡಲದ ಕೆಲವು ಸದಸ್ಯರೂ ಆ ಮೇಲಿನ ಕೆಲವು ತಿಂಗಳು ಕಮ್ಯುನಿಸ್ಟ್ ಮುಂದಾಳುಗಳೊಂದಿಗೆ ಸಂಪರ್ಕ ಬೆಳೆಸಿದರು. ಇಂಥ ಸಂಬಂಧವು ನಮ್ಮ ಪಕ್ಷದ ದೃಷ್ಟಿಯಿಂದ ಬಹಳ ಮಹತ್ವದ್ದಾಗಿದ್ದಿತು. ಒಂದು ವರುಷ ಹೀಗೆಯೇ ನಡೆಯಿತು. ಅಷ್ಟರಲ್ಲಿ, ಎಂಟು ವರುಷಗಳ ನಂತರ ಮಾಸ್ಕೋದಲ್ಲಿ ಮೂರನೇ ಅಂತರ್ ರಾಷ್ಟ್ರೀಯದ ಏಳನೇ ಅಧಿವೇಶನವು ಸೇರಿ ತನ್ನ ಧೋರಣೆಯನ್ನು ಆಮೂಲಾಗ್ರವಾಗಿ ಬದಲಿಸಿತು. ಅಂತೂ ಇದು ನಡೆದದ್ದು ಭಾರತದ ಕಮ್ಯುನಿಸ್ಟ್ ಪಕ್ಷವು ಕಾಂಗ್ರೆಸ್ಸಿನ ವಿಷಯದಲ್ಲಿ, ಕಾಂಗ್ರೆಸ್ ಸಾಮ್ಯವಾದೀ ಪಕ್ಷದ ವಿಷಯದಲ್ಲಿ ಮತ್ತು ಅಖಿಲ ಭಾರತ ಟ್ರೇಡ್ ಯೂನಿಯನ್ ಕಾಂಗ್ರೆಸಿನ ವಿಷಯದಲ್ಲಿ ಅಧಿಕೃತವಾಗಿ ತನ್ನ ಧೋರಣೆಯನ್ನು ಬದಲಿಸುವುದಕ್ಕಿಂತ ಸ್ವಲ್ಪ ಮೊದಲು.

೧೯೩೬ನೇ ಜನೆವರಿಯಲ್ಲಿ ಮೀರತ್ತಿನಲ್ಲಿ ನಮ್ಮ ಪಕ್ಷದ ಎರಡನೇ ಅಧಿವೇಶನ ಜರುಗಿತು. ನಮ್ಮ ಕಾರ್ಯದರ್ಶಿಯ ವರದಿಯ ಮೇರೆಗೆ, ಕಾಂಗ್ರೆಸ್ ಸಾಮ್ಯವಾದೀ ಪಕ್ಷದಲ್ಲಿ ಕಮ್ಯುನಿಸ್ಟರನ್ನು—ಅವರ ನಡತೆಯನ್ನು ಪರೀಕ್ಷಿಸುವ ಅಧಿಕಾರವನ್ನಿಟ್ಟುಕೊಂಡು—ಸೇರಿಸಿಕೊಳ್ಳಲು ಕಾರ್ಯಕಾರೀ ಸಮಿತಿಯು ನಿರ್ಧರಿಸಿತು; ನಮ್ಮ ಪಕ್ಷವು ಈ ತೀರ್ಮಾನವನ್ನು ಸ್ವಯಂ ಸ್ಫೂರ್ತಿಯಿಂದ ಸ್ವೀಕರಿಸಿತ್ತೆಂಬುದು ಗಮನಿಸತಕ್ಕ ಮಾತು. ಪ್ರಮುಖ ಕಮ್ಯುನಿಸ್ಟರಿಗೆ ನಮ್ಮ ಪಕ್ಷದ ಮುಖ್ಯ ಧೋರಣೆ ಒಪ್ಪಿತವಾಗಿದೆಯೆಂದೂ ಅವರನ್ನು ಸೇರಿಸಿಕೊಳ್ಳುವುದರಿಂದ ಸಾಮ್ಯವಾದಿಗಳ ಐಕ್ಯವನ್ನು ಇನ್ನಷ್ಟು ಸಾಧಿಸಿದಂತಾಗುವುದೆಂದೂ ಬಗೆದು ಈ ನಿರ್ಣಯವನ್ನು ಕೈಕೊಳ್ಳಲಾಯಿತು. ಹೀಗಿದ್ದರೂ ಕಮ್ಯುನಿಸ್ಟ್ ಪಕ್ಷವು ತನ್ನ ಹಳೆಯ ಧೋರಣೆಗೇ ಅಂಟಿಕೊಂಡಿತ್ತು. ನಮ್ಮ ಪಕ್ಷವು ಐಕ್ಯ ಸಂಘಟನೆಗಾಗಿ ಇಂಥ ಕ್ರಾಂತಿಕಾರಕ ಕಾರ್ಯಕ್ರಮದಲ್ಲಿ ತೊಡಗಿದ್ದರೂ ಕಮ್ಯುನಿಸ್ಟ್ ಪಕ್ಷವು ಮೀರತ್ ಸಮ್ಮೇಲನಕ್ಕೆ ತನ್ನ ಒಬ್ಬ ಪ್ರತಿನಿಧಿಯನ್ನು 'ಬಂಡವಲುಗಾರ ಎಡಪಕ್ಷದ ಚಟುವಟಿಕೆ' ಗಳನ್ನು ಕುರಿತು ವರದಿ ಮಾಡುವುದಕ್ಕೆ ಮಾತ್ರವೇ ಕಳಿಸಿತ್ತೆಂಬುದು ಮರೆಯಕೂಡದು!

ಅಂತೂ ಆ ಮೇಲಿನ ಕೆಲವು ತಿಂಗಳ ನಂತರ, ಕಾಂಗ್ರೆಸ್ ಸಾಮ್ಯವಾದೀ ಪಕ್ಷದ ಸ್ನೇಹಹಸ್ತವನ್ನು ಸ್ವೀಕರಿಸಲು ಕಮ್ಯುನಿಸ್ಟ್ ಪಕ್ಷವು ನಿರ್ಧರಿಸಿತು. ಅದು ಸುಮಾರು ಲಕ್ನೋ ಕಾಂಗ್ರೆಸ್ಸಿನ ಕಾಲ. ಆ ಪಕ್ಷದ ಈ ನಿರ್ಣಯದಿಂದ ನಮಗೆ ಅಳತೆಮೀರಿದ ಸಮಾಧಾನವಾಯಿತು. ಇದರಿಂದ ಸಾಮ್ಯವಾದಿಗಳ ಐಕ್ಯಪಥದಲ್ಲಿ ಇನ್ನಷ್ಟು ಮುನ್ನಡೆಯಾಯಿತೆಂದು ನಾವು ಭಾವಿಸಿದೆವು. ರಾಯ್‌ವಾದಿಗಳು ಈಗಾಗಲೇ ನಮ್ಮ ಜೊತೆಗೂಡಿದ್ದರು. ಕಮ್ಯುನಿಸ್ಟರೂ ಸೇರಿಬಿಟ್ಟರೆ ನಮ್ಮ ನಮ್ಮೊಳಗಿನ ಭಿನ್ನತೆಗಳು ಕರಗಿ, ವಿಶ್ವಾಸ ಬೆಳೆದು, ಭಾರತದ ಸಂಯುಕ್ತ ಸಾಮ್ಯವಾದೀ ಪಕ್ಷವು ಉದಯವಾಗುವುದೆಂದು ನಾವು ನಂಬಿಕೊಂಡಿದ್ದೆವು.

ಆದರೆ ಆಗಲೂ, ಈ ಎರಡು ಪಕ್ಷಗಳ ನಡುವಿನ ಭಿನ್ನಾಭಿಪ್ರಾಯವನ್ನು ನಾವು ಮರೆತಿದ್ದೆವೆಂದು ತಿಳಿಯಕೂಡದು. ಇದಕ್ಕೆ ಉದಾಹರಣೆ ಮೂರನೇ ಅಂತರ್ ರಾಷ್ಟ್ರೀಯವನ್ನು ಸೇರುವ ವಿಷಯದಲ್ಲಿ ಬರುವ ತೊಂದರೆ ಸಹಕಾರವು ಬೆಳೆದು ಬಂದಂತೆಲ್ಲ ನಡುವೆ ಬರುವ ಸಮಸ್ಯೆಗಳನ್ನು ಪರಿಹರಿಸಬೇಕೇ ಹೊರತು ಆರಂಭಕ್ಕೇ ಎಲ್ಲ ಸಮಸ್ಯೆಗಳ ಪರಿಹಾರವು ಸಾಧ್ಯವಿಲ್ಲವೆಂದು ನಮ್ಮ ಮತವಾಗಿತ್ತು. ಬಾಲ್ಯದಲ್ಲಿ ಪರಿಹರಿಸಿಕೊಳ್ಳಲಾರದ ಸಮಸ್ಯೆಗಳನ್ನು ಯಾವುದೊಂದು ಸಂಸ್ಥೆಯು ಬೆಳೆದು ದೊಡ್ಡದಾದ ಮೇಲೆ—ಆಗ ಬಲವೂ ಸಾಧನಗಳೂ ಇರುವುದರಿಂದ—ಸುಲಭವಾಗಿ ಬಿಡಿಸಿಕೊಳ್ಳಬಹುದೆಂಬುದು ನಮ್ಮ ನಿರೀಕ್ಷೆಯಾಗಿತ್ತು. ಐಕ್ಯದ ವಿಷಯದಲ್ಲಿ ಉಳಿದ ಪಕ್ಷಗಳು ನಮ್ಮಂತೆ ದೃಢವಾಗಿಯೂ ಪ್ರಾಮಾಣಿಕತನದಿಂದಲೂ ನಡೆದಿದ್ದರೆ ನಮ್ಮ ಮಾತು ಖಂಡಿತವಾಗಿಯೂ ಸತ್ಯವಾಗುತ್ತಿತ್ತೆಂಬುದನ್ನು ಅನುಭವವು ತೋರಿಸಿಕೊಟ್ಟಿದೆ.

ಅಂತೂ ಮೀರತ್ ಅಧಿವೇಶನದ ನಂತರ ಅನೇಕ ಕಮ್ಯುನಿಸ್ಟರು ನಮ್ಮ ಪಕ್ಷವನ್ನು ಸೇರಿದರು. ಅವರನ್ನು ಪಕ್ಷದಲ್ಲಿ ಸೇರಿಸಿಕೊಳ್ಳುವುದು ನಮ್ಮ ಕಾರ್ಯಕಾರೀ ಸಮಿತಿಯ ಅಪ್ಪಣೆಯ ನಂತರವೇ ಸಾಧ್ಯವೆಂಬುದನ್ನು ಪ್ರತಿಒಬ್ಬರಿಗೂ ತಿಳಿಸಲಾಗಿದ್ದಿತು. ಆದರೆ ಅಪ್ಪಣೆ ಪಡೆದುಕೊಳ್ಳುವ ಪರಿಪಾಠವನ್ನೇನೂ ಇಟ್ಟುಕೊಂಡಿರಲಿಲ್ಲ. ಈ ತೀರ್ಮಾನವು ಕಾರ್ಯಕಾರೀ ಸಮಿತಿಯ ಗಮನದಲ್ಲಿದ್ದರೂ ಈ ವಿಷಯದಲ್ಲಿ ಅಂತಹ ಚೊಕ್ಕ ತಾಂತ್ರಿಕ ಕ್ರಮ

ವನ್ನು ಹಿಡಿಯುಲು ಅದು ಬಯಸಲಿಲ್ಲ. ಇದು ನಿಜವಾಗಿಯೂ ದೊಡ್ಡ ತಪ್ಪಾಯಿತು. ಕಮ್ಯುನಿಸ್ಟರು ನಮ್ಮ ಸೌಜನ್ಯವನ್ನು ಹೀಗೆ ದುರುಪಯೋಗಿಸಿಕೊಂಡು ನಮ್ಮಲ್ಲಿ ಸೇರಿಕೊಂಡರು; ಮತ್ತು ಆ ಮೇಲೆ ಭಿನ್ನಾಭಿಪ್ರಾಯವಾದಾಗ ತಾವು ಕಮ್ಯುನಿಸ್ಟ್ ಸದಸ್ಯರಲ್ಲವೇ ಅಲ್ಲವೆಂದು ಸಾಧಿಸಿದರು.

ಕಮ್ಯುನಿಸ್ಟರು ನಮ್ಮ ಪಕ್ಷವನ್ನು ಸೇರಿದಂತೆಲ್ಲ, ಕ್ರಮೇಣ, ಅಪಸ್ವರಗಳು ಸ್ಪಷ್ಟವಾಗಿ ಕೇಳಿಬರತೊಡಗಿದುವು. ೧೯೩೬ರ ಕೊನೆಯ ಭಾಗದಲ್ಲಿ, ಕಮ್ಯುನಿಸ್ಟರು ಕಾಂಗ್ರೆಸ್ ಸಾಮ್ಯವಾದೀ ಪಕ್ಷದಲ್ಲಿ ಒಡಕು ಹುಟ್ಟಿಸುತ್ತಿರುವರೆಂದೂ ನಮ್ಮ ಸಂಘ ಸಂಸ್ಥೆಗಳನ್ನು ವಶಪಡಿಸಿಕೊಳ್ಳಲು ಹವಣಿಸುತ್ತಿರುವರೆಂದೂ ವರದಿಗಳು ಬರತೊಡಗಿದುವು. ಆಂಧ್ರ ಪ್ರಾಂತದಿಂದ ಇಂತಹ ಹಲವು ದೂರುಗಳು ಬಂದುವು ನಮ್ಮ ಪಕ್ಷದ ಹೊರಗೆ ಕೂಡ, ನಮ್ಮ ಕಾರ್ಯಕರ್ತರಿಗೂ ಕಮ್ಯುನಿಸ್ಟ್ ಕಾರ್ಯಕರ್ತರಿಗೂ ಸೌಹಾರ್ದಯುಕ್ತ ಸಂಬಂಧವಿರಲಿಲ್ಲ ಕಾನಪುರ, ಮುಂಬೈ ಮತ್ತು ಕಲಕತ್ತೆಯ ಕೂಲಿಕಾರರಿಂದ ದೂರುಗಳು ಬರುತ್ತಿದ್ದುವು. ಕೂಲಿಕಾರ ಆಂದೋಲನವನ್ನು ನಡೆಸುವ ಹಕ್ಕು ತಮ್ಮದು ಮಾತ್ರವೆಂದು ಕಮ್ಯುನಿಸ್ಟರು ಪ್ರಚಾರಮಾಡುತ್ತಲಿದ್ದುದು ಕಂಡು ಬಂದಿತು. ಸಂಧಿಸಾಧಕ ಸುಧಾರಕರಿಬ್ಬರಿಗೂ ಅವರು ಈ ರೀತಿಯ ನಿರ್ಬಂಧವನ್ನೊಡ್ಡಿದ್ದರೆ ಚನ್ನಾಗುತಿತ್ತೆಂದು ನಮ್ಮ ಅಭಿಪ್ರಾಯ ತಮ್ಮ ಮತಕ್ಕೆ ಸೇರದ ಸಾಮ್ಯವಾದೀ ಕೆಲಸಗಾರರನ್ನು ಕೂಲಿಕಾರ ಆಂದೋಲನದಿಂದ ದೂರವಿಡಲು ಅವರು ಈ ಒಳಸಂಚು ಹೂಡಿದ್ದರೆಂಬುದು ಸ್ಪಷ್ಟವಿದೆ. ಅವರು ಕಾಂಗ್ರೆಸ್ ಸಾಮ್ಯವಾದೀ ಪಕ್ಷದಲ್ಲಿ ನಡೆಸಿದ ಭೇದ ನೀತಿಯ ಪ್ರಚಾರದ ವಿಷಯದಲ್ಲಿ ಎಚ್ಚರದಿಂದಿರಲು ನಮ್ಮ ಕಾರ್ಯಕಾರೀ ಸಮಿತಿಯು ಎಲ್ಲ ಪ್ರಾಂತಿಕ ಸಂಸ್ಥೆಗಳಿಗೂ ಸೂಚಿಸಿತೇ ಹೊರತು ಇನ್ನೇನೂ ಮಾಡಲಿಲ್ಲ.

ಇದೇ ಪರಿಸ್ಥಿತಿಯು ತಿಂಗಳುಗಟ್ಟಲೆ ಹಾಗೆಯೇ ಸಾಗುತ್ತಲಿದ್ದಿತು. ಆಗ ೧೯೩೭ನೇ ಆಗಸ್ಟಿನಲ್ಲಿ ಒಮ್ಮಿಂದೊಮ್ಮೆ ನಮ್ಮ ಮತ್ತು ಕಮ್ಯುನಿಸ್ಟರ ನಡುವಿನ ಸಂಬಂಧದಲ್ಲಿ ಪಲ್ಲಟವಾಗುವಂತಹ ತಲ್ಲಣದ ಸುದ್ದಿಯೊಂದು ಬಂದಿತು. ಇಲ್ಲಿಗೆ ಈ ಕತೆಯ ಎರಡನೆ ಭಾಗವು ಮುಗಿದು ಮೂರನೆಯದು ಮೊದಲಾಯಿತು.

ಹಿಂದೆ ನಮ್ಮ ಮತ್ತು ರಾಯ್‌ವಾದಿಗಳ ಮಧುರ ಸಂಬಂಧವು ಕೆಡಲು ರಾಯ್ ಪಕ್ಷವೇ ಕಾರಣವಾದಂತೆ ಇಲ್ಲಿ ಕಮ್ಯುನಿಸ್ಟ ಪಕ್ಷಕ್ಕೂ ನಮಗೂ ಒಡಕು ಬೆಳೆಯಲು ಕಮ್ಯುನಿಸ್ಟ್ ಪಕ್ಷವೇ ಕಾರಣವಾಯಿತು. ಆಗಸ್ಟಿನಲ್ಲಿ ಪಾಟ್ನಾದಲ್ಲಿ ನಮ್ಮ ಕಾರ್ಯಕಾರೀ ಸಮಿತಿ ಸೇರುವುದಿತ್ತು. ಈ ಸಭೆಯಲ್ಲಿ ನಮ್ಮ ಕಾರ್ಯಕಾರೀ ಸಮಿತಿಯ ಗಮನಕ್ಕೆ ಬಂದ ಕಮ್ಯುನಿಸ್ಟರ ಒಂದು ಪ್ರಕಟನೆ ನಮ್ಮನ್ನು ಕೆರಳಿಸಿತು. ಈ ಗುಪ್ತ ಘೋಷಣೆಯನ್ನು ಪ್ರಕಟಿಸಿದ್ದು ಬರಿಯ ಕಮ್ಯುನಿಸ್ಟ್ ಸದಸ್ಯರಿಗಾಗಿ. ಅದರಲ್ಲಿ 'ಕಾಂಗ್ರೆಸ್ ಸಾಮ್ಯವಾದೀ ಪಕ್ಷವು ಸಾಮ್ಯವಾದೀ ಪಕ್ಷವಲ್ಲ'ವೆಂದೂ ಆದ್ದರಿಂದ 'ಕಮ್ಯುನಿಸ್ಟ್ ಪಕ್ಷವು ಪ್ರತಿಸ್ಪರ್ಧಿಯಾದ ಯಾವುದೇ ಸಂಸ್ಥೆಯನ್ನು ಸೈರಿಸುವುದು ಸಾಧ್ಯವಿಲ್ಲ'ವೆಂದೂ ಹೇಳಲಾಗಿತ್ತು. ಮತ್ತು ಕಮ್ಯುನಿಸ್ಟ್ ಪಕ್ಷ ಮಾತ್ರವೇ ನಿಜವಾದ ಸಾಮ್ಯವಾದೀ ಪಕ್ಷವೆಂದೂ ಕಾಂಗ್ರೆಸ್ ಸಾಮ್ಯವಾದೀ ಪಕ್ಷವನ್ನು ಎಡಪಕ್ಷದ ಸಂಘಟನೆಗಾಗಿ ಉಪಯೋಗಿಸಬೇಕೆಂದೂ ಸೂಚಿಸಲಾಗಿತ್ತು.

ನಮ್ಮ ಪಕ್ಷವು ಕಮ್ಯುನಿಸ್ಟ್ ಪಕ್ಷದ ಹೇಳಿಕೆಯ ಸ್ವರೂಪವನ್ನು ಪೂರ್ಣವಾಗಿ ತಿಳಿದುಕೊಳ್ಳುವುದು ಆವಶ್ಯಕವಾಗಿದ್ದಿತು. ಕಾಂಗ್ರೆಸ್ ಸಾಮ್ಯವಾದೀ ಪಕ್ಷದ ವಿಷಯದಲ್ಲಿ ಕಮ್ಯುನಿಸ್ಟರು ತಳೆಯಬೇಕಾದ ಧೋರಣೆಯನ್ನು ಅದರಲ್ಲಿ ಸ್ಪಷ್ಟವಾಗಿ ಸೂಚಿಸಿದುದಲ್ಲದೆ ನಮ್ಮ ಪಕ್ಷದ ವಿಷಯದಲ್ಲಿ ತಮ್ಮ ಮುಂದಿನ ಧೋರಣೆಯನ್ನೂ ವಿವರಿಸಲಾಗಿತ್ತು. ಪಾಟ್ನಾದಲ್ಲಿ ಆಗ ಸೇರಿದ ನಮ್ಮ ಕಾರ್ಯಕಾರೀ ಸಮಿತಿಯು, ಕಮ್ಯುನಿಸ್ಟ್ ಪಕ್ಷದ ಇಂಥ ಧೋರಣೆಯ ಅಪಾಯಗಳನ್ನು ಅಲಕ್ಷಿಸಿ, ಬರಿಯ ಧ್ಯೇಯಸಾಧನೆಗಾಗಿ ಮಾಡಿದ ಸಂಘಟನಾತ್ಮಕ ತಪ್ಪನ್ನು ನೋಡಿದರೆ ವಿಷಾದವಾಗುತ್ತದೆ. ಕಮ್ಯುನಿಸ್ಟರ ಈ ಘೋಷಣೆ, ಕಾಂಗ್ರೆಸ್ ಸಾಮ್ಯವಾದೀ ಮತ್ತು ಕಮ್ಯುನಿಸ್ಟ್ ಪಕ್ಷಧ ನಡುವೆ ಲಕ್ನೋವಲ್ಲಿ ಆದ ಒಪ್ಪಂದದ ತಳಹದಿಯನ್ನೇ ಸಡಿಲಿಸಿಬಿಟ್ಟಿತು. ಈ ಒಪ್ಪಂದವೆಂದರೆ, ಈ ಎರಡೂ ಸಾಮ್ಯವಾದೀ ಪಕ್ಷಗಳು ಒಂದು ಸಾಮಾನ್ಯ ಧೋರಣೆಯನ್ನು ಹಿಡಿದು ಕ್ರಮೇಣ ಒಂದುಗೂಡಿ ಒಂದೇಒಂದು ಪಕ್ಷವಾಗಬೇಕೆಂಬುದು. ಈ ಒಪ್ಪಂದದ ತಳಹದಿಯ ಹೊರತು 'ಸಾಮ್ಯವಾದೀ ಐಕ್ಯ'ವನ್ನು ಕುರಿತು ಮಾತನಾಡುವುದರಲ್ಲಿ ಹುರುಳಿಲ್ಲ. ಕಮ್ಯುನಿಸ್ಟ್ ಪ್ರಕಟನೆಯು ಸಾರುವಂತೆ ಒಂದೇ ಒಂದು ಸಾಮ್ಯವಾದೀ ಪಕ್ಷವಿದ್ದುದಾದರೆ 'ಇನ್ನೊಂದು' ಸಾಮ್ಯವಾದೀ ಪಕ್ಷದೊಂದಿಗೆ ಕೂಡಿಕೊಳ್ಳುವ ಸಂದರ್ಭವೆಲ್ಲಿರುತ್ತಿದ್ದಿತು? ಕಮ್ಯು

ನಿಸ್ಟರು ಪಕ್ಷಾಂಧತೆಯ ಮತ್ತು ಗುತ್ತಿಗೆಗಾರತನದ ಸ್ವಭಾವವನ್ನು ಬಿಡಲು ಒಲ್ಲರೆಂಬುದನ್ನೂ ಸಾಮ್ಯವಾದಿಗಳ ಐಕ್ಯದಲ್ಲಿ ಅವರಿಗೆ ಮನಸ್ಸಿಲ್ಲವೆಂಬುದನ್ನೂ ಈ ಪ್ರಕಟನೆ ಸ್ಪಷ್ಟಪಡಿಸಿತು. ಸಾಮ್ಯವಾದೀ ಘೋಷಣೆ ಕಮ್ಯುನಿಸ್ಟರಿಗೆ ನಮ್ಮ ಪಕ್ಷದಲ್ಲಿ ಸೇರಿ ನಮ್ಮ ಕೈಯೊಳಗಿನ ಸಂಸ್ಥೆಗಳನ್ನು ವಶಪಡಿಸಿಕೊಳ್ಳಲು ಅನುಕೂಲ ವಾತಾವರಣವನ್ನುಂಟು ಮಾಡಿತು. ಈ ಕಮ್ಯುನಿಸ್ಟ ಪ್ರಕಟನೆ ಕಾಂಗ್ರೆಸ್ ಸಾಮ್ಯವಾದೀ ಪಕ್ಷವು ಬರಿಯ ಪ್ರಚಾರ ಸಂಸ್ಥೆಯಾಗಿ—ತಮ್ಮ ಪ್ರಭಾವಕ್ಕೊಳಗಾದ ಪ್ರಚಾರವೇದಿಕೆಯಾಗಿ—ಮಾತ್ರ ಬಾಳಬೇಕೆಂದು ಸ್ಪಷ್ಟವಾಗಿ ಸೂಚಿಸಿದಂತಾಯಿತು. ಇದಲ್ಲದೆ ಪ್ರತಿಸ್ಪರ್ಧಿಯಾದ ಇನ್ನೊಂದು ಸಾಮ್ಯವಾದೀ ಸಂಸ್ಥೆಯನ್ನು ಸಹಿಸುವುದು ಅಸಾಧ್ಯವೆಂಬ ಹೇಳಿಕೆ, ಕಮ್ಯುನಿಸ್ಟರ ಐಕ್ಯದ ಎಲ್ಲ ಮಾತೂ ಶುದ್ಧ ಠಕ್ಕುತನವೆಂಬುದನ್ನು ಸಿದ್ಧಪಡಿಸಿತು. ಎರಡೂ ಪಂಗಡಗಳು ಐಕ್ಯಕ್ಕಾಗಿ ಪ್ರಾಮಾಣಿಕತನದಿಂದ ಯತ್ನಿಸಿದ್ದರೆ ಪ್ರತಿ-ಸ್ಪರ್ಧಿಯೆಂಬ ಮಾತು ಏಕೆ ಬರುತ್ತಿತ್ತು? ಈ ಘೋಷಣೆಯಿಂದ ಎರಡು ಸಂಗತಿಗಳು ಸ್ಪಷ್ಟವಾದಂತಾಯಿತು. ಮೊದಲನೆಯದು, ಕಮ್ಯುನಿಸ್ಟ ಪಕ್ಷವು ಬೇರೆ ಯಾವ ಸಾಮ್ಯವಾದೀ ಪಕ್ಷಕ್ಕೂ ಮನ್ನಣೆ ಕೊಡಲು ಸಿದ್ಧವಿಲ್ಲದ್ದರಿಂದ ಅದಕ್ಕೆ ಸಾಮ್ಯವಾದೀ ಸಂಘಟನೆ ಬೇಕಾಗಿಲ್ಲವೆಂಬುದು. ಎರಡನೆಯದು, ಕಾಂಗ್ರೆಸ್ ಸಾಮ್ಯವಾದೀ ಪಕ್ಷವು ಸಾಮ್ಯವಾದೀ ಪಕ್ಷವಾಗಿ ಬಾಳದಂತೆ ಮಾಡಿ ಅದನ್ನು ತನ್ನ ಬರಿಯ ಪ್ರಚಾರವೇದಿಕೆಯನ್ನಾಗಿ ಮಾಡಿಕೊಳ್ಳ-ಬೇಕೆಂಬುದು.

ಇದರಿಂದ ಇಡಿಯ ಕಾರ್ಯಕಾರೀ ಸಮಿತಿಯೇ ಕೆರಳಿತು. ಕಾರ್ಯಕಾರೀ ಸಮಿತಿಯಲ್ಲಿ ಆಗ ಕಮ್ಯುನಿಸ್ಟ ಪಕ್ಷದ ಸಾಲ್ವರು ಸಭಾಸದರಿದ್ದರು. ಅವರು ಕೂಡ ರೊಚ್ಚಿಗೆದ್ದವರಂತೆ ನಟಿಸಿದರು (ಇಲ್ಲವಾದರೆ ತಮ್ಮ ಹೂರಣ ಹೊರಬೀಳಲಾರದೆ?) ಆ ಘೋಷಣೆಯನ್ನು ಸಮರ್ಥಿಸುವುದಕ್ಕಾಗಲಿ, ಇಲ್ಲವೇ ಅದರ ಬಗೆಗೆ ವಿಷಾದ ವ್ಯಕ್ತಪಡಿಸುವುದಕ್ಕಾಗಲಿ ಅವರಲ್ಲಿ ಒಬ್ಬರೂ ಯತ್ನಿಸಲಿಲ್ಲ. ಸ್ವಲ್ಪ ಚರ್ಚೆಯ ನಂತರ, ಇನ್ನು ಮುಂದೆ ತಮ್ಮ ಪಕ್ಷದಲ್ಲಿ ಯಾವ ಕಮ್ಯುನಿಸ್ಟ ಸದಸ್ಯನನ್ನೂ ಸೇರಿಸಿಕೊಳ್ಳಕೂಡದೆಂದು ಕಾರ್ಯಕಾರೀ ಸಮಿತಿ ಒಮ್ಮತದಿಂದ ನಿರ್ಧರಿಸಿತು. ಈ ತೀರ್ಮಾನವು ಅತಿ ಸೌಮ್ಯಸ್ವರೂಪದ್ದಾಗಿದ್ದಿತು, ದೋಷಯುಕ್ತವಾಗಿದ್ದಿತು, ಎಂದು ಅನುಭವದಿಂದ

ಕಂಡುಬಂದಿತು. ರಾಜನೈತಿಕ ಮತ್ತು ಸಂಘಟನೆಯ ಭದ್ರತೆಗೆ ಕಮ್ಯು ನಿಸ್ಟರ ಭಾವೀ ಪ್ರವೇಶವನ್ನು ಮಾತ್ರ ನಿರ್ಬಂಧಿಸಿದ್ದು ಸಾಕಾಗಲಿಲ್ಲ; ಈಗಾಗಲೇ ಸೇರಿಕೊಂಡ ಸದಸ್ಯರನ್ನು ತಳ್ಳುವುದೂ ಅಗತ್ಯವಿದ್ದಿತು. ಆದರೆ ನಮ್ಮ ಕಾರ್ಯಕಾರೀ ಸಮಿತಿ, ಇಂತಹ ಬಹಿಷ್ಕಾರದಿಂದ ಐಕ್ಯವು ಇನ್ನಷ್ಟು ದೂರ ಹೋಗಬಹುದೆಂದೂ ಈಗಿನ ನಿರ್ಣಯದಿಂದ ಕಮ್ಯುನಿಸ್ಟರು ತಪ್ಪನ್ನು ತಿದ್ದಿಕೊಳ್ಳಬಹುದೆಂದೂ ಊಹಿಸಿತು ಇದಲ್ಲದೆ ಕಮ್ಯುನಿಸ್ಟ್ ಮುಂದಾಳುಗಳಲ್ಲಿ ನಿಜವಾದ ಐಕ್ಯಕ್ಕಾಗಿ ಹಾತೊರೆಯುವವರು ಕೆಲವರಾದರೂ ಇರಬಹುದೆಂದು ತಿಳಿದಿದ್ದಿತು. ಕೊನೆಗೆ, ಇದು ಕೂಡ ಹಗಲುಗನಸೆಂದು ಸಿದ್ಧವಾಯಿತು.

ಹೀಗೆ, ಸಾಮ್ಯವಾದಿಗಳ ಐಕ್ಯಕ್ಕೆ ರಾಯ್‌ವಾದಿಗಳ ನಂತರ ಕಲ್ಲು ಹಾಕಿದವರೆಂದರೆ ಕಮ್ಯುನಿಸ್ಟರು.

೧೯೩೭ರ ಅಗಸ್ಟ್ ನಂತರ, ಕಾಂಗ್ರೆಸ್ ಸಾಮ್ಯವಾದೀ ಪಕ್ಷದ ಪರಿಸ್ಥಿತಿ ಅರ್ಧಾಂಗವಾತವಾದಂತೆ ಚಿಂತಾಜನಕವಾಯಿತು. ಆಗ ಕಮ್ಯುನಿಸ್ಟರನ್ನು ಹೊರದೂಡುವುದರ ಹೊರತು ಬೇರೆ ದಾರಿ ಉಳಿಯಲಿಲ್ಲ. ಆದರೂ ಇಷ್ಟು ದಿನಗಳ ವರೆಗೆ ದೃಢ ವಿಶ್ವಾಸದಿಂದ ಬೆಳೆಸಿಕೊಂಡು ಬಂದ ಧ್ಯೇಯ ಧೋರಣೆಗಳನ್ನು ಕೂಡಲೇ ಗಾಳಿಗೆ ತೂರಲು ಸಮಿತಿಯು ಸಿದ್ಧವಿರಲಿಲ್ಲ. ಹೀಗಿದ್ದರೂ, ಕಾರ್ಯರಂಗಕ್ಕಿಳಿಯುವಾಗ ಕಮ್ಯುನಿಸ್ಟರೊಂದಿಗೆ ಸಾಧ್ಯವಿದ್ದಷ್ಟು ಸಹಕಾರ, ಪ್ರೀತಿ ಮತ್ತು ಸಂಧಾನದ ಧೋರಣೆಯನ್ನೇ ಅನುಸರಿಸಲು ಕಾರ್ಯಕಾರೀ ಸಮಿತಿಯು ಯತ್ನಿಸಿತೆಂಬುದು ನಿಜ. ನಮ್ಮ ಪಕ್ಷದ ಕಾರ್ಯದರ್ಶಿಯು ಪುನರ್ಘಟನೆಯ ನೆವದಿಂದ, ಆಂಧ್ರ ಪ್ರಾಂತದ ನಮ್ಮ ಶಾಖೆಯನ್ನು ಕಮ್ಯುನಿಸ್ಟರ ಸ್ವಾಧೀನ ಪಡಿಸಿದರು. ಇದಕ್ಕೆ ಆ ಮೇಲೆ ಕಾರ್ಯಕಾರೀ ಸಮಿತಿಯ ಒಪ್ಪಿಗೆಯೂ ದೊರೆಯಿತು.

ಈ ಇತಿಹಾಸದ ಬೇಸರದ ಮತ್ತೊಂದು ಪ್ರಕರಣವೆಂದರೆ ೧೯೩೮ನೇ ಎಪ್ರಿಲಿನಲ್ಲಿ ಜರುಗಿದ ನಮ್ಮ ಪಕ್ಷದ ಲಾಹೋರ್ ಅಧಿವೇಶನ. ನಮ್ಮ ಪಕ್ಷವು ಈ ಮೊದಲೇ ಕೈಕೊಂಡ ನಿರ್ಣಯಗಳನ್ನು ಕಾರ್ಯರೂಪಕ್ಕೆ ತರಲು ಇಲ್ಲಿ ನಿರ್ಧರಿಸಿತು. ಇದೇ ಹೊತ್ತಿಗೆ ಕಮ್ಯುನಿಸ್ಟ್ ಪಕ್ಷವು ಒಂದು ವಿಸ್ಮಯಕಾರಕ ಹೇಳಿಕೆಯನ್ನು ನಮ್ಮ ಕಾರ್ಯಕಾರೀ ಸಮಿತಿಗೆ ಒಪ್ಪಿಸಿತು. ಇದು ಪಾಟ್ನಾದಲ್ಲಿ ನಡೆದ ಘಟನೆಗೆ ವಿಸಂಗತವಾದ ಕುಚೋದ್ಯವಾಗಿತ್ತು. ' ಕಮ್ಯುನಿಸ್ಟ್

ಪಕ್ಷದ ಅಭಿಪ್ರಾಯದ ಮೇರೆಗೆ ಕಾಂಗ್ರೆಸ್ ಸಾಮ್ಯವಾದೀ ಪಕ್ಷವೇ ನಿಜವಾದ ಮಾರ್ಕ್ಸ್‌ವಾದೀ ಕ್ರಾಂತಿಕಾರಕ ಪಕ್ಷ'ವೆಂದು ಆ ಹೇಳಿಕೆಯಲ್ಲಿ ಸ್ಪಷ್ಟಪಡಿಸಲಾಗಿದ್ದಿತು. ಮತ್ತು ಈ ಎರಡು ಪಕ್ಷಗಳ ಐಕ್ಯವೇ ಸಾಮ್ಯವಾದೀ ಐಕ್ಯದ ತಳಹದಿಯಾಗಬಲ್ಲದೆಂಬ ವಿಶ್ವಾಸವನ್ನು ವ್ಯಕ್ತಪಡಿಸಲಾಗಿದ್ದಿತು. ಇದು ನಡೆದದ್ದು ಪಾಟ್ನಾದ ಘಟನೆಯ ಎಂಟು ತಿಂಗಳ ನಂತರ. ಬರಿಯ ಎಂಟು ತಿಂಗಳ ಅವಧಿಯಲ್ಲಿ ನಮ್ಮ ಪಕ್ಷವು ಎಡಪಕ್ಷವಾಗುವುದರ ಬದಲು ಕ್ರಾಂತಿಕಾರೀ ಮಾರ್ಕ್ಸ್‌ವಾದೀ ಪಕ್ಷವಾಗಿತ್ತು. ಮೂರನೇ ಅಂತರ್‌ರಾಷ್ಟ್ರೀಯದ ಶಾಖೆ ಹೀಗೆ ಅಭಿಪ್ರಾಯ ಪಡಬೇಕಾದರೆ ನಾವು ಎಷ್ಟು ಪ್ರಗತಿ ಸಾಧಿಸಿರಬೇಕೆಂಬುದನ್ನು ನೋಡಿರಿ! ಆದರೂ ಕಮ್ಯುನಿಸ್ಟ್ ಪಕ್ಷದ ಈ ಕುಚೋದ್ಯಕ್ಕೆ ಯಾರೂ ಬಲಿ ಬೀಳಲಿಲ್ಲ. ಈ ಹೇಳಿಕೆಯ ನಿಜವಾದ ಉದ್ದೇಶ ಸ್ಪಷ್ಟವಿದೆ. ಅದನ್ನು ಓದುಗರು ಊಹಿಸಿರಬಹುದು. ಕಮ್ಯುನಿಸ್ಟ್ ಪಕ್ಷವು ನಿಜವಾಗಿಯೂ ಭಯಗೊಂಡಿತ್ತು. ಪಾಟ್ನಾ ಸಮ್ಮೇಲನದ ನಂತರ ನಮ್ಮ ಪಕ್ಷದಲ್ಲಿ ಕಮ್ಯುನಿಸ್ಟರ ಬಗೆಗೆ ತೀವ್ರ ತಿರಸ್ಕಾರವು ಹೆಚ್ಚುತ್ತಲಿದ್ದು ಅವರನ್ನು ಪಕ್ಷದಿಂದ ಹೊರತಳ್ಳಬೇಕೆಂಬ ಅಭಿಪ್ರಾಯಕ್ಕೆ ಒಳ್ಳೇ ಬೆಂಬಲ ದೊರೆಯುತ್ತಲಿದ್ದಿತು. ಐಕ್ಯದ ಹೆಸರಿನಿಂದ ನಮ್ಮ ಪಕ್ಷದದುರ್ಲಾಭ ಪಡೆಯಲು ಅವರಿಗೆ ಬೇಕಾದಷ್ಟು ಅವಕಾಶ ದೊರೆತಿದ್ದಿತು. ಶ್ರೀ. ಮಸಾನಿಯವರು ಸಮ್ಮೇಲನದ ಅಧ್ಯಕ್ಷರಾಗುವರೆಂಬುದರಿಂದ ಅವರ ಭಯ ಇನ್ನಿಷ್ಟು ಹೆಚ್ಚಿತು. ಅವರು ತಮ್ಮೊಡನೆ ಚೆನ್ನಾಟವಾಡಬಹುದೆಂದು ಕಮ್ಯುನಿಸ್ಟರು ತಿಳಿದುಕೊಂಡಿದ್ದರು. ಆದರೆ ಮಸಾನಿ ನಿಜವಾಗಿಯೂ ಅಂಥವರಲ್ಲ. ಕಮ್ಯುನಿಸ್ಟರ ಭಯಕ್ಕೂ ರೊಚ್ಚಿಗೂ ಕಾರಣವೆಂದರೆ ಮಸಾನಿಯವರಲ್ಲಿರುವಸಂಘಟನೆಯ ಮತ್ತು ನ್ಯಾಯಪರತ್ವದ ಶಕ್ತಿ. ಮಸಾನಿಗೂ ಕಮ್ಯುನಿಸ್ಟರಿಗೂ ತೀವ್ರ ಮತಭೇದವಿದ್ದರೂ ಎರಡೂ ಪಕ್ಷಗಳ ನಡುವೆ ಇರಬೇಕಾದ ಪ್ರಾಮಾಣಿಕ ಸಹಕಾರಕ್ಕೆ ಅವರು ಸಿದ್ಧರಿದ್ದರು ಆದರೆ ಐಕ್ಯದ ಹೆಸರಿನಲ್ಲಿ ಕಮ್ಯುನಿಸ್ಟರು ನಡೆಸಿದ ಒಳಸಂಚನ್ನು ತಿಳಿದುಕೊಂಡ ಮೊದಲಿಗರಲ್ಲಿ ಮಸಾನಿ ಮುಖ್ಯರು. ಆದ್ದರಿಂದ ಕಮ್ಯುನಿಸ್ಟರನ್ನು ಕೂಡಲೇ ಹೊರತಳ್ಳಬೇಕೆಂದು ಅವರು ಯೋಚಿಸಿದರು—ಕಮ್ಯುನಿಸ್ಟ್ ವಿರೋಧೀ ಧೋರಣೆಯಿಂದಲ್ಲ; ಆದರೆ ಅವರ ಸಾಮ್ಯವಾದೀ ಪಕ್ಷದ ವಿರುದ್ಧವಾದ ಧೋರಣೆಗೆ ಇದು ತಕ್ಕ ಮದ್ದೆಂದು. ಮಸಾನಿಯವರ ಈ ಜಾಣ್ಮೆಯ ತೀರ್ಮಾನವನ್ನು ನಮ್ಮ ಅನುಭವವು ಚೆನ್ನಾಗಿ

ಸಮರ್ಥಿಸಿದೆ. ಕಾಂಗ್ರೆಸ್ ಸಾಮ್ಯವಾದೀ ಸಮ್ಮೇಲನವು ಪುನರಪಿ ಪಾಟ್ನಾ ನಿರ್ಣಯವನ್ನೇ ಕೈಕೊಳ್ಳುವುದನ್ನು ಬಿಟ್ಟು ಅದಕ್ಕೂ ಮುಂದೆ ಹೋಗಬಹುದೆಂಬ ಹೆದರಿಕೆ ಕಮ್ಯುನಿಸ್ಟರಿಗೆ ಬಹಳವಾಗಿತ್ತು. ಈ ಹೆದರಿಕೆಯೇ ಅವರು ಮೇಲಿನ ಹೇಳಿಕೆಯನ್ನು ನಮ್ಮ ಪಕ್ಷದ ಮುಂದಿಡುವಂತೆ ಮಾಡಿದ್ದು. ಕಮ್ಯುನಿಸ್ಟರ ಅಪ್ರಮಾಣಿಕತನವನ್ನು ಅದೇ ಸಭೆಯಲ್ಲಿಯೇ ಬಯಲಿಗೆಳೆಯಲಾಯಿತು.

ಕಾರ್ಯಕಾರೀ ಸಮಿತಿಯು ಕಮ್ಯುನಿಸ್ಟರ ಈ ಹೇಳಿಕೆಗೆ ಬೆಲೆ ಕೊಡದೆ ಪಾಟ್ನಾ ನಿರ್ಣಯವನ್ನು ಕಾರ್ಯರೂಪಕ್ಕೆ ತರಲು ನಿರ್ಧರಿಸಿತು. ಆದರೆ ನಮ್ಮ ಕಾರ್ಯಕಾರೀ ಸಮಿತಿಯು ಐಕ್ಯದ ಉದ್ದೇಶಮಾತ್ರದಿಂದಲೇ ತೃಪ್ತಿಗೊಳ್ಳದೆ 'ಕೃತಿಯಲ್ಲಿಯೂ ಐಕ್ಯ'ವಿರಬೇಕೆಂದು ಯೋಚಿಸಿತು. ಆದ್ದರಿಂದ ಕಾಂಗ್ರೆಸ್ ಸಾಮ್ಯವಾದೀ ಪಕ್ಷದಲ್ಲಿ ಉಳಿಯಲು ಕಮ್ಯುನಿಸ್ಟ ಸದಸ್ಯರಿಗೆ ಒಪ್ಪಿಗೆ ದೊರೆಯಿತು. ಕಾರ್ಯಕಾರೀ ಸಮಿತಿಯ ಈ ಸಡಿಲು ಧೋರಣೆಯಿಂದ ಸಮ್ಮೇಲನದ ಮೇಲೆ ಕೊಂಚ ವ್ಯತಿರಿಕ್ತ ಪರಿಣಾಮವಾಯಿತು. ಕಮ್ಯುನಿಸ್ಟರನ್ನು ಪಕ್ಷದಿಂದ ಹೊರತಳ್ಳುವುದು ಅವಶ್ಯವಾಗಿದ್ದರೂ ಕಾರ್ಯಕಾರೀ ಸಮಿತಿ ಆ ಪರಿಸ್ಥಿತಿಯನ್ನೆದುರಿಸಲು ಸಿದ್ಧವಿರಲಿಲ್ಲ. ಕಮ್ಯುನಿಸ್ಟರು ಐಕ್ಯಕ್ಕೆ ಬೆಂಬಲ ಕೊಡುವರೆಂಬ ವಿಶ್ವಾಸವಿಲ್ಲದಿದ್ದರೂ ಅವರನ್ನು ಹೊರತಳ್ಳುವ ಅಪ್ರಿಯ ಕೆಲಸವು ನಮ್ಮ ಕಾರ್ಯಕಾರೀ ಸಮಿತಿಗೆ ಒಗ್ಗಲಿಲ್ಲ. ಇದರ ಪರಿಣಾಮವೇನೆಂದರೆ ಆಕಾಶದಲ್ಲಿ ಅರಮನೆ ಕಟ್ಟಿದಂತೆ ಮಾತ್ರವಾಯಿತು. ಅದು ಹೇಗೂ ಇರಲಿ, ಈಚೆಗೆ ನಾವು ಕಮ್ಯುನಿಸ್ಟರಿಂದ ದೂರ ಉಳಿದಿದ್ದೇವೆ.

ಕಮ್ಯುನಿಸ್ಟರು ಸಮ್ಮೇಲನದಲ್ಲಿ ನಡೆದುಕೊಂಡ ರೀತಿ, ಅವರ ಪ್ರಕಟನೆಗೆ ತಕ್ಕಂತೆ ಪ್ರಾಮಾಣಿಕತನದ್ದಿರಲಿಲ್ಲವೆಂಬುದನ್ನು ಮೇಲೆ ಹೇಳಿದೆ. ಕಾರ್ಯಕಾರೀ ಸಮಿತಿಯ ಸದಸ್ಯತ್ವಕ್ಕೆ ಅವರು, ತಮ್ಮವರೇ ಆದ ಕೆಲವು ಕಮ್ಯುನಿಸ್ಟರ ಹೆಸರು ಸೂಚಿಸಿ ಎಲ್ಲರೂ ಅವರಿಗೇ ಬೆಂಬಲ ಕೊಟ್ಟರು. ಅವರು ಐಕ್ಯಸಾಧನೆಯ ಪ್ರತಿಜ್ಞೆಗೆಯ್ದಿದ್ದರೂ ನಮ್ಮ ಪಕ್ಷವನ್ನು ವಶಪಡಿಸಿಕೊಳ್ಳಲು ಒಳಸಂಚು ನಡೆಸಿದ್ದರು. ಒಂದು ಸಂಸ್ಥೆಯನ್ನು ವಶಪಡಿಸಿಕೊಳ್ಳುವುದು ಮತ್ತು ಅದೇ ಸಂಸ್ಥೆಯೊಡನೆ ಐಕ್ಯಕ್ಕಾಗಿ ಹೆಣಗುವುದು ಪರಸ್ಪರ ವಿರುದ್ಧ

ಕಾರ್ಯವೆಂಬುದನ್ನು ಎಲ್ಲರೂ ಬಲ್ಲರು. ಆದರೆ ಕಮ್ಯುನಿಸ್ಟರ ವಿಚಿತ್ರ ನಡತೆಗೆ ಪರಸ್ಪರ ವಿರುದ್ಧ ಸಂಗತಿಗಳು ಒಂದಾಗಿ ತೋರಬಹುದು. ಕ್ರಾಂತಿಗೂ ಪ್ರತಿಕ್ರಾಂತಿಗೂ ಭೇದವಿಲ್ಲೆಂದು ಅವರು ಮೇಲಿಂದ ಮೇಲೆ ಸಾರುತ್ತಿರುವುದು ಅದಕ್ಕಾಗಿಯೇ.

ಲಾಹೋರ್ ಸಮ್ಮೇಲನದ ಕೆಲವು ತಿಂಗಳಮೇಲೆ ಆಶ್ಚರ್ಯಕಾರಕವಾದ ಇನ್ನೊಂದು ಸಂಗತಿ ನಡೆಯಿತು. ಕಾಂಗ್ರೆಸ್ ಸಾಮ್ಯವಾದೀ ಪಕ್ಷದ ವಿರುದ್ಧವಾಗಿ ಕಮ್ಯುನಿಸ್ಟರು ಪ್ರಕಟಿಸಿದ ಪರಿಪತ್ರವೊಂದು ಮಸಾನಿಯವರಿಗೆ ದೊರೆಯಿತು. ಅವರು ಅದನ್ನು 'ಸಾಮ್ಯವಾದಿಗಳ ವಿರುದ್ಧ ಕಮ್ಯುನಿಸ್ಟರ ಒಳಸಂಚು' ಎಂಬುದಾಗಿ ಪ್ರಕಟಿಸಿದರು. ನಮ್ಮ ಎಲ್ಲ ಸಂಘ ಸಂಸ್ಥೆಗಳನ್ನು ಹೇಗೆ ಕೈವಶಪಡಿಸಿಕೊಳ್ಳಬೇಕೆಂಬ ವಿವರ ಅದರಲ್ಲಿತ್ತು. ಕಮ್ಯುನಿಸ್ಟರ ಚಾಣಕ್ಯತಂತ್ರಕ್ಕೆ ಇದೂ ಒಂದು ಉದಾಹರಣೆ. ಈ ಪತ್ರದಿಂದ ಎಷ್ಟೋ ಮಿತ್ರರ ಅಲ್ಪ ಸ್ವಲ್ಪ ತಾಳ್ಮೆಯೂ ನಷ್ಟವಾಯಿತು. ಆದರೂ ಕಾರ್ಯಕಾರೀ ಸಮಿತಿ ಏನನ್ನೂ ಮಾಡದೆ ಸುಮ್ಮನೆ ಕಾಲ ಕಳೆಯಿತು. ಈ ಪ್ರವೃತ್ತಿಗೆ ಕಾರಣವು ಐಕ್ಯದ ಧ್ಯೇಯುವೂ ಅಲ್ಲ, ಆಸೆಯೂ ಅಲ್ಲ; ಆದರೆ ಅಪ್ರಿಯ ನಿರ್ಣಯವನ್ನು ಕೈಕೊಳ್ಳುವ ಮನಸ್ಸಿಲ್ಲದ್ದು. ದೃಢ ನಿರ್ಧಾರದ ಚೈತನ್ಯವಿಲ್ಲದ್ದರಿಂದ ನಮ್ಮ ಪಕ್ಷದಲ್ಲಿ ಆಗ ತುಂಬ ಬಲಹೀನತೆಯೂ ಕಂಗೆಡಿಕೆಯೂ ತುಂಬಿದ್ದುವು. ಹಗೆಗಳು ಇದರ ಸರಿಯಾದ ದುರುಪಯೋಗವನ್ನು ತೆಗೆದುಕೊಳ್ಳಲು ತಪ್ಪಲಿಲ್ಲ.

ನಮ್ಮ ಪಕ್ಷದ ಬಲಹೀನತೆಯೂ ಕಾಲಹರಣವೂ ಹಾಗೆಯೇ ಸಾಗಿತ್ತು. ಇಂಥ ಪರಿಸ್ಥಿತಿಯಲ್ಲಿ ನಮ್ಮ ಮುಂದೆ ಇದ್ದುದು ಎರಡೇ ದಾರಿ. ಒಂದೇ, ಕಮ್ಯುನಿಸ್ಟ್ ಪಕ್ಷವನ್ನೂ ಕಾಂಗ್ರೆಸ್ ಸಾಮ್ಯವಾದೀ ಪಕ್ಷವನ್ನೂ ಒಂದುಗೂಡಿಸಿ ಏಕಮೇವ ಸಂಸ್ಥೆಯನ್ನಾಗಿ ಮಾಡುವುದು; ಇಲ್ಲವೆ, ಉಳಿದ ಎಲ್ಲ ಪಕ್ಷಗಳ ಸದಸ್ಯರನ್ನು ನಮ್ಮ ಪಕ್ಷದಿಂದ ಹೊರತಳ್ಳಿ ಶುದ್ಧ ಕಾಂಗ್ರೆಸ್ ಸಾಮ್ಯವಾದೀ ಪಕ್ಷವನ್ನೇ ಕಟ್ಟುವುದು. ಆದರೆ ಈಗಾಗಲೇ ಬಂದ ಅನುಭವದ ಮೂಲಕ ಮೊದಲನೆಯ ದಾರಿಗೆ ಯಶಸ್ಸು ಸಿಕ್ಕುವ ಲಕ್ಷಣವಿರಲಿಲ್ಲ. ಅಂತೂ ಕಮ್ಯುನಿಸ್ಟರ ವಿಷಯದಲ್ಲಿ ನಾನು ಒಂದು ನಿರ್ಧಾರಕ್ಕೆ ಬಂದುದರಿಂದ ಅದನ್ನು ಕುರಿತು ಆ ಪಕ್ಷದ ಮುಂದಾಳುಗಳೊಂದಿಗೆ ಚರ್ಚಿಸಿದೆ. ಎರಡೂ

ಪಕ್ಷಗಳಿಗೆ ಸಾಮಾನ್ಯವಾದ ಧ್ಯೇಯದ ತಳಹದಿ ಇಲ್ಲದ್ದರಿಂದ ಐಕ್ಯವು ಸಾಧ್ಯ ವಿರಲಿಲ್ಲ. ಆದ್ದರಿಂದ ಇಂಥ ಒಂದು ತಳಹದಿಯನ್ನು ಯೋಚಿಸಲಾಯಿತು. ಆದರೆ ಆ ದಾರಿಯಲ್ಲಿ ಆದ ಪ್ರಗತಿ ಅಷ್ಟಕ್ಕಷ್ಟೆ! ಇದಲ್ಲದೆ ದಿನದಿನದ ಘಟನೆ ಗಳ ಮೂಲಕ ಎರಡೂ ಪಕ್ಷಗಳಲ್ಲಿ ಅಂತರವು ಬೆಳೆಯುತ್ತಲೇ ಇತ್ತು. ಅಷ್ಟರಲ್ಲಿ ತ್ರಿಪುರಿ ಮತ್ತು ಕಲಕತ್ತೆಯ ಸಮ್ಮೇಲನಗಳು ಬಂದುವು. ರಾಷ್ಟ್ರದ ಆಂದೋಲನವನ್ನು ನಡೆಸುವ ಶಕ್ತಿಯೂ ತೂಕವೂ ಇಲ್ಲದ್ದರಿಂದ ಕಮ್ಯುನಿಸ್ಟ ಪಕ್ಷವು ದಿಗಿಲುಗೊಂಡದ್ದಲ್ಲದೆ ಎಡಪಕ್ಷವನ್ನು ಸ್ವಾಧೀನಪಡಿಸಿಕೊಳ್ಳುವ ಹವ್ಯಾಸದಿಂದ ವಾಚಾಳಿಗಳ ಬೆನ್ನು ಕಟ್ಟತೊಡಗಿತ.,

ಮೊದಲಿನ ದಾರಿಯಂತೂ ಅಸಾಧ್ಯವಾಗಿತ್ತು. ಆದರೆ ಎರಡನೆಯ ಉಪಾಯಕ್ಕೆ ಕೈಹಾಕಲು ನಮ್ಮ ಕಾರ್ಯಕಾರೀ ಸಮಿತಿಗೆ ಧೈರ್ಯವಿರಲಿಲ್ಲ. ಈ ಅನಿಶ್ಚಿತ ಧೋರಣೆಯ ಮೂಲಕ ನಮ್ಮ ಪಕ್ಷದಲ್ಲಿ ಕಮ್ಯುನಿಸ್ಟರ ಕೈವಾಡ ಬೆಳೆಯತೊಡಗಿದ್ದರಿಂದ ಕಾರ್ಯಕಾರೀ ಸಮಿತಿಯ ಎಷ್ಟೋ ಸದಸ್ಯರು ರಾಜೀನಾಮೆ ಕೊಡಬೇಕಾಯಿತು. ಇದರಿಂದ ಕಾಂಗ್ರೆಸ್ ಸಾಮ್ಯವಾದೀ ಪಕ್ಷದಲ್ಲಿ ಎಷ್ಟೋ ಜನರು ಬೆಬ್ಬರಗೊಂಡರು. ಕಮ್ಯುನಿಸ್ಟ್ ಪಕ್ಷಕ್ಕೂ ಅದರ ಕೈಗೊಂಬೆಗಳಿಗೂ ಇದು ಸಂತೋಷಕ್ಕೆ ಕಾರಣವಾಯಿತೆಂದು ಹೇಳುವ ಅಗತ್ಯವಿಲ್ಲ.

ಇಂಥ ಪರಿಸ್ಥಿತಿಯಲ್ಲಿ, ೧೯೩೯ರಲ್ಲಿ ಮುಂಬೈಯಲ್ಲಿ ಅಖಿಲ ಭಾರತ ಕಾಂಗ್ರೆಸ್ ಸಮ್ಮೇಲನವು ಸೇರಿದಾಗ ನಮ್ಮ ಕಾರ್ಯಕಾರೀ ಸಮಿತಿಯೂ ಸೇರಿತು. ಈ ಸಭೆಯಲ್ಲಿ, ನಮ್ಮ ಪಕ್ಷದ ಆಂತರಿಕ ಅವ್ಯವಸ್ಥೆಯನ್ನು ಸರಿ ಪಡಿಸಿಕೊಂಡು ಮುನ್ನಡೆಯಬೇಕೆಂದು ಕಮ್ಯುನಿಸ್ಟ ಸದಸ್ಯರ ಹೊರತು ಎಲ್ಲರೂ ಅಭಿಪ್ರಾಯಪಟ್ಟರು. ಈ ಉದ್ದೇಶಸಿದ್ಧಿಗಾಗಿ, ನಮ್ಮ ಪಕ್ಷದಲ್ಲಿ ಸೇರಿಕೊಂಡ ಕಮ್ಯುನಿಸ್ಟ ಮತ್ತು ಇನ್ನಿತರ ಪಕ್ಷಗಳ ಎಲ್ಲರನ್ನೂ ಹೊರಗೆ ಹೋಗಲು ಕೇಳಿಕೊಳ್ಳಬೇಕೆಂದು ತೀರ್ಮಾನವಾಯಿತು. ದೀರ್ಘ ಚರ್ಚೆಯ ನಂತರ, ಕಾರ್ಯಕಾರೀ ಸಮಿತಿಯು ಕೊನೆಯ ನಿರ್ಣಯದ ಸರ್ವಾಧಿಕಾರ ವನ್ನು ಕಾರ್ಯದರ್ಶಿಯಾದ ನನಗೆ ಒಪ್ಪಿಸಿತು. ಸಾಮ್ಯವಾದೀ ಆಂದೋ ಲನದಲ್ಲಿ ಇಂಥ ಹದಗೆಡುವ ಪರಿಸ್ಥಿತಿಯನ್ನು ಮಾಡಲು ನನ್ನ ಮನಸ್ಸಿರಲಿಲ್ಲ. ನಾನು ಶುದ್ಧ ಕಾಂಗ್ರೆಸ್ ಸಾಮ್ಯವಾದೀ ಪಕ್ಷದ ಆವಶ್ಯಕತೆಯನ್ನು ಒಪ್ಪಿ

ಕೊಂಡರೂ ಪರಸ್ಪರರಲ್ಲಿ ಅಸಮಾಧಾನವೂ ಹಗೆತನವೂ ಬೆಳೆಯಬಹುದಾದ್ದರಿಂದ ಈಗಾಗಲೇ ಸೇರಿಕೊಂಡ ಕಮ್ಯುನಿಸ್ಟರನ್ನು ಹೊರತಳ್ಳಕೂಡದೆಂದು ಸೂಚಿಸಿದೆನು. ಇನ್ನು ಮುಂದೆ ನಮ್ಮ ಪಕ್ಷದ ನಿಯಂತ್ರಣವು ಅಪ್ಪಟ ಸಾಮ್ಯವಾದಿಗಳ ಕೈಯಲ್ಲಿಯೇ--ಬೇರೆ ಯಾವ ಪಕ್ಷವನ್ನೂ ಸೇರದವರ ಕೈಯಲ್ಲಿ-ಇರಬೇಕೆಂಬುದು ನನ್ನ ಸ್ಪಷ್ಟ ಅಭಿಪ್ರಾಯವಾಗಿತ್ತು. ಈ ನನ್ನ ನಿರ್ಣಯವನ್ನು ಕಾರ್ಯಕಾರೀ ಸಮಿತಿ ಒಪ್ಪಿಕೊಂಡಿತು. ಈಗ ನಮ್ಮ ಮುಂದಿದ್ದ ಕರ್ತವ್ಯವೆಂದರೆ ನಮ್ಮ ಪಕ್ಷವನ್ನು ಬಲಿಷ್ಠಗೊಳಿಸುವುದು. ಮೊದಲಿನ ಪರಿಸ್ಥಿತಿಗಿಂತ ಇದು ಎಷ್ಟೋ ಒಳ್ಳೆಯದೆಂದೆನಿಸಿತು. ಆದರೆ ನಮ್ಮ ಪಕ್ಷವನ್ನು ಇಂಥ ವಿಪತ್ತಿಗೆ ಗುರಿಮಾಡಿದ ಪರಿಸ್ಥಿತಿಯಿಂದ ಪೂರ್ಣವಾಗಿ ಬಿಡುಗಡೆ ಹೊಂದುವ ತೀರ್ಮಾನವನ್ನು ಕೈಕೊಳ್ಳದಿದ್ದುದರಿಂದ ಸ್ವಲ್ಪ ಮಟ್ಟಿಗೆ ತೊಂದರೆಪಡಬೇಕಾಯಿತು

ಮುಂಬೈಯಲ್ಲಿ ತೀರ್ಮಾನವಾದ ಈ ಅರೆಮನಸ್ಸಿನ ನಿರ್ಣಯದ ಕಸುವು ಕಾರ್ಯರಂಗಕ್ಕೆ ಇಳಿಯುವಾಗ ಇನ್ನೂ ಕಡಿಮೆಯಾಯಿತು. ಯುರೋಪ್ ಯುದ್ಧವು ಮೊದಲಾಗುವವರೆಗೆ ಈ ನಿರ್ಣಯವು ಕ್ರಿಯಾ ಪ್ರಪಂಚವನ್ನೇ ಕಾಣಲಿಲ್ಲ ಇಲ್ಲಿ ಇನ್ನೊಂದು ಮಹತ್ವದ, ವಿಷಾದಕರ ಸಂಗತಿಯನ್ನು ಹೇಳಬೇಕಾಗಿದೆ. ಇದು ನಡೆದುದು ಮುಂಬೈ ನಿರ್ಣಯದ ನಂತರ. ನಮ್ಮ ಪಕ್ಷದ ಸಂಯುಕ್ತ ಪ್ರಾಂತ ಸಮಿತಿಯ ಅಲಹಾಬಾದ್ ಶಾಖೆಯ ಕಾರ್ಯದರ್ಶಿಯು ತನ್ನ ಹೊಣೆಗಾರಿಕೆಯ ಮೇಲೆ ಎಂಟು ಮಂದಿ ಕಮ್ಯುನಿಸ್ಟರನ್ನು ಸೇರಿಸಿಕೊಂಡರು. ಅವರು ರಾಷ್ಟ್ರದ ಸಾಮ್ಯವಾದೀ ಆಂದೋಲನದ ಇತಿಹಾಸದಲ್ಲಿ ಹೊಸ ಪ್ರಕರಣ ಆರಂಭವಾದೀತೆಂಬ ಆಸೆಯಿಂದ ಕಮ್ಯುನಿಸ್ಟರಿಗೆ ಇಷ್ಟು ಸವಲತ್ತುಗಳನ್ನು ಒದಗಿಸಿ ಅವರ ಸಹಕಾರ ಕೋರಿದರು. ಆದರೆ ಅದೆಲ್ಲ ವ್ಯರ್ಥವಾಯಿತು. ಕಮ್ಯುನಿಸ್ಟರಿಗೆ ಒದಗಿಸಿದ ಪ್ರತಿಯೊಂದು ಸಂದರ್ಭವನ್ನೂ ಅವರು ಕಾಂಗ್ರೆಸ್ ಸಾಮ್ಯವಾದೀ ಪಕ್ಷದ ವಿರುದ್ಧವಾಗಿಯೇ ಉಪಯೋಗಿಸಿದರು.

೧೯೩೯ ನೇ ಸಪ್ಟಂಬರಿನಲ್ಲಿ ಯುರೋಪ್ ಯುದ್ಧ ಮೊದಲಾಯಿತು. ಯುದ್ಧವು ಸಾಮ್ಯವಾದೀ ಐಕ್ಯದ ವಿಷಯಕವಾದ ಧೋರಣೆಯಲ್ಲಿ ಯಾವ ಬದಲಾವಣೆಯನ್ನೂ ಮಾಡಲಿಲ್ಲ. ಈ ಸಮಸ್ಯೆಯ ಯುದ್ಧ ಆರಂಭವಾಗುವ

ವರೆಗಿನ ಬೆಳವಣಿಗೆಯನ್ನು ಈಗಾಗಲೇ ಬರೆದಿದ್ದೇನೆ. ಆರಂಭದಲ್ಲಿ ಎಲ್ಲ ಸಾಮ್ಯವಾದೀ ಗುಂಪುಗಳನ್ನು ನಮ್ಮ ಪಕ್ಷದಲ್ಲಿ ಒಂದುಗೂಡಿಸಿಕೊಂಡು ಸಾಮ್ಯವಾದೀ ಐಕ್ಯವನ್ನು ಸಾಧಿಸಬೇಕೆಂಬ ಉತ್ಸಾಹಕಾರಕ ಧೋರಣೆಯ ನ್ನಿಟ್ಟುಕೊಂಡೆವು. ಆದರೆ ಅನುಭವವು ಬಂದಂತೆಲ್ಲ ಆ ಧೋರಣೆಯಲ್ಲಿ ಅಲ್ಪ ಸ್ವಲ್ಪ ಬದಲಾವಣೆ ಮಾಡಬೇಕಾಯಿತು. ಕೊನೆಗೆ ಈ ಧ್ಯೇಯ ಸಾಧನೆ ಅಸಾಧ್ಯವೆಂದು ಕಂಡುಬಂದಾಗ ಶುದ್ಧ, ಬಲಿಷ್ಠ ಕಾಂಗ್ರೆಸ್ ಸಾಮ್ಯವಾದೀ ಪಕ್ಷವನ್ನೇ ಕಟ್ಟುವ ಧೋರಣೆಯನ್ನು ಹಿಡಿಯಬೇಕಾಯಿತು. ಯುದ್ಧಜನ್ಯ ಉತ್ಕಟ ಪರಿಸ್ಥಿತಿ ಮತ್ತು ಆಸೇತುಹಿಮಾಚಲದವರೆಗಿನ ದಬ್ಬಾಳಿಕೆಯ ಮೂಲಕ ಮತ್ತು ಅಕ್ರಮ ಕಾರ್ಯಕ್ರಮಗಳ ಮೂಲಕ ನಮ್ಮ ಸಂಸ್ಥೆಯನ್ನು ಪುನರ್ಘಟಿಸುವುದೂ ಮುಂಬೈ ನಿರ್ಣಯವನ್ನು ಕಾರ್ಯರೂಪಕ್ಕೆ ತರುವುದೂ ಯೋಗ್ಯವೆನಿಸಿತು. ಅನಂತರ ಯುದ್ಧವು ಮೊದಲಾದ ಸ್ವಲ್ಪ ಕಾಲದಲ್ಲಿಯೇ ಪ್ರಾಂತಗಳಲ್ಲೆಲ್ಲ ಅವಶ್ಯವಿದ್ದ ತಾತ್ಪೂರ್ತಿಕ ಸಮಿತಿಗಳನ್ನು ನಿರ್ಮಿಸಲಾ ಯಿತು; ಮತ್ತು ಈ ಎಲ್ಲ ಸಮಿತಿಗಳ ಏಕಸೂತ್ರತೆಯನ್ನು ಕಾಯ್ದುಕೊಳ್ಳು ವಂತೆ ನೋಡಿಕೊಳ್ಳಲಾಯಿತು. ಕಮ್ಯುನಿಸ್ಟರು ಇನ್ನೂ ನಮ್ಮ ಪಕ್ಷದಲ್ಲಿ ದ್ದರು. ಕಮ್ಯುನಿಸ್ಟ ಪಕ್ಷವು ಬರಿಯ ಉನ್ನತಾಧಿಕಾರದ ಅಪೇಕ್ಷೆಯನ್ನು ಬಿಟ್ಟು ಪ್ರಾಮಾಣಿಕತನದ ಸಹಕಾರವನ್ನು ನೀಡಿದರೆ ಅದನ್ನು ಸ್ವೀಕರಿಸಲು ನಮ್ಮ ಪಕ್ಷವು ಯಾವಾಗಲೂ ಸಿದ್ಧವಿದ್ದಿತು.

ಯುದ್ಧಾರಂಭವಾದ ಕೂಡಲೇ ಕಮ್ಯುನಿಸ್ಟರ ಧೋರಣೆಯಲ್ಲಿ ಬಹಳ ಬದಲಾವಣೆಯಾಯಿತು. ಅದು ಇಲ್ಲಿಯವರೆಗೂ ಹಾಕಿಕೊಂಡಿದ್ದ ಸೋಗನ್ನು ಕಳಚಿ ಹಾಕಿ, ಇಷ್ಟು ದಿನಗಳವರೆಗೆ ಜೊತೆಗೂಡಿ ದುಡಿದ ಕಾಂಗ್ರೆಸ್ ಸಾಮ್ಯ ವಾದೀ ಪಕ್ಷವನ್ನೂ ಕಾಂಗ್ರೆಸ್ ಮತ್ತು ಪುರೋಗಾಮೀ ಪಕ್ಷಗಳನ್ನೂ ಬದ್ಧ ವಿರುದ್ಧವೆಂದು ತಿಳಿದುಕೊಂಡಿತು.

ಹೀಗೆ, ಕಮ್ಯುನಿಸ್ಟರ ಧೋರಣೆಗೆ ಬದಲಾದ ವಿಷಯದಲ್ಲಿ ಇನ್ನೊಂದು ಸಂಗತಿಯನ್ನು ಹೇಳುತ್ತೇನೆ ಸುಭಾಸ್ ಬೋಸರ ಪ್ರೇರೇಪಣೆಯ ಮೇರೆಗೆ ೧೯೩೯ನೇ ಅಕ್ಟೋಬರಿನಲ್ಲಿ ಎಡಪಕ್ಷದ ಸಂಸ್ಥೆಗಳ ಒಂದು ಸಭೆ ಲಕ್ನೋದಲ್ಲಿ ಸೇರಿತು. ಈ ಸಭೆಯಲ್ಲಿ, ಯುದ್ಧ ವಿರೋಧಕ ಚಟುವಟಿಕೆಗಳನ್ನು ನಡೆಸಲು ಬೇರೆ ಬೇರೆ ಸಂಸ್ಥೆಗಳ ಒಂದು ಸಂಯುಕ್ತ ಸಮಿತಿಯನ್ನು ನೇಮಿಸಬೇಕೆಂದು

ಕಮ್ಯುನಿಸ್ಟರೂ ಇತರ ಪಕ್ಷದವರೂ ಸೂಚಿಸಿದರು. ಪಕ್ಷಪಕ್ಷಗಳಲ್ಲಿ ವಿಶ್ವಾಸ ಐಕ್ಯಗಳಿಲ್ಲದ ಮೂಲಕ ಇಂಥ ಸೂಚನೆ ಅವ್ಯವಹಾರ್ಯವೆಂದು ನಮ್ಮ ಪಕ್ಷವು ಅದನ್ನು ನಿರಾಕರಿಸಿತು; ಮತ್ತು ಎಲ್ಲ ಪಕ್ಷಪಂಗಡಗಳು ಸಹಕಾರದಿಂದ ಕೆಲಸ ಮಾಡುವಂತೆ ಸರ್ವಮಾನ್ಯವಾದ ಕಾರ್ಯಕ್ರಮವನ್ನು ಸಿದ್ಧಪಡಿಸಬೇಕೆಂಬ ಪ್ರತಿ ಸೂಚನೆಯನ್ನು ಮಂಡಿಸಿತು. ಸಭೆಯು ಕೊನೆಯಲ್ಲಿ ಈ ಸೂಚನೆಯನ್ನು ಒಪ್ಪಿಕೊಂಡದ್ದಲ್ಲದೆ ಏಳು ಕಾರ್ಯಕ್ರಮಗಳ ಒಂದು ಯೋಜನೆಯನ್ನು ಸಿದ್ಧಪಡಿಸಲಾಯಿತು. ಅದನ್ನು ಅಲ್ಲಿ ನೆರೆದಿದ್ದ ಎಲ್ಲ ಸದಸ್ಯರೂ ಒಪ್ಪಿಕೊಂಡರು. ಆ ಸಭೆ ಅಷ್ಟಕ್ಕೇ ಕೊನೆಗಂಡಿತು. ಭಾವೀ ಕಾರ್ಯಕ್ರಮದ ವಿಷಯದಲ್ಲಿ ಎಲ್ಲರ ಒಪ್ಪಿಗೆಯಿದ್ದುದರಿಂದ ಕೊನೆಯ ಪಕ್ಷಕ್ಕೆ ಅಲ್ಲಿ ಸೇರಿದ ಬೇರೆ ಬೇರೆ ಪಕ್ಷಗಳ ಪ್ರತಿನಿಧಿಗಳಲ್ಲಾದರೂ ಒಮ್ಮತವಾಗಬಹುದೆಂಬ ಆಸೆ ಇತ್ತು ಆ ಸಭೆ ನಮ್ಮ ದೇಶದ ಇತಿಹಾಸದಲ್ಲಿ ಮಹತ್ವದ್ದಾಗಬಹುದಾಗಿದ್ದಿತು. ಆದರೆ ಹಾಗೆ ಆಗುವುದು ಸಾಧ್ಯವಿರಲಿಲ್ಲ. ಇದಕ್ಕೆ ತೊಡಕಾಗಿ ಕಮ್ಯುನಿಸ್ಟ್ ಪಕ್ಷವೊಂದು ಇದೆಯೆಂಬುದು ನಮ್ಮ ಗಮನಕ್ಕೇ ಬಂದಿರಲಿಲ್ಲ.

ಮೂರು ವಾರ ಕಳೆಯಿತೋ ಇಲ್ಲವೊ—ಅಷ್ಟರಲ್ಲಿ ಕಮ್ಯುನಿಸ್ಟ್ ಪಕ್ಷವು ಕಾಂಗ್ರೆಸ್ ಸಾಮ್ಯವಾದೀ ಪಕ್ಷವನ್ನು ಉಗ್ರವಾಗಿ ಟೀಕಿಸುವ ಒಂದು ಹೇಳಿಕೆಯನ್ನು ಪ್ರಕಟಿಸಿತು. ಈ ಹೇಳಿಕೆಯಿಂದ ನಾವು ೧೯೩೪ರ ಹಳೆಯ ಪರಿಸ್ಥಿತಿಗೇ ಮರಳಿದಂತಾಯಿತು. ಕಮ್ಯುನಿಸ್ಟ್ ಪಕ್ಷವು ಹೀಗೆ ಕಾಂಗ್ರೆಸ್ ಸಾಮ್ಯವಾದೀ ಪಕ್ಷದ ವಿರುದ್ಧವಾಗಿ ಒಮ್ಮೆಲೇ ಯುದ್ಧ ಸಾರಿದ ಕಾರಣವು ಇಂದಿಗೂ ನಮಗೆ ತಿಳಿದಿಲ್ಲ. ಲಕ್ನೋ ಸಭೆಗೂ ಕಮ್ಯುನಿಸ್ಟರ ಹೇಳಿಕೆ ಪ್ರಕಟವಾದ ಕಾಲಕ್ಕೂ ನಡುವೆ, ಎಂದರೆ ನವಂಬರಿನಲ್ಲಿ, ಕಮ್ಯುನಿಸ್ಟರ ವಿರುದ್ಧವಾಗಿ ನಿಶ್ಚಯವಾಗಿಯೂ ನಾವು ಯಾವ ಅಪರಾಧವನ್ನೂ ಮಾಡಿರಲಿಲ್ಲ. ಸರ್ವಸಾಮಾನ್ಯ ಕಾರ್ಯಕ್ರಮದ ಯೋಜನೆಗೆ ಕಮ್ಯುನಿಸ್ಟರು ಕೆಲವು ವಾರಗಳ ಮುಂಚೆ ಮಾತ್ರವೇ ಒಪ್ಪಿಕೊಂಡಿದ್ದರು. ಅದನ್ನು ಕಾರ್ಯರಂಗಕ್ಕೆ ತಂದದ್ದು ಇಂಥ ವಿಚಿತ್ರ ರೀತಿಯಲ್ಲಿ! ಅದು ಹೇಗೂ ಇರಲಿ. ಕಾಂಗ್ರೆಸ್ ಸಾಮ್ಯವಾದೀ ಪಕ್ಷವು ೧೯೩೯ನೇ ನವಂಬರಿನಲ್ಲಿ ಕಮ್ಯುನಿಸ್ಟರ ಅನುಗ್ರಹಕ್ಕೆ ಎರವಾಗಿ ಅಂದಿನಿಂದ ಅವರ ಉಗ್ರ ಟೀಕೆಗೆ ಗುರಿಯಾಗುತ್ತಿದೆ. ಕಮ್ಯುನಿಸ್ಟ್

ಪಕ್ಷದ ೧೯೪೦ರ ಘೋಷಣೆ ಕಾಂಗ್ರೆಸ್ ಸಾಮ್ಯವಾದೀ ಪಕ್ಷದ ಸಮಾಧಿಯನ್ನೇನೋ ಕಟ್ಟಿಬಿಟ್ಟಿತು; ಮತ್ತು ಇದರ ಸೂತಕದಿನವನ್ನು, ಬೇಕಾದರೆ ಶುಭದಿನವೆನ್ನೋಣ, ಮಾರ್ಕ್ಸ್‌ವಾದಿತ್ವದ ಘನತೆಗೆ ತಕ್ಕರೀತಿಯಿಂದ-ಕಮ್ಯುನಿಸ್ಟರಿಗೆ ಮಾತ್ರ ಸಾಧ್ಯವಿದ್ದ ವಿಚಿತ್ರ ರೀತಿಯಿಂದ—ಆಚರಿಸಿತು. ಎಂದ ಮೇಲೆ, ರಾಮಗಡ ಕಾಂಗ್ರೆಸ್ಸಿನಿಂದ ಈಚೆಗಿನ ಕಾಂಗ್ರೆಸ್ ಸಾಮ್ಯವಾದೀ ಪಕ್ಷದ ಇತಿಹಾಸವನ್ನು ತಮ್ಮ ಪತ್ರಿಕೆಯ ೧೯೪೧ನೇ ಫೆಬ್ರುವರಿ ಸಂಚಿಕೆಯಲ್ಲಿ ಪ್ರಕಟಿಸುವುದಾಗಿ ಕಮ್ಯುನಿಸ್ಟರು ಹೆದರಿಸಿದ್ದು ಹೆಚ್ಚಲ್ಲ. ಈ ಕತೆ ಪ್ರಕಟವಾಗಿದ್ದರೆ ನಿಜವಾಗಿಯೂ ದೆವ್ವದ ಕತೆಯಂತೆ ಅದ್ಭುತವಾಗುತ್ತಿತ್ತೆಂಬಲ್ಲಿ ಸಂದೇಹವಿಲ್ಲ. ಈಗ ರಾಜಕೀಯ ರಂಗದಲ್ಲಿ ಸುಳಿದಾಡುತ್ತಿವುದು ಕಾಂಗ್ರೆಸ್ ಸಾಮ್ಯವಾದೀ ಪಕ್ಷದ ಪಿಶಾಚಿಯೆಂಬ ದುಃಸ್ವಪ್ನವು ಕಮ್ಯುನಿಸ್ಟರಿಗೆ ಬಿದ್ದಿರಬೇಕು. ಆದ್ದರಿಂದ ಈ ಸ್ವಪ್ನ ನಿವಾರಣೆಯಾಗಬೇಕಾದರೆ ಅದರ ಇತಿಹಾಸವನ್ನು ಕಾಗದದ ಮೇಲೆ ಮೂಡಿಸಲೇಬೇಕಲ್ಲವೆ?

ಹೀಗೆ, ಕಾಂಗ್ರೆಸ್ ಸಾಮ್ಯವಾದೀ ಪಕ್ಷವನ್ನೂ ಇತರ ಎಲ್ಲರನ್ನೂ ಕಮ್ಯುನಿಸ್ಟ್ ಪಕ್ಷವು ಒಮ್ಮಿಂದೊಮ್ಮೆ ಟೀಕಿಸಲಿಕ್ಕೆ ಕಾರಣವೇನು? ಇದಕ್ಕೆ ರಾಜಕೀಯ ಕಾರಣವೊಂದಿತ್ತು. ಯುದ್ಧವು ಮೊದಲಾದಂದಿನಿಂದ ಕಮ್ಯುನಿಸ್ಟ್ ಪಕ್ಷವು ರಾಷ್ಟ್ರದಲ್ಲಿ ಕ್ರಾಂತಿಯ ಸುಳಿವನ್ನು ಕಂಡಿತು. ಇಂಥ ಐತಿಹಾಸಿಕ ವ ಕ್ರಾಂತಿಯ ಮುಂದಾಳುತನಕ್ಕಾಗಿ ಬೇರೆ ಯಾರೂ ಸ್ಪರ್ಧಿಸಬಾರದೆಂಬುದು ಅದರ ಉದ್ದೇಶವಾಗಿದ್ದಿತು. ಅದಕ್ಕೆ ಜನತೆಯ-ಕೂಲಿಕಾರರ, ಒಕ್ಕಲಿಗರ, ಮತ್ತು ಮುಖ್ಯವಾಗಿ ವಿದ್ಯಾರ್ಥಿಗಳ—ಮುಂದೆ ದೇಶದ ಏಕಮೇವ ಕ್ರಾಂತಿಕಾರೀ ಪಕ್ಷವು ತಾನೊಂದೇ ಎಂದು ಮೆರೆಯಬೇಕಾಗಿದ್ದಿತು. ಆದ್ದರಿಂದ ಅದಕ್ಕೆ ಈ ವಿಷಯದಲ್ಲಿ ಸ್ಪರ್ಧೆಯು ಒಗ್ಗಿರಲಿಲ್ಲ; ಮತ್ತು ಅಧಿಕಾರ ಪ್ರಾಪ್ತಿಯ ಕಾಲದಲ್ಲಿ ಪಾಲುಗಾರರು ಯಾರೂ ಬೇಕಾಗಿರಲಿಲ್ಲ. ಕಮ್ಯುನಿಸ್ಟ್ ಪಕ್ಷವೇ ರಾಜಾಧಿರಾಜನಾಗಬೇಕು! ಇದು ಕಮ್ಯುನಿಸ್ಟ್ ಪಕ್ಷವು ತಿಳಿದುಕೊಂಡ ಮಾರ್ಕ್ಸ್‌ವಾದಕ್ಕೆ ಸರಿಯಾದ ಧೋರಣೆ. ಈ ಮಹತ್ವಾಕಾಂಕ್ಷೆಯಿಂದ ನಿಷ್ಪನ್ನವಾಗುವ ಸಿದ್ಧಾಂತವೆಂದರೆ ಉಳಿದ ಎಲ್ಲ ಪಕ್ಷ ಪಂಗಡಗಳು ನಾಶವಾಗಬೇಕು—ಎಂದರೆ, ಜನತೆಯ ಮೇಲಿನ ಅವುಗಳ ಪ್ರಭಾವ ಕೊನೆಗೊಳ್ಳಬೇಕು. ಆದ್ದರಿಂದ ಕಮ್ಯುನಿಸ್ಟ್ ಪಕ್ಷದ ಪಂಡಿತರಾದ ರಾಜಕೀಯ ಬರಹಗಾರರು, ಜನತೆಯ

ಅವಗಾಹನೆಗೆ ಬರಲೇಬೇಕಾದ ವಿಷಯಗಳಿಗಾಗಿ ಮೂಟೆಗಟ್ಟಲೆ ಕಾಗದವನ್ನು ವೆಚ್ಚ ಮಾಡತೊಡಗಿದರು ಅಂತೂ ಕಾಂಗ್ರೆಸ್ ಮತ್ತು ಕಾಂಗ್ರೆಸ್ ಸಾಮ್ಯವಾದೀ ಪಕ್ಷಗಳು ಗಾಳಿಯಲ್ಲಿ ಕರಗಿ ಹೋದುವು; ಮತ್ತು ಕಮ್ಯುನಿಸ್ಟ ಪಕ್ಷವೇ ಬೇಗನೇ ರಾಷ್ಟ್ರದ ಪ್ರತಿನಿಧಿಯಾಗುವುದಿದೆ !

ಇಂಥ ಮಧುರ ಸ್ವಪ್ನಸುಖವನ್ನು ಸವಿಯುತ್ತಿರುವಾಗ ಒಮ್ಮಿಂದೊಮ್ಮೆ ಎಚ್ಚರಗೊಳ್ಳಬೇಕಾದ ಸಂದರ್ಭ ಒದಗುವುದು ಸ್ವಾಭಾವಿಕ. ಮತ್ತು ಅಷ್ಟರಲ್ಲಿ ಕಮ್ಯುನಿಸ್ಟ ಪಕ್ಷವು ಈ ಐತಿಹಾಸಿಕ ಮಹತ್ವವುಳ್ಳ ಕಾಲಾವಧಿಯ ತಪ್ಪು ತಡೆಗಳನ್ನು ವಿವರಿಸುವ ಇನ್ನೊಂದು ಪಾಂಡಿತ್ಯಪೂರ್ಣ ಸಿದ್ಧಾಂತವನ್ನು ಪ್ರಕಟಿಸಬೇಕಾದ ಸಂದರ್ಭವು ತಪ್ಪಿದ್ದಲ್ಲ.

ಈ ಕತೆಯನ್ನು ಬೇಗನೆ ಮುಗಿಸುವಾ. ಕಾಂಗ್ರೆಸ್ ಸಾಮ್ಯವಾದೀ ಪಕ್ಷವು ಕಮ್ಯುನಿಸ್ಟರ ಹೋರಾಟದ ಆಹ್ವಾನಕ್ಕೆ ಪ್ರತಿಯಾಗಿ ಸೇಡು ತೀರಿಸಿಕೊಳ್ಳ ಬಯಸಲಿಲ್ಲ. ಕಮ್ಯುನಿಸ್ಟರನ್ನು ಆ ಮೇಲೆ ಕೆಲಕಾಲದವರೆಗೆ ಕೂಡ ನಮ್ಮ ಪಕ್ಷದಿಂದ ತಳ್ಳಲಿಲ್ಲ. ಕಮ್ಯುನಿಸ್ಟ ಪಕ್ಷದ ತಪ್ಪುಗಳಿಗಾಗಿ ಅದನ್ನು ಟೀಕಿಸುತ್ತಿದ್ದರೂ, ನಮ್ಮ ಪಕ್ಷವು ಅದಕ್ಕೆ ಕೇಡು ಬಗೆಯದೆ ಸೋದರ ಕ್ರಾಂತಿಕಾರೀ ಸಂಸ್ಥೆಯೆಂಬ ತಿಳಿವಳಿಕೆಯಿಂದ ಅದರೊಂದಿಗೆ ಸಾಧ್ಯವಿದ್ದಷ್ಟು ಸಹಕರಿಸಲು ಯತ್ನಿಸಿತು. ಒಡಕಿನಿಂದ ಸಾಮ್ಯವಾದೀ ಆಂದೋಲನಕ್ಕೆ ಬೀಳುತ್ತಿರುವ ಪೆಟ್ಟಿನ ವಿರುದ್ಧವಾಗಿ ನಮ್ಮ ಪಕ್ಷವು ಕೂಗೆಬ್ಬಿಸಿತು. ಆದರೆ ಅವರು ಇಂಥ ಎಲ್ಲ ಸೌಹಾರ್ದ ಭಾವನೆಗೂ ಗೇಲಿ ಮಾಡಿ ಕಾಂಗ್ರೆಸ್ ಸಾಮ್ಯವಾದೀ ಪಕ್ಷದ ವಿರುದ್ಧವಾಗಿ ಕಹಳೆಯನ್ನೂದಿದರು. ಮೀರತ್ ಸಮ್ಮೇಲನದ ನಾಲ್ಕು ವರುಷಗಳ ನಂತರ ರಾಮಗಡದಲ್ಲಿ ಕೂಡಿದ ನಮ್ಮ ಕಾರ್ಯಕಾರೀ ಸಮಿತಿಯು ಬೇರೆ ಉಪಾಯಗಾಣದೆ ಕಮ್ಯುನಿಸ್ಟ ಪಕ್ಷದ ಸದಸ್ಯರನ್ನೂ ಅದಕ್ಕೆ ಸಹಾನುಭೂತಿಯುಳ್ಳವರನ್ನೂ ನಮ್ಮ ಪಕ್ಷದಿಂದ ತಳ್ಳಬೇಕೆಂದು ತೀರ್ಮಾನಿಸಿತು. ಭಾರತದ ಸಾಮ್ಯವಾದೀ ಆಂದೋಲನದ ಇತಿಹಾಸದ ಈ ದುರಂತ ಪ್ರಕರಣ ಹೀಗೇ ಕೊನೆಗೊಂಡಿತು ಈ ತೀರ್ಮಾನವನ್ನು ಮಾಡಿ ನಮ್ಮ ಕಾರ್ಯಕಾರೀ ಸಮಿತಿ ಕಮ್ಯುನಿಸ್ಟರ ವಿರುದ್ಧ ಯಾವ ತರದ ಹೋರಾಟವನ್ನೂ ಹೂಡಲಿಲ್ಲವೆಂಬುದು ಸ್ಪಷ್ಟಪಡಿಸುವ ಆಗತ್ಯವಿಲ್ಲ. ಯಾವುದೊಂದು ಪಕ್ಷದ ವಿರೋಧಿ

ಸಂಸ್ಥೆಯ ಸದಸ್ಯರನ್ನು ಹೊರತಳ್ಳುವುದು ಆ ಪಕ್ಷದ ಸಂಘಟನೆಗೆ ಆವಶ್ಯವಾದ ಉಪಾಯ.

೪

ಸಾರಾಂಶವೇನು ? ಸಾಮ್ಯವಾದೀ ಐಕ್ಯಸಾಧನೆಗಾಗಿ ನಮ್ಮ ಪಕ್ಷವು ಮಾಡಿದ ವ್ಯರ್ಥ ಪ್ರಯತ್ನಗಳನ್ನು ಮೇಲಿನ ಇತಿಹಾಸದಲ್ಲಿ ಕಾಣಬಹುದು. ಮೊದಲ ಕೆಲವು ತಿಂಗಳು ನಡೆದುದನ್ನು ಬಿಟ್ಟರೆ ಸಾಮ್ಯವಾದೀ ಐಕ್ಯದ ನಿಜವಾದ ಸಮಸ್ಯೆಯೆಂದರೆ ಕಮ್ಯುನಿಸ್ಟ್ ಪಕ್ಷವೂ ನಮ್ಮ ಪಕ್ಷವೂ ಒಂದುಗೂಡುವುದೇ ಆಗಿತ್ತು. ಆದರೆ ಕಮ್ಯುನಿಸ್ಟ್ ತಂತ್ರದಿಂದ ಇದು ಹೇಗೆ ವ್ಯರ್ಥವಾಯಿತೆಂಬುದು ಸ್ಪಷ್ಟವಿದೆ. ಇದು ಅನಿವಾರ್ಯ ಕಮ್ಯುನಿಸ್ಟರ ಇಂಥ ನಡತೆಯನ್ನು ಟೀಕಿಸುವುದು ನಮ್ಮದೇ ತಪ್ಪು. ಇಂಥ ಸಂದರ್ಭದಲ್ಲಿ ಅದು ಬೇರೆ ವಿಧವಾಗಿ ನಡೆಯುವುದು ಸಾಧ್ಯವಿರಲಿಲ್ಲ. ಇದು ನಮಗೆ ಮೊದಲೇ ತಿಳಿದಿದ್ದರೆ ನಮ್ಮ ಪಕ್ಷವು ಇಂದು ಇನ್ನೂ ಹೆಚ್ಚು ಬಲಿಷ್ಠವಾಗಬಹುದಾಗಿದ್ದಿತು. ನಮ್ಮ ಸೋದರರು ಈಗಲಾದರೂ ಬಹಳ ಎಚ್ಚರದಿಂದಿರುವುದು ಅಗತ್ಯ.

ಅಂತರ್ ರಾಷ್ಟ್ರೀಯ ಕಮ್ಯುನಿಸ್ಟ್ ಆಂದೋಲನವನ್ನು ತಿಳಿದುಕೊಂಡವರಿಗೆ ಕಮ್ಯುನಿಸ್ಟರ ಈ ನಡತೆ ಅನಿವಾರ್ಯವಾದುದೆಂಬುದು ಸ್ಪಷ್ಟವಾದೀತು ಈ ಆಂದೋಲನ ನೆಲದಲ್ಲಿ ಹುಟ್ಟಿ ಮೇಲೆ ಬರುವ ಸ್ವಭಾವದ್ದಲ್ಲ. ಎಂದರೆ, ತೀರ ಕೆಳಗಿರುವ ಜನಸಾಮಾನ್ಯರ ಕಲ್ಯಾಣವು ಇದರ ನೆಲಗಟ್ಟಲ್ಲ- ಬೇರೆ ಬೇರೆ ದೇಶಗಳನ್ನು ನಿಂದಿಸುತ್ತಿರುವ ಮೂರನೇ ಅಂತರ್ ರಾಷ್ಟ್ರೀಯವು ಪ್ರಾಮಾಣಿಕ ಕೆಲಸಗಾರರ ಸಂಸ್ಥೆಯಲ್ಲ. ಈ ಸಂಸ್ಥೆ ಸೋವಿಯಟ್ ರಶಿಯದ ಕಮ್ಯುನಿಸ್ಟ್ ಪಕ್ಷದ ಸೂತ್ರಧಾರಿಕ್ಕೆ ಒಳಪಟ್ಟಿದೆ; ಮತ್ತು ಮೇಲ್ವರ್ಗದ ಜನರ ಕಲ್ಯಾಣವನ್ನು ಮಾತ್ರ ಕೋರುತ್ತದೆ. ಇದರ ಶಾಖೆಗಳು ಬೇರೆ ಬೇರೆ ದೇಶಗಳಲ್ಲಿವೆ. ಮೂರನೆಯ ಅಂತರ್ ರಾಷ್ಟ್ರೀಯ ಸಂಸ್ಥೆಯ ಶಾಖೆಗಳು ಬಹುತರ ಪ್ರತಿಯೊಂದು ದೇಶದಲ್ಲಿಯೂ ಇವೆ. (ತುರ್ಕಸ್ಥಾನವು ರಶಿಯದೊಡನೆ ಮಾಡಿಕೊಂಡ ಒಪ್ಪಂದದಲ್ಲಿ ಇಂಥ ಸಂಸ್ಥೆಗಳಿಗೆ ಆಸ್ಪದ ಕೊಡದ್ದರಿಂದ ಅಲ್ಲಿ ಈ ಸಂಸ್ಥೆಯ ಶಾಖೆಗಳಿಲ್ಲ, ಇಂತಹ ಬೇರೆ ಕೆಲವು ದೇಶ

ಗಳಲ್ಲಿಯೂ ಇಲ್ಲ.) ಭಾರತೀಯ ಕಮ್ಯುನಿಸ್ಟ್ ಪಕ್ಷವು ಇಂಥ ಒಂದು ಶಾಖೆ. ಆದ್ದರಿಂದ ಅದು ಬೇರೆ ಪಕ್ಷಗಳೊಡನೆ ಐಕ್ಯವಾಗಿ ತನ್ನ ಅಸ್ತಿತ್ವವನ್ನು ಕಳೆದು ಕೊಳ್ಳಲಾರದು. ಒಂದುಗೂಡಿ ರೂಪುಗೊಂಡ ಹೊಸ ಪಕ್ಷವು ಮೂರನೇ ಅಂತರ್ ರಾಷ್ಟ್ರೀಯದ ಶಾಖೆಯಾಗಲು ಒಪ್ಪಿದರೆ ಮಾತ್ರ ಕಮ್ಯುನಿಸ್ಟ್ ಪಕ್ಷವು ಇನ್ನೊಂದು ಸಾಮ್ಯವಾದೀ ಪಕ್ಷದೊಂದಿಗೆ ಐಕ್ಯವಾಗಬಲ್ಲುದು. ಇದಕ್ಕೆ 'ಐಕ್ಯ' ವೆನ್ನುವುದು ಹುಡುಗಾಟವೇ ಸರಿ. ಇದಲ್ಲದೆ, ಕಮ್ಯುನಿಸ್ಟ್ ಪಕ್ಷವು ಒಂದುಗೂಡಿದ ಇಡಿಯ ಪಕ್ಷವನ್ನು ಕ್ರಮೇಣ ಆಕ್ರಮಿಸಲು ಯತ್ನಿಸಿದರೆ ಅದೂ ಹುಡುಗಾಟವೇ ಆದೀತು. ಆದುದರಿಂದ ಕಮ್ಯುನಿಸ್ಟ್ ಪಕ್ಷದೊಂದಿಗೆ ನಡೆದ ಐಕ್ಯಶಿಸ್ತೀ ಪ್ರಯತ್ನವನ್ನು ಬಿಟ್ಟುಬಿಡುವುದು ಒಳಿತು. ಕಮ್ಯುನಿಸ್ಟ್ ಪಕ್ಷದಂತೆ ಮೇಲ್ವರ್ಗವನ್ನು ಪ್ರತಿನಿಧಿಸದಿರುವ ಸಾಮ್ಯವಾದೀ ಪಕ್ಷಗಳೊಂದಿಗೆ ಐಕ್ಯವನ್ನು ಸಾಧಿಸಬಹುದು ಆದರೆ ಆ ಪಕ್ಷದೊಂದಿಗೆ 'ಐಕ್ಯ'ವೆನ್ನುವುದು ಹುರುಳಿಲ್ಲದ ಮಾತು. ಕಮ್ಯುನಿಸ್ಟ್ ಪಕ್ಷದೊಂದಿಗೆ ಐಕ್ಯವೆಂದರೆ ಕಾಂಗ್ರೆಸ್ ಸಾಮ್ಯವಾದೀ ಪಕ್ಷವೂ ಮೂರನೆಯ ಅಂತರ್ ರಾಷ್ಟ್ರೀಯದ ಶಾಖೆಯಾದಂತೆ ಎಂದರೆ ಕಮ್ಯುನಿಸ್ಟ್ ಪಕ್ಷದ ಒಂದು ಅಂಗವಾದಂತೆ.

ಕಾಂಗ್ರೆಸ್ ಸಾಮ್ಯವಾದೀ ಪಕ್ಷವು ಅಂತರ್‌ರಾಷ್ಟ್ರೀಯದ ಅಂಗ ಸಂಸ್ಥೆಯಾಗಿ ಕಮ್ಯುನಿಸ್ಟ್ ಪಕ್ಷದೊಡನೆ ಏಕೆ ಸಹಕರಿಸಬಾರದು ?—ಎಂಬ ಪ್ರಶ್ನೆ ಮುಂದೆ ಬರಬಹುದು. ಕಾಂಗ್ರೆಸ್ ಸಾಮ್ಯವಾದೀ ಪಕ್ಷವು ಕಮ್ಯುನಿಸ್ಟ್ ಅಂತರ್ ರಾಷ್ಟ್ರೀಯದ ವಿರುದ್ಧವಾಗಿದೆಯೆ ?—ಅಥವಾ ರಶಿಯದ ವಿರುದ್ಧವಾಗಿದೆಯೆ ? ಇವೆರಡರ ವಿರುದ್ಧವೂ ಇಲ್ಲ.

ಆದರೆ ಅಂತರ್ ರಾಷ್ಟ್ರೀಯದ ಅಂಗಸಂಸ್ಥೆಯಾಗಲು ಒಪ್ಪಿಕೊಂಡರೆ ಅನೇಕ ಕಠಿಣ ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ. ಕಾಂಗ್ರೆಸ್ ಸಾಮ್ಯವಾದೀ ಪಕ್ಷವು ಒಂದುಕಡೆಯಿಂದ ಕಿತ್ತು ಇನ್ನೊಂದು ಕಡೆ ನೆಟ್ಟ ಸಸಿಯಲ್ಲ. ಅದು ಹುಟ್ಟಿದ್ದೂ ಬೆಳೆದದ್ದೂ ಭಾರತದ ಮಣ್ಣಿನಲ್ಲಿ. ಅದರ ಹುಟ್ಟಿಗೆ ಹೊರಗಿನ ಯಾವ ಶಕ್ತಿಯ ಪ್ರೇರೇಪಣೆಯೂ ಕಾರಣವಾಗಲಿಲ್ಲ. ಅದು ಸ್ವಾತಂತ್ರ್ಯಕಾಗಿ ಹೋರಾಡುತ್ತಿರುವ ಭಾರತೀಯರ ಅನುಭವಗಳಿಂದ ಬಾಳಿ ಬದುಕಿದೆ. ಅದು ಹುಟ್ಟಿದ್ದು, ಭಾರತದಲ್ಲಿ ಮೂರನೆಯ ಅಂತರ್ ರಾಷ್ಟ್ರೀಯವು ತಳೆದ ಧೋರಣೆಯನ್ನು ಪ್ರತಿಭಟನಲಿಕ್ಕೆ. ಮೂರನೇ ಅಂತರ್ ರಾಷ್ಟ್ರೀಯದ

ಮಾರ್ಗದರ್ಶನದಲ್ಲಿಯೂ ಚಾಣ್ಮೆಯಲ್ಲಿಯೂ ಕಾಂಗ್ರೆಸ್ ಸಾಮ್ಯವಾದೀ ಪಕ್ಷಕ್ಕೆ ವಿಶ್ವಾಸವುಳಿಯದಿರಲು ಅದರ ಆರಂಭದ ಕೃತಿಗಳೇ ಸಾಕು. ಈ ಪರಿಸ್ಥಿತಿಯನ್ನು ಸುಧಾರಿಸಲು ಆ ಮೇಲಿನ ಸಂಗತಿಗಳೂ ಸಹಾಯಕವಾಗ ಲಿಲ್ಲ. ನಮ್ಮ ಪಕ್ಷವು ಜನ್ಮವೆತ್ತಿದ ಕೂಡಲೆ ಅಂತರ್ ರಾಷ್ಟ್ರೀಯದ ಭಾರ ತೀಯ ಶಾಖೆ ನಮ್ಮನ್ನು ಉಗ್ರವಾಗಿ ಪ್ರತಿಭಟಿಸಿತು. ಆ ಸಂಸ್ಥೆಯ ಕೇಂದ್ರ ಸದಸ್ಯರಿಂದ ಮುಂದಾಳುಗಳವರೆಗೆ ಎಲ್ಲರೂ, ನಮ್ಮ ಸಂಸ್ಥೆಯಲ್ಲಿ 'ಸಾಮಾ ಜಿಕ ಫಾಸಿಸ್ಟ'ರಿದ್ದಾರೆಂದು ಸಾರಿದರು. ಇದೆಲ್ಲ ನಮ್ಮ ಸಂಸ್ಥೆಯನ್ನು ತಮ್ಮ ಉಪಶಾಖೆಯನ್ನಾಗಿ ಮಾಡಿಕೊಳ್ಳಲು ನಡೆಸಿದ ತಂತ್ರವೆಂದು ನಾನು ಹೇಳುವುದಿಲ್ಲ. ಅಂತೂ ನಾವೇ ಮುಂದುವರಿದು ಕಮ್ಯುನಿಸ್ಟರ ಸಹಕಾರ ಕೋರಿದರೂ ಅವರು ನಮ್ಮನ್ನು ಸಂಪೂರ್ಣ ಮೋಸಗೊಳಿಸಿದರು.

ಅಂತರ್ ರಾಷ್ಟ್ರೀಯ ಸಂಸ್ಥೆಯು ತಾನು ಪ್ರಪಂಚದ ಕ್ರಾಂತಿಯ ಮುಂದಾಳೆಂದು ಹೇಳಿಕೊಳ್ಳುತ್ತಿದೆ. ಆದ್ದರಿಂದ ಯಾವುದೇ ಕ್ರಾಂತಿಕಾರೀ ಸಂಸ್ಥೆಗೂ ಉತ್ತೇಜನ ಕೊಡುವುದು ಅದರ ಕರ್ತವ್ಯವಾಗಿದ್ದಿತು. ಆದರೆ ಅದರ ಬದಲಾಗಿ ತನ್ನ ಮತೀಯರನ್ನಷ್ಟೇ ಹೊಗಳುವ ಮತ್ತು ಉಳಿದ ಎಲ್ಲ ರನ್ನೂ ತೆಗಳುವ ಸಂಕುಚಿತ ಧೋರಣೆಯನ್ನು ಕೈಕೊಂಡಿತು. ಕಾಂಗ್ರೆಸ್ ಸಾಮ್ಯವಾದೀ ಪಕ್ಷವು ರಾಷ್ಟ್ರದ ಕ್ರಾಂತಿಯ ದ್ಯೋತಕವಾಗಿದ್ದರೂ, ಅದರ ಈ ಆರು ವರುಷಗಳ ಜೀವನದಲ್ಲಿ ಅಂತರ್ ರಾಷ್ಟ್ರೀಯ ಸಂಸ್ಥೆಯು ಅದ ರೊಂದಿಗೆ ಸಹಕರಿಸುವ, ನೆರವಾಗುವ ಇಲ್ಲವೆ ಪ್ರೋತ್ಸಾಹಿಸುವ ಒಂದು ಪ್ರಯತ್ನವನ್ನೂ ಮಾಡಲಿಲ್ಲ. ಮಾತ್ರವಲ್ಲ, ಅದರ ಭಾರತೀಯ ಪ್ರತಿನಿಧಿ ಗಳು ನಮ್ಮ ಸಂಸ್ಥೆಯ ನಾಶನಕ್ಕೆ ಸಾಧ್ಯವಿದ್ದ ಎಲ್ಲ ಪ್ರಯತ್ನವನ್ನೂ ಮಾಡಿ ದರು. ಪ್ರಪಂಚದ ಕ್ರಾಂತಿಯ ಮುಂದಾಳೆಂದು ಕೊಚ್ಚಿಕೊಳ್ಳುವವರು ಕಾಂಗ್ರೆಸ್ ಸಾಮ್ಯವಾದೀ ಪಕ್ಷವನ್ನು ತಮ್ಮ ಕಡೆಗೆ ಒಲಿಸಿಕೊಳ್ಳಲು ಏಕೆ ತಪ್ಪಿದರೆಂಬುದನ್ನಿಷ್ಟು ಹೇಳಬಲ್ಲದೆ?

ಭಾರತೀಯ ಕಮ್ಯುನಿಸ್ಟ್ ಪಕ್ಷದ ಧೋರಣೆಗೂ ನಮ್ಮ ಧೋರಣೆಗೂ ಇರುವ ವಿಶಾಲವಾದ ಅಂತರವನ್ನು ಈ ಸಂದರ್ಭದಲ್ಲಿ ನೆನೆದುಕೊಳ್ಳಬಹುದು ಹಳೆಯ ಭಿನ್ನಾಭಿಪ್ರಾಯಗಳನ್ನು ಮೊದಲೆಯೇ ಹೇಳಿದೆ. ಇಲ್ಲಿ ಸದ್ಯದ ಸ್ಥಿತಿ ಗತಿಯನ್ನು ಮಾತ್ರ ಯೋಚಿಸೋಣ. ಕಮ್ಯುನಿಸ್ಟ್ ಪಕ್ಷವು ಈಗ ಮರಳಿ

ಕಾಂಗ್ರೆಸ್ಸಿನ ವಿರುದ್ಧವೂ ನಮ್ಮ ವಿರುದ್ಧವೂ ಏಕಾಕಿಯಾಗಿ ಹೋರಾಡುತ್ತಿದೆ. ಸತ್ಯಾಗ್ರಹದ ಆಂದೋಲನವನ್ನು ಅದು ಉಗ್ರವಾಗಿ ಟೀಕಿಸುತ್ತಿದೆ. ಇತ್ತೀಚೆಯ ಒಂದು ಪ್ರಕಟನೆಯಲ್ಲಿ ಸುಭಾಸ್‌ಬಾಬು ಮೈದೆಗೆದ ಗಂಭೀರ ವಿಷಯವನ್ನು ಗೇಲಿಮಾಡಿಬಿಟ್ಟಿದೆ. ಕ್ರಾಂತಿಯನ್ನು ಕೆರಳಿಸಿ ಅದಕ್ಕೆ ದಾರಿ ತೋರಿಸುವ ಶಕ್ತಿ ಕಮ್ಯುನಿಸ್ಟ್ ಪಕ್ಷಮಾತ್ರಕ್ಕೇ ಇದೆಯಂತೆ. ಮೂರನೆಯ ಅಂತರ್ ರಾಷ್ಟ್ರೀಯದ ಧೋರಣೆ ಇದೇ. ಕಾಂಗ್ರೆಸ್ ಸಾಮ್ಯವಾದೀ ಪಕ್ಷದ ಧೋರಣೆ ಇದರಿಂದ ಭಿನ್ನವಾಗಿದೆ. ಅದು ಬೇರೆ ಬೇರೆ ಪಕ್ಷಪಂಗಡಗಳಲ್ಲಿ ಸಹಕಾರವನ್ನು ಕೋರುತ್ತದೆ; ಕಾಂಗ್ರೆಸ್ಸನ್ನಾಗಲಿ ಸತ್ಯಾಗ್ರಹವನ್ನಾಗಲಿ ತೆಗಳುವುದಿಲ್ಲ. ಸತ್ಯಾಗ್ರಹಾಂದೋಲನದ ಕುಂದು ಕೊರತೆಗಳನ್ನೂ, ಕಾಂಗ್ರೆಸ್ಸಿನ ಸಂಧಾನ ಧೋರಣೆಯನ್ನೂ, ಅದರಿಂದ ಭವಿತವ್ಯದಲ್ಲಿ ಉಂಟಾಗಬಹುದಾದ ಕೆಡುಕುಗಳನ್ನೂ ನಾವು ಟೀಕಿಸಿದರೂ ದೇಶದೊಳಗಿನ ಇತರ ಕ್ರಾಂತಿಕಾರೀ ಶಕ್ತಿಗಳನ್ನೂ ಸಂಸ್ಥೆಗಳನ್ನೂ ವಿಂಗಡಿಸಿ ಅವುಗಳಿಂದ ದೂರವಿರುವುದು ದೇಶಕ್ಕೆ ಅಪಾಯಕಾರಕವೆಂಬುದು ನಮ್ಮ ಮತ. ಸಂದರ್ಭ ವೊದಗಿದಾಗ ಜನತೆಯು ಕ್ರಾಂತಿಗೆ ಅಣಿಗೊಳ್ಳುವಂತೆ ಒಕ್ಕಲಿಗರ ಮತ್ತು ಕೂಲಿಕಾರರ ಚಟುವಟಿಕೆಗಳನ್ನು ಸಂಘಟಿಸುವುದು ನಮ್ಮ ಪಕ್ಷದ ಕಾರ್ಯಕ್ರಮ. ಆದ್ದರಿಂದ ಕಮ್ಯುನಿಸ್ಟ್ ಪಕ್ಷವೂ ಕಾಂಗ್ರೆಸ್ ಸಾಮ್ಯವಾದೀ ಪಕ್ಷವೂ, ಅರ್ಥಾತ್ ಅಂತರ್ ರಾಷ್ಟ್ರೀಯ ಸಂಸ್ಥೆಯೂ ಕಾಂಗ್ರೆಸ್ ಸಾಮ್ಯವಾದೀ ಪಕ್ಷವೂ ತಮ್ಮ ತಮ್ಮ ಧ್ಯೇಯ ಧೋರಣೆಗಳಲ್ಲಿ ತೀರ ಭಿನ್ನವಾಗಿವೆ. ಕೊನೆಯ ಒಂದು ವಿಷಯವನ್ನು ಪರಿಶೀಲಿಸುವಾ. ಅಂತರ್ ರಾಷ್ಟ್ರೀಯ ಕೂಲಿಕಾರ ಸಂಸ್ಥೆಯೊಳಗಿನ ಎಷ್ಟೋ ಮಾರ್ಕ್ಸ್‌ವಾದಿಗಳ ಅಭಿಪ್ರಾಯದ ಮೇರೆಗೆ ಅಂತರ್ ರಾಷ್ಟ್ರೀಯ ಕಮ್ಯುನಿಸ್ಟ್ ಪಕ್ಷವೆಂದರೆ ಸೋವಿಯಟ್ ಸರಕಾರದ ಪರರಾಷ್ಟ್ರ ಖಾತೆ. ಅದರ ಧ್ಯೇಯ ದೋರಣೆಗಳು ರಶಿಯದ ಪರರಾಷ್ಟ್ರ ಧೋರಣೆಯನ್ನೇ ಅವಲಂಬಿಸಿವೆ. ಎಡ್ಗರ್ ಸ್ನೋನಂಥ ಒಳ್ಳೆಯ ಸಹಾನುಭೂತಿಪರ ಲೇಖಕನು ಕೂಡ ತನ್ನ 'ಚೀನಾದ ಮೇಲಿನ ಕೆಂಪು ನಕ್ಷತ್ರ' ಎಂಬ ಗ್ರಂಥದಲ್ಲಿ ಚೀನದ ಕಮ್ಯುನಿಸ್ಟ್ ಪಕ್ಷ ಮತ್ತು ಅಂತರ್ ರಾಷ್ಟ್ರೀಯ ಕಮ್ಯುನಿಸ್ಟ್ ಪಕ್ಷದ ನಡುವಿನ ಸಂಬಂಧವನ್ನು ಚರ್ಚಿಸುತ್ತ ಇದೇ ಅಭಿಪ್ರಾಯ ವ್ಯಕ್ತಮಾಡಿದ್ದಾನೆ. ಜಗತ್ತಿನ ಎಲ್ಲ ಕಮ್ಯುನಿಸ್ಟ್ ಪಕ್ಷಗಳ ಧ್ಯೇಯ

ಧೋರಣೆಗಳಲ್ಲಿ ಯುದ್ಧಪೂರ್ವದಲ್ಲಿಯೂ ಯುದ್ಧಾನಂತರವೂ ಮೇಲಿಂದ ಮೇಲೆ ಉಂಟಾದ ಬದಲಾವಣೆಗಳು ಇದಕ್ಕೇ ಬೆಂಬಲ ಕೊಡುತ್ತವೆ. ನಿಜ ಸಂಗತಿ ಯಾವುದೇ ಇರಲಿ, ಒಂದು ವಸ್ತು ಮಾತ್ರ ನಿಜ. ಪ್ರತಿ ಒಂದು ಕಮ್ಯುನಿಸ್ಟ್ ಪಕ್ಷವೂ ಮಾಸ್ಕೋದ ಆಜ್ಞೆಗಳನ್ನು ಪಾಲಿಸಬೇಕು; ಏಕೆಂದರೆ ಮಾಸ್ಕೋಕ್ಕೆ ರಶಿಯದ ಹಿತಾಹಿತಗಳು ಗೊತ್ತಿವೆ. ಸಾಮ್ಯವಾದೀ ಸಂಸ್ಥೆಗಳು ರಶಿಯದೊಂದಿಗೆ ಇಟ್ಟುಕೊಳ್ಳಬೇಕಾದ ಯೋಗ್ಯ ಸಂಬಂಧಗಳನ್ನು ಕಾಂಗ್ರೆಸ್ ಸಾಮ್ಯವಾದೀ ಪಕ್ಷವು ಅರಿತಿದ್ದರೂ ಅದು ಯಾರ ಆಜ್ಞೆಗಳನ್ನು ಪಾಲಿಸಲಿಕ್ಕೂ ಸಿದ್ಧವಿಲ್ಲ. ಇದಲ್ಲದೆ ಅಂತರ್ ರಾಷ್ಟ್ರೀಯ ಸಂಸ್ಥೆಯ ಅಂಗ ಸಂಸ್ಥೆಯಾಗುವುದೆಂದರೆ ಅದರ ಪ್ರತಿಯೊಂದು ಆಜ್ಞೆಗೂ ತಲೆಬಾಗುವುದು; ಮಾತ್ರವಲ್ಲ, ರಶಿಯದ ಎಂತಹ ಕೃತಿಯನ್ನೂ ಎತ್ತಿ ಹಿಡಿಯುವುದು. ಇಂತಹ ದಾಸ್ಯಕ್ಕೆ ನಾವು ಸಿದ್ಧರಿಲ್ಲ.

ನಾವು ಏಕೆ ಮೂರನೆಯ ಅಂತರ್ ರಾಷ್ಟ್ರೀಯದ ಅಂಗಸಂಸ್ಥೆಯಾಗಲಾರೆವೆಂಬುದನ್ನು ಮೇಲಿನ ಕಾರಣಗಳು ಸ್ಪಷ್ಟಪಡಿಸುತ್ತವೆ. ಅಂತರ್ ರಾಷ್ಟ್ರಿಯವು ನಮ್ಮ ವಿಷಯದಲ್ಲಿ ಎಂತಹ ತಿರಸ್ಕಾರದ ಭಾವನೆಯನ್ನಿಟ್ಟುಕೊಂಡಿದ್ದರೂ ನಮ್ಮ ಧೋರಣೆ ಮಾತ್ರ ಯಾವಾಗಲೂ ನಿಷ್ಕಪಟವಾದುದು; ಮತ್ತು ಎಷ್ಟೇ ನಿರುಪಯುಕ್ತವಾದರೂ ಸಹಕಾರ ಹಸ್ತವನ್ನು ನಾವು ಯಾವಾಗಲೂ ಮುಂದೆ ಚಾಚಿದ್ದೇವೆ.

ಇನ್ನು ಕಮ್ಯುನಿಸ್ಟ್ ಪಕ್ಷದ ಕಡೆ ಹೊರಳೋಣ. ಅದಕ್ಕೆ ಸಾಮ್ಯವಾದೀ ಐಕ್ಯಕ್ಕೆ ಒಪ್ಪಿಗೆ ಇಲ್ಲದಿದ್ದರೆ ಕಾಂಗ್ರೆಸ್ ಸಾಮ್ಯವಾದೀ ಪಕ್ಷದಲ್ಲಿ ಸೇರಲು ಅದು ತನ್ನ ಪ್ರತಿನಿಧಿಗಳನ್ನೇಕೆ ಕಳಿಸಿತು ? — ಎಂದು ಕೇಳಬಹುದು. ಇದಕ್ಕೆ ಸ್ಪಷ್ಟವಾದ ಎರಡು ಕಾರಣಗಳಿವೆ. ನಮ್ಮ ಸಂಸ್ಥೆ ಜನ್ಮವೆತ್ತಿದಾಗ ನಮ್ಮೊಂದಿಗೆ ಸಹಕರಿಸಲು ಅದು ಕೆಲವು ದಿನಗಳ ವರೆಗೆ ನಿರಾಕರಿಸಿತೆಂಬುದು ನಿಮಗೆ ನೆನಪಿರಬಹುದು. ಆ ಮೇಲೆ ತನ್ನ ಧೋರಣೆಯನ್ನು ಬದಲಿಸಿ ಕಾಂಗ್ರೆಸ್ಸನ್ನು ಸೇರಲು ಅದಕ್ಕೆ ಅಂತರ್ ರಾಷ್ಟ್ರೀಯ ಸಂಸ್ಥೆಯು ಸೂಚಿಸಿದಾಗ ಅದು ಒಂದು ಕಠಿಣ ಸಮಸ್ಯೆಯನ್ನು ಎದುರಿಸಬೇಕಾಯಿತು. ಕಾಂಗ್ರೆಸ್ಸಿನೊಂದಿಗೆ ಅದಕ್ಕೆ ಎಷ್ಟೂ ಸಂಪರ್ಕವಿರಲಿಲ್ಲ. ಆದರೆ ರಾಷ್ಟ್ರೀಯ ಹೋರಾಟದ ಮುಂದಾಳುತನದ ಮಹತ್ವಾಕಾಂಕ್ಷೆ ಮಾತ್ರ ಇತ್ತು. ಇದನ್ನು ಸಾಧಿಸಿಕೊಳ್ಳಲು ಕಾಂಗ್ರೆಸ್

ಸಾಮ್ಯವಾದೀ ಪಕ್ಷವು ಒಂದು ಯೋಗ್ಯ ಸಾಧನವೆಂದು ಅದು ಭಾವಿಸಿತು. ನಮ್ಮ ಪಕ್ಷಕ್ಕೆ ಕಾಂಗ್ರೆಸ್ಸಿನಲ್ಲಿ ಒಂದು ಮಹತ್ವದ ಸ್ಥಾನವಿದ್ದಿತು. ಕಮ್ಯುನಿಸ್ಟ ರಿಗೆ ಪ್ರಾಂತಿಕ ಕಾಂಗ್ರೆಸ್ ಸಮಿತಿಗಳಲ್ಲಿ, ಪ್ರಾಂತಿಕ ಕಾರ್ಯಕಾರೀ ಸಮಿತಿ ಗಳಲ್ಲಿ, ಅಖಿಲ ಭಾರತ ಕಾಂಗ್ರೆಸ್ ಸಮಿತಿಯಲ್ಲಿ ಮತ್ತು ಕಾಂಗ್ರೆಸ್ ಕಾರ್ಯ ಕಾರೀ ಸಮಿತಿಯಲ್ಲಿ ಸೇರುವ ಹವ್ಯಾಸ ಬಹಳವಾಗಿದ್ದಿತು. ಆದರೆ ಅವರ ಯೋಗ್ಯತೆ ಅವರನ್ನು ಕಾಂಗ್ರೆಸ್ ಸಮೀಪಕ್ಕೆ ಹೋಗಲು ಕೂಡ ಅವರನ್ನು ಪ್ರತಿಬಂಧಿಸುತ್ತಲಿತ್ತು. ಅವರು ಕಾಂಗ್ರೆಸ್ಸಿನ ನಾಲ್ಕಾಣೆಯ ಸದಸ್ಯರು ಕೂಡ ಇರಲಿಲ್ಲ. ಆದರೆ ಕಾಂಗ್ರೆಸ್ ಸಾಮ್ಯವಾದೀ ಪಕ್ಷದ ಸದಸ್ಯರಾದರೋ ಕಾಂಗ್ರೆ ಸ್ಸಿನ ಅನೇಕ ಉಚ್ಚಸ್ಥಾನಗಳಲ್ಲಿದ್ದರು. ಆದ್ದರಿಂದ ಅವರು 'ಕಾಂಗ್ರೆಸ್ ಸಾಮ್ಯವಾದೀ ಪಕ್ಷಕ್ಕೆ ಜಯ'ವನ್ನು ಕೋರಿ ಅದರಲ್ಲಿ ಸೇರಿದರು. ಅಂತೂ ಕಾಂಗ್ರೆಸ್ ಸಾಮ್ಯವಾದೀ ಪಕ್ಷದ ಮತಗಳ ಬೆಂಬಲದಿಂದ ಅವರು ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಮತ್ತು ಪ್ರಾಂತಿಕ ಕಾರ್ಯಕಾರೀ ಸಮಿತಿಗಳ ಸ್ಥಾನದಂತಹ ಮಹತ್ವದ ಸ್ಥಾನಗಳನ್ನು ಆಕ್ರಮಿಸಿದರು. ಹೀಗೆ ಅಲ್ಲಿಯ ವರೆಗೆ ಅಜ್ಞಾತರಾದ ಕಮ್ಯುನಿಸ್ಟರ ಕೀರ್ತಿಯ ಪ್ರಚಾರಕ್ಕೆ ನಮ್ಮ ಪಕ್ಷವೇ ರಂಗಭೂಮಿಯಾಯಿತು. ಕಮ್ಯುನಿಸ್ಟರು ಕಾಂಗ್ರೇಸ್ ಸಾಮ್ಯವಾದೀ ಪಕ್ಷ-ವನ್ನು ಸೇರಿದ್ದಕ್ಕೆ ಇನ್ನೊಂದು ಕಾರಣವೇನು ? ಅವರ ಭಾವನೆಯ ಮೇರೆಗೆ ಕಮ್ಯುನಿಸ್ಟ್ ಪಕ್ಷಕ್ಕಲ್ಲದೆ ಬೇರೆ ಸಾಮ್ಯವಾದೀ ಪಕ್ಷಕ್ಕೂ ಬಾಳುವ ಅಧಿಕಾರ ವಿಲ್ಲ. ಕಾಂಗ್ರೆಸ್ ಸಾಮ್ಯವಾದೀ ಪಕ್ಷವು ಸ್ವತಂತ್ರ ಪಕ್ಷವಾಗಿ ಬೆಳೆದರೆ ಕಮ್ಯು ನಿಸ್ಟ್ ಪಕ್ಷಕ್ಕೆ ಆಳಿಗಾಲ ತಪ್ಪಿದ್ದಲ್ಲ. ಆದ್ದರಿಂದ ಕಾಂಗ್ರೆಸ್ ಸಾಮ್ಯವಾದೀ ಪಕ್ಷವನ್ನು ಸೇರಿ ಆದಷ್ಟು ಬೇಗನೇ ಅದನ್ನು ಕೈವಶಪಡಿಸಿಕೊಳ್ಳುವುದು ಇಲ್ಲವೇ ನಾಶಪಡಿಸುವುದು ಅವರ ಗುರಿಯಾಗಿತ್ತು. ಅವರು ನಮ್ಮ ಪಕ್ಷವನ್ನು ಸೇರಲು ಇವೇ ಎರಡು ಮುಖ್ಯ ಕಾರಣಗಳಿದ್ದುವು. ಆದರೆ ಪ್ರವೇಶವನ್ನು ದೊರಕಿಸುವುದಕ್ಕಾಗಿ ಸಾಮ್ಯವಾದೀ ಐಕ್ಯದ ನಮ್ಮ ಧ್ಯೇಯವನ್ನು ಅವರು ಸ್ವೀಕರಿಸಬೇಕಾಯಿತು. ಇಲ್ಲವಾದರೆ ಅವರನ್ನು ಕಾಂಗ್ರೆಸ್ ಸಾಮ್ಯವಾದೀ ಪಕ್ಷದಲ್ಲಿ ಸೇರಗೊಡುವ ಅಗತ್ಯವೇನಿತ್ತು ? ಹೀಗೆ, ಅವರು ಐಕ್ಯದ ತೆರೆಯ ಮರೆಯಲ್ಲಿ ತಮ್ಮ ಹಂಚಿಕೆಗಳನ್ನೆಲ್ಲ ಸಾಧಿಸಿಕೊಂಡರು.

ಕಮ್ಯುನಿಸ್ಟ್ ಪಕ್ಷದಂತಹ ಪಕ್ಷದೊಂದಿಗೆ ಸಾಧಿಸಬೇಕೆಂದಿದ್ದ ಐಕ್ಯದ ಭಾವನೆಯೇ ತಪ್ಪುಗ್ರಹಿಕೆಯಾಗಿತ್ತು—ನಾವು ಅದರ ಮೂಲಭೂತ ತೊಡಕು ತೊಂದರೆಗಳನ್ನು ಯೋಚಿಸಿರಲಿಲ್ಲ. ಇದಲ್ಲದೆ ಅದಕ್ಕಾಗಿ ಹಿಡಿದ ದಾರಿಯೂ ತಪ್ಪಾದುದು. ನಮ್ಮ ಪಕ್ಷದಲ್ಲಿ ಬೇರೆ ಪಕ್ಷದವರಿಗೆ ಪ್ರವೇಶ ಕೊಟ್ಟದ್ದೇ ದೊಡ್ಡ ತಪ್ಪು. ಇದು ಸಂಘಟನೆಯ ಮೂಲ ತತ್ವಗಳಿಗೆ ಸಂಪೂರ್ಣ ವಿರುದ್ಧ ವಾದುದು. ಇಂಥ ತಪ್ಪು ಇನ್ನೆಂದಿಗೂ ಆಗದಂತೆ ನಾವು ನೋಡಿಕೊಳ್ಳಬೇಕು. ಅದು ನಮ್ಮ ನಮ್ಮೊಳಗೇ ಭಿನ್ನಾಭಿಪ್ರಾಯವನ್ನೂ ವಿರೋಧವನ್ನೂ ಹುಟ್ಟಿಸದೆ ಬಿಡದು. ಒಂದು ಪಕ್ಷದ ಜನರನ್ನು ಇನ್ನೊಂದು ಪಕ್ಷದಲ್ಲಿ ಸೇರಿಸಿಕೊಳ್ಳುವು ದರ ಮೂಲಕ ಐಕ್ಯಸಾಧನೆಗಾಗಿ ಪ್ರಯತ್ನಿಸಿದ ಉದಾಹರಣೆ ಪ್ರಪಂಚದಲ್ಲಿ ಎಲ್ಲಿಯೂ ಇಲ್ಲ. ಕಾಂಗ್ರೆಸ್ ಸಾಮ್ಯವಾದೀ ಪಕ್ಷವು ಇಂಥ ಪ್ರಯೋಗದಿಂದ ತುಂಬಾ ಕಟು ಅನುಭವವನ್ನು ಪಡೆಯಿತು.

ಇದನ್ನು ಕುರಿತು ನಮ್ಮ ಪಕ್ಷದ ಮಾತುಕತೆಗಳಲ್ಲಿ ಮೇಲಿಂದ ಮೇಲೆ ಒಂದು ಮಾತಿನ ಚರ್ಚೆಯಾಗುತ್ತಿದೆ—ಭೇದೋಪಾಯವನ್ನು ಕಮ್ಯುನಿಸ್ಟ್ ಪಕ್ಷಮಾತ್ರವೇ ಹಿಡಿಯಬಲ್ಲುದೆ? ಅದನ್ನೇ ನಾವು ಹಿಡಿಯಲಾರೆವೇಕೆ? ಅದಕ್ಕೆ ಸ್ಪಷ್ಟವಾದ ಎರಡು ಕಾರಣಗಳಿವೆ. ಅವರಿಗೆ ಈ ಕೆಲಸ ಸಾಧಿಸಲಿಕ್ಕೆ ಸಂಧಿ ದೊರೆತದ್ದು ನಮ್ಮ ಪಕ್ಷದಲ್ಲಿ ಸೇರಲು ನಾವು ಅವರಿಗೆ ಇಂಬುಗೊಟ್ಟದ್ದ ರಿಂದ. ನಮಗೆ ಅವರ ಪಕ್ಷವನ್ನು ಸೇರುವ ಮನಸ್ಸೂ ಇರಲಿಲ್ಲ, ಸಂದರ್ಭವೂ ದೊರಕಿರಲಿಲ್ಲ. ಆದ್ದರಿಂದ ನಮಗೆ ಇಂಥ ಸಂಧಿ ಒದಗಲಿಲ್ಲ. ಎರಡನೆಯ ದೆಂದರೆ—ಇದೇ ಮಹತ್ವದ ಕಾರಣ—ಭೇದೋಪಾಯವು ಒಕ್ಕಟ್ಟಿನ ತತ್ವಕ್ಕೆ ವಿರುದ್ಧವಾದುದು. ನಾವು ಅಂತಃಕರಣಪೂರ್ವಕವಾಗಿ ಐಕ್ಯವನ್ನು ಬಯಸಿ-ದ್ದೆವು. ಆದ್ದರಿಂದ ಭೇದೋಪಾಯದ ಪ್ರಶ್ನೆಯೇ ಇರಲಿಲ್ಲ.

ಕಮ್ಯುನಿಸ್ಟರನ್ನು ತಳ್ಳಿಬಿಡುವ ತೀರ್ಮಾನವನ್ನು ಕೈಕೊಂಡಂದಿನಿಂದ ಇದು ಕಮ್ಯುನಿಸ್ಟ್ ವಿರೋಧೀ ಕಾರ್ಯಕ್ರಮವೆಂದು ಅವರು ಪ್ರಚಾರ ಮಾಡ ತೊಡಗಿದರು. ಈ ನಿರ್ಣಯದಲ್ಲಿ ಕಮ್ಯುನಿಸ್ಟ್ ವಿರೋಧಿ ಕಾರ್ಯಕ್ರಮ ವೇನೂ ಇರಲಿಲ್ಲ. ನಮ್ಮ ಈ ತೀರ್ಮಾನವೆಂದರೆ; ಕಮ್ಯುನಿಸ್ಟ್ ಪಕ್ಷವು ಕಾಂಗ್ರೆಸ್ ಸಾಮ್ಯವಾದೀ ಪಕ್ಷದ ವಿರುದ್ಧ ಹೂಡಿದ ಚಟುವಟಿಕೆಗಳನ್ನು ತಡೆಯಲು ಕೈಕೊಂಡ ಉಪಾಯ. ನಮ್ಮ ಪಕ್ಷದಲ್ಲಿರಲು ಕಮ್ಯುನಿಸ್ಟರಿಗೆ

ಯಾವ ಹಕ್ಕೂ ಇರಲಿಲ್ಲ. ಅವರಿಗೆ ನಮ್ಮ ಪಕ್ಷದಲ್ಲಿ ಪ್ರವೇಶಕೊಟ್ಟದ್ದು ಎರಡೂ ಪಕ್ಷಗಳನ್ನು ಒಂದುಗೂಡಿಸುವ ಒಂದು ವಿಶಿಷ್ಟ ಉದ್ದೇಶದಿಂದ ಮಾತ್ರ. ಕಮ್ಯುನಿಸ್ಟ್ ಪಕ್ಷವು ಕಾಂಗ್ರೆಸ್ ಸಾಮ್ಯವಾದೀ ಪಕ್ಷದ ಬದ್ಧ ವೈರಿಯಾಗಿ ಅದನ್ನು ನಾಶಗೊಳಿಸಲು ಸರ್ವ ಪ್ರಯತ್ನವನ್ನೂ ಮಾಡುತ್ತಿದ್ದಾಗ, ಕಾಂಗ್ರೆಸ್ ಸಾಮ್ಯವಾದೀ ಪಕ್ಷದಲ್ಲಿ ಸೇರಿದ ಕಮ್ಯುನಿಸ್ಟರು ಅದರ ಕಡುಹಗೆಗಳಾಗಿ ಶಕ್ತಿ ಸಂಘಟನೆಯನ್ನು ಕುಗ್ಗಿಸಲು ಯತ್ನಿಸುತ್ತಿರುವಾಗ, ಅವರನ್ನು ನಮ್ಮ ಪಕ್ಷದಿಂದ ಹೊರತಳ್ಳುವಂತಹ ತೀರ ಸೌಮ್ಯ ರೀತಿಯ ಉಪಾಯವನ್ನೂ ಕೈಕೊಳ್ಳಕೂಡದೆ? ತನ್ನ ಬದ್ಧ ವೈರಿಯಾದ ಸದಸ್ಯರನ್ನು ಯಾವ ಸಂಸ್ಥೆಯೂ ತನ್ನಲ್ಲಿ ಉಳಿಯಗೊಡಲಾರದು. ಕಮ್ಯುನಿಸ್ಟರನ್ನು ಕಾಂಗ್ರೆಸ್ ಸಾಮ್ಯವಾದೀ ಪಕ್ಷದಿಂದ ಹೊರತಳ್ಳಿದಾಕ್ಷಣ ಕಮ್ಯುನಿಸ್ಟ್ ಪಕ್ಷಕ್ಕೇನೂ ಅಪಚಾರ ಮಾಡಿದಂತಾಗಲಿಲ್ಲ.

ಕಮ್ಯುನಿಸ್ಟರನ್ನು ಹೊರತಳ್ಳುವ ನಿರ್ಣಯದ ವಿಷಯದಲ್ಲಿ, ಕಮ್ಯುನಿಸ್ಟ್ ಪ್ರಚಾರದಿಂದ ಸ್ಫೂರ್ತಿಹೊಂದಿದ ಕೆಲವರು ನಮಗೆ, ಕೆಲವೊಮ್ಮೆ ಕಮ್ಯುನಿಸ್ಟರಿಂದಲೇ ಪ್ರಚೋದಿತವಾದ ಒಂದು ಪ್ರಶ್ನೆಯನ್ನು ಕೇಳುತ್ತಿರುತ್ತಾರೆ—ಇಂತಹ ನಿರ್ಣಯ ಕೈಕೊಳ್ಳಲು ಕಾಂಗ್ರೆಸ್ ಸಾಮ್ಯವಾದೀ ಪಕ್ಷಕ್ಕೆ ಏನು ಹಕ್ಕು ಇದೆ? ಇಂಥ ತೀರ್ಮಾನಗಳನ್ನು ಕೈಕೊಳ್ಳಲು ಪಕ್ಷದ ಸಮ್ಮೇಲನಕ್ಕೆ ಮಾತ್ರ ಅಧಿಕಾರವಿದೆಯಲ್ಲವೆ? ಈ ಪ್ರಶ್ನೆಯ ನಿರ್ಧಾರಕ್ಕೆ ನಮ್ಮ ಕಾರ್ಯಕಾರೀ ಸಮಿತಿ ತಕ್ಕ ಅಧಿಕಾರಿಯೆಂಬುದನ್ನು ನಾನು ಶೃತಪಡಿಸುತ್ತೇನೆ. ಈ ವಿಷಯದಲ್ಲಿ ಆರಂಭದಿಂದಲೂ ಕಾರ್ಯಕಾರೀ ಸಮಿತಿಯೇ ನಿರ್ಣಯಗಳನ್ನು ಕೈಕೊಳ್ಳುತ್ತಲಿತ್ತು. ಕಮ್ಯುನಿಸ್ಟರನ್ನು ಸೇರಿಸಿಕೊಳ್ಳಲು ತೀರ್ಮಾನಿಸಿದ್ದು ಮೀರತ್ತಿನಲ್ಲಿ ಸೇರಿದ ಕಾರ್ಯಕಾರೀ ಸಮಿತಿಯೇ ಹೊರತು ಪಕ್ಷದ ಬೇರೆ ಯಾವ ಸಮ್ಮೇಲನವೂ ಅಲ್ಲ. ಅದು ಸಮ್ಮೇಲನದಲ್ಲಿ ತೀರ್ಮಾನವಾದ ವಿಷಯವಾಗಿದ್ದರೆ ಅದರ ಬದಲಾವಣೆಗೆ ಇನ್ನೊಂದು ಸಮ್ಮೇಲನವೇ ಆಗತ್ಯವಿದ್ದಿತು. ಕಾರ್ಯಕಾರೀ ಸಮಿತಿಯಲ್ಲಿ ಈ ತೀರ್ಮಾನವಾದುದರಿಂದ ಅದನ್ನು ಬದಲಿಸಲು ಕಾರ್ಯಕಾರೀ ಸಮಿತಿಗೇ ಅಧಿಕಾರವಿದೆ. ಈ ನಿರ್ಣಯವನ್ನು ಕಾರ್ಯಕಾರೀ ಸಮಿತಿಯೇ ಕೈಕೊಳ್ಳಲು ಒಂದು ಕಾರಣವಿದ್ದಿತು. ಕಮ್ಯುನಿಸ್ಟ್ ಪಕ್ಷವು ಅಂದು ಅಕ್ರಮ ಸಂಸ್ಥೆಯಾಗಿದ್ದಿತು—ಇಂದಿಗೂ

ಹಾಗೆಯೇ ಇದೆ. ಆದ್ದರಿಂದ ಅದಕ್ಕೆ ಸಂಬಂಧಿಸಿದ ವಿಷಯವನ್ನು ಸಮ್ಮೇಲನದಲ್ಲಿ ಬಹಿರಂಗವಾಗಿ ಚರ್ಚಿಸುವುದು ಸಾಧ್ಯವಿರಲಿಲ್ಲ ಅದಕ್ಕೆ ಕಾಂಗ್ರೆಸ್ ಮಂತ್ರಿಮಂಡಲಗಳು ಅಧಿಕಾರ ಸ್ವೀಕರಿಸಿದ ಮೇಲೆ ಮಾತ್ರ ಕೊಂಚ ಸ್ವಾತಂತ್ರ್ಯ ಸಿಕ್ಕಂತಾಯಿತು. ಸ್ವತಂತ್ರವಾಗಿ ಚರ್ಚಿಸಲು ಸಾಧ್ಯವಾದುದು ಆ ಮೇಲೆ.

ಈ ವಿಷಯವನ್ನು ಎತ್ತುವುದರಲ್ಲಿ ಕಮ್ಯುನಿಸ್ಟ್ ಪಕ್ಷದ ಉದ್ದೇಶವೇನಿದ್ದಿತು ?—ಕಾಂಗ್ರೆಸ್ ಸಾಮ್ಯವಾದೀ ಪಕ್ಷದ ಕಾರ್ಯಕಾರೀ ಸಮಿತಿ ಕಮ್ಯುನಿಸ್ಟ್ ಪಕ್ಷದ ವಿರೋಧಿಯೆಂದೂ, ಈ ವಿಷಯವನ್ನು ಬಹಿರಂಗಾಧಿವೇಶನದಲ್ಲಿ ಚರ್ಚಿಸಿದ್ದರೆ ಅದರ ನಿರ್ಣಯವೇ ಬೇರೆಯಾಗುತ್ತಿತ್ತೆಂದೂ ತೋರಿಸುವುದು. ನಮ್ಮ ಕಾರ್ಯಕಾರೀ ಸಮಿತಿಯು ಈ ವಿಷಯದಲ್ಲಿ ತೋರಿದ ಔದಾರ್ಯವೆಂತಹದೆಂಬುದನ್ನು ಸ್ಪಷ್ಟಪಡಿಸಲು ಈ ಪ್ರಕರಣದ ಮೂರನೇ ಭಾಗವು ಸಾಕು. ನಮ್ಮ ಕಾರ್ಯಕಾರೀ ಸಮಿತಿಯ ಮೀರತ್ ನಿರ್ಣಯಕ್ಕೆ ಯಾರ ಒತ್ತಾಯವೂ ಕಾರಣವಾಗಿರಲಿಲ್ಲ ಆ ಮೇಲೆ, ಅವರ ಹಲವು ಉಪಧ್ಯಾನಗಳು ಕಂಡುಬಂದ ಮೇಲೆಯೂ ನಮ್ಮ ಕಾರ್ಯಕಾರೀ ಸಮಿತಿ ಸಹನೆಯಿಂದ ನಡೆದುದಕ್ಕೆ ಯಾರ ಒತ್ತಾಯವೂ ಕಾರಣವಾಗಿರಲಿಲ್ಲ. ನಮ್ಮ ಪಕ್ಷದ ಆಂಧ್ರ ಶಾಖೆಯನ್ನು ಅವರಿಗೆ ಒಪ್ಪಿಸಿದ್ದೂ, ಮುಂಬೈ ನಿರ್ಣಯದ ನಂತರ ಅಲಹಾಬಾದ್ ಸಮಿತಿಯಲ್ಲಿ ಎಂಟು ಜನ ಕಮ್ಯುನಿಸ್ಟರನ್ನು ಸೇರಿಸಿಕೊಂಡದ್ದೂ ಯಾರ ಒತ್ತಾಯ ಆದೇಶಗಳಿಂದಲೂ ಅಲ್ಲ ಇಂದು ಕಮ್ಯುನಿಸ್ಟರ ಉಗ್ರ ಅಪಪ್ರಚಾರ ನಡೆದಿದ್ದರೂ ನಮ್ಮ ಕಾರ್ಯಕಾರೀ ಸಮಿತಿ ಈಗಲೂ ಅವರ ಕಡೆಗೆ ಸಹಕಾರ ಹಸ್ತವನ್ನು ನೀಡುತ್ತಿರುವುದು ಯಾರ ಒತ್ತಾಯದಿಂದಲೂ ಅಲ್ಲ. ನಮ್ಮ ಕಾರ್ಯಕಾರೀ ಸಮಿತಿಯ ವಿರುದ್ಧವಾಗಿ ನಮ್ಮ ಪಕ್ಷದ ಸದಸ್ಯರನ್ನು ಕೆರಳಿಸಲು ಕಮ್ಯುನಿಸ್ಟ್ ಪಕ್ಷವು ಕೈಕೊಂಡ ಈ ಪ್ರಯತ್ನದಷ್ಟು ಹಾಸ್ಯಾಸ್ಪದವಾದ ವಿಷಯ ಇನ್ನೊಂದಿಲ್ಲ.

ಇನ್ನೂ ಒಂದು ಸಾಮಾನ್ಯವಾದ ಪ್ರಶ್ನೆಯನ್ನು ಕೇಳುತ್ತಿದ್ದಾರೆ: ಮಾರ್ಕ್ಸ್‌ವಾದವು ಏಕವೂ ಅವಿಭಾಜ್ಯವೂ ಅಲ್ಲವೆ? ಎರಡು ಸಾಮ್ಯವಾದೀ ಪಕ್ಷಗಳ ಅವಶ್ಯಕತೆ ಇದೆಯೆ? ಈ ಪ್ರಶ್ನೆಗೆ ಈ ಪ್ರಕರಣವೇ ಉತ್ತರವಾಗಿದೆ. ಮಾರ್ಕ್ಸ್‌ವಾದವೂ ಏಕವೂ ಅವಿಭಾಜ್ಯವೂ ಎಂಬುದು ನಿಜ. ಆದರೆ ಇಂಥ

ಒಂದು ವಿಚಿತ್ರ ಸಾಮಾಜಿಕ ಪರಿಸ್ಥಿತಿಯಲ್ಲಿ ಮಾರ್ಕ್ಸ್‌ವಾದವನ್ನು ಹೇಗೆ ಅನ್ವಯಿಸಬೇಕೆಂಬುದು ಮಹತ್ವದ ಪ್ರಶ್ನೆ. ಮಾರ್ಕ್ಸ್‌ವಾದವು ೧೯೩೪ರಲ್ಲಿಯೂ ಒಂದೇ ಆಗಿತ್ತು. ಹೀಗಿದ್ದರೂ ಅದನ್ನು ಅನ್ವಯಿಸುವದಕ್ಕೆ ಕಮ್ಯುನಿಸ್ಟ ಪಕ್ಷ ಮತ್ತು ಮೂರನೆಯ ಅಂತರ್ ರಾಷ್ಟ್ರೀಯವು ಹಿಡಿದ ದಾರಿಯೂ ಕಾಂಗ್ರೆಸ್ ಸಾಮ್ಯವಾದೀ ಪಕ್ಷವು ಹಿಡಿದ ದಾರಿಯೂ ಒಂದಕ್ಕೊಂದು ವಿರುದ್ಧವಾಗಿದ್ದುವು. ನಿಮಗೆ ಬೇಕಾದ ಉತ್ತರವು ಸಂಕ್ಷೇಪವಾಗಿ ಇಲ್ಲಿದೆ.

ಮಾರ್ಕ್ಸ್‌ವಾದಿಯು ಸಾಮಾಜಿಕ ಪರಿಸ್ಥಿತಿಯನ್ನು ಇದ್ದಕ್ಕಿದ್ದಂತೆ ತಿಳಿದುಕೊಳ್ಳಲು ಎಂದೂ ಯತ್ನಿಸುವುದಿಲ್ಲ. ಅವನು ಅದನ್ನು ಐತಿಹಾಸಿಕ ದೃಷ್ಟಿಯಿಂದಲೂ ಅದಕ್ಕೆ ಸಂಬಂಧಿಸಿದ ಇತರ ವಿಷಯಗಳನ್ನು ಪರಿಶೀಲಿಸಿಯೂ ತಿಳಿದುಕೊಳ್ಳುತ್ತಾನೆ. ಒಂದೇ ಒಂದು ಮಾರ್ಕ್ಸ್‌ವಾದೀ ಪಕ್ಷವಿದ್ದರೆ ಒಳಿತೆಂದು ನಮಗೂ ತೋರುತ್ತದೆ. ಆದರೆ ವಾಸ್ತವಿಕವಾದ ಒಂದೇ ಪರಿಸ್ಥಿತಿಯಲ್ಲಿ ಎರಡು ಮಾರ್ಕ್ಸ್‌ವಾದೀ ಪಂಗಡಗಳು ಹೇಗೆ ಹುಟ್ಟಿದುವೆಂಬುದನ್ನು ನಾವು ಐತಿಹಾಸಿಕ ದೃಷ್ಟಿಯಿಂದ ನೋಡಬೇಕು. ೧೯೩೦–೧೯೩೪ರ ರಾಷ್ಟ್ರೀಯ ಹೋರಾಟದಲ್ಲಿ ಕಾಂಗ್ರೆಸ್ಸಿನ ತರುಣ ಕಾರ್ಯಕರ್ತರಲ್ಲಿ ತಕ್ಕಷ್ಟು ಕ್ರಾಂತಿಕಾರೀ ಪ್ರವೃತ್ತಿಯುಂಟಾಗಿತ್ತು. ೧೯೩೪ರ ಸುಮಾರಿಗೆ ಒಂದು ಸಾಮ್ಯವಾದೀ ಗುಂಪು ರೂಪುಗೊಂಡಿತು. ಈ ಗುಂಪಿಗೂ ಕಮ್ಯುನಿಸ್ಟ ಪಕ್ಷಕ್ಕೂ ನಡುವೆ ಒಂದು ಆಳವಾದ ಭಿನ್ನಾಭಿಪ್ರಾಯವಿತ್ತು—ಎಂದರೆ, ಕಾಂಗ್ರೆಸ್ಸಿನಿಂದ ದೂರವಿರಬೇಕೆಂದು ಕಮ್ಯುನಿಸ್ಟ ಪಕ್ಷವು ಹಿಡಿದ ಪ್ರವೃತ್ತಿ, ಇವೆರಡೂ ಪಕ್ಷಗಳ ಸಹಕಾರಕ್ಕೆ ಅಡ್ಡಿಯಾಗಿತ್ತು. ಆದ್ದರಿಂದ ಒಂದು ಹೊಸ ಪಕ್ಷದ ಹುಟ್ಟು ಅವಶ್ಯವೇ ಆಯಿತು. ಹೀಗೆ ಕಮ್ಯುನಿಸ್ಟರ ಮತ್ತು ಮೂರನೇ ಅಂತರ್‌ರಾಷ್ಟ್ರೀಯದ ತಪ್ಪು ಧೋರಣೆಯೇ ಕಾಂಗ್ರೆಸ್ ಸಾಮ್ಯವಾದೀ ಪಕ್ಷದ ಹುಟ್ಟಿಗೆ ಕಾರಣವಾಯಿತು.

ಈ ಎರಡನೆ ಪಕ್ಷದ ಉದಯದ ನಂತರ ನಡೆದುದೆಲ್ಲವೂ ವಿವರವಾಗಿ ವರ್ಣಿತವಾಗಿದೆ. ಕಾಂಗ್ರೆಸ್ ಸಾಮ್ಯವಾದೀ ಪಕ್ಷವು ತನ್ನ ಹುಟ್ಟಿನಿಂದಲೂ ಮಾರ್ಕ್ಸ್‌ವಾದೀ ಪಂಗಡಗಳ ಸಂಘಟನೆಗೆ ಪ್ರಯತ್ನಪಟ್ಟಿದೆ. ಕಮ್ಯುನಿಸ್ಟ ಪಕ್ಷಕ್ಕೆ ಐಕ್ಯವೂ ಒಗ್ಗಟ್ಟಿಲ್ಲವಾದುದರಿಂದಲೆ ನಮ್ಮ ಯತ್ನವು ವಿಫಲವಾಯಿತು. ಈ ಐತಿಹಾಸಿಕ ಘಟನೆಯ ಕಾರಣದಿಂದ ಇನ್ನೂ ಎರಡು ಪಕ್ಷಗಳೇ ಅಸ್ತಿತ್ವ

ದಲ್ಲಿವೆ. ಈ ಎರಡು ಪಕ್ಷಗಳ ನಡುವಿನ ಈಗಿನ ಭಿನ್ನಾಭಿಪ್ರಾಯಗಳನ್ನೂ ಅಂತರ್ ರಾಷ್ಟ್ರೀಯದ ಅಂಗಸಂಸ್ಥೆಯಾಗುವುದರಿಂದ ಉದ್ಭವಿಸಬಹುದಾದ ತೊಂದರೆಗಳನ್ನೂ ಇಲ್ಲಿ ವಿವರಿಸಿದೆ. ಈ ಭಿನ್ನಾಭಿಪ್ರಾಯಗಳೂ ತೊಂದರೆಗಳೂ ಇರುವ ವರೆಗೆ ಈ ಎರಡು ಪಕ್ಷಗಳ ಅಸ್ತಿತ್ವವೂ ತಪ್ಪಿದ್ದಲ್ಲ.

ಇದು ದುರ್ದೈವದ ಒಂದು ಸಂಗತಿಯೆಂದು ನನ್ನಂತೆ ಉಳಿದವರಿಗೂ ತೋರದಿರದು. ಆದರೆ ಈ ಪ್ರಕರಣದಲ್ಲಿ ವಿವರಿಸಿದ ಸಂಗತಿಗಳಿಗಾಗಿ ಇದು ಅನಿವಾರ್ಯವೆಂಬುದೂ ಸ್ಪಷ್ಟವಿದೆ. ಎಷ್ಟೋ ಸ್ನೇಹಿತರು ಸಂದೇಹಪಟ್ಟಿದ್ದರೂ ನಮ್ಮ ಪಕ್ಷದ ಧೋರಣೆಯಂತೆ ರಾಷ್ಟ್ರದ ಇತರ ಸಾಮ್ಯವಾದೀ ಪಂಗಡಗಳ ಸಹಕಾರವನ್ನು ದೊರಕಿಸಲು ಹೃತ್ಪೂರ್ವಕವಾಗಿ ಯತ್ನಿಸಿದೆವೆಂಬ ಸಮಾಧಾನ ನನಗಿದೆ. ನಮ್ಮಂತೆ ಉಳಿದ ಪಂಗಡಗಳೂ ತಮ್ಮ ಪಕ್ಷಾಂಧತೆಯ ಧೋರಣೆಯನ್ನು ಬದಿಗಿರಿಸಿ ಸ್ವಲ್ಪ ಮಟ್ಟಿಗಾದರೂ ಉದಾರತನದಿಂದ ಸಹಕರಿಸಿದ್ದರೆ ನಮ್ಮ ಪ್ರಯತ್ನವು ಯಶಸ್ವಿಯಾಗುತ್ತಿತ್ತೆಂಬುದರಲ್ಲಿ ಸಂದೇಹವಿಲ್ಲ.

ಭೇದಬುದ್ಧಿಯ ಮತ್ತು ಪಕ್ಷಾಂಧತೆಯ ಲಾಭಗಳಿಗಿಂತ ನಮ್ಮ ಗುರಿಯೇ ಶ್ರೇಷ್ಠವೆಂಬ ತಿಳುವಳಿಕೆ ಎಲ್ಲರಿಗೂ ಭವಿಷತ್ತಿನಲ್ಲಿ, ಬಹುಬೇಗನೆ, ಬರುವುದೆಂದು ಆಶಿಸೋಣ.

---

೬

# ಬರಹಗಳು ಮತ್ತು ಹೇಳಿಕೆಗಳು

---



---

* ಉತ್ತರ ಕರ್ನಾಟಕದ "ಖಟ್ಲೆ"

# ಬರಹಗಳು ಮತ್ತು ಹೇಳಿಕೆಗಳು

## ೧

## ಫೈಜ್‌ಪುರ ಕಾಂಗ್ರೆಸ್ಸು (೧೯೩೬)

ಫೈಜ್‌ಪುರ ಕಾಂಗ್ರೆಸ್ಸಿಗೆ ಹೋಗದ ಮತ್ತು ಪತ್ರಿಕೆಗಳಲ್ಲಿ ತಲೆ ಬರಹಕ್ಕಿಂತ ಹೆಚ್ಚಿಗೆ ಓದಲು ಅನುವು ಇಲ್ಲದ ಜನರು ಆ ಅಧಿವೇಶನದ ಮಹತ್ವವನ್ನರಿಯಲಾರರು. ಪತ್ರಿಕೆಗಳ ತಲೆ ಬರಹಗಳು ಎರಡು ವಿಷಯಗಳನ್ನು ಮಾತ್ರ ತಿಳಿಸಿದಂತೆ ತೋರುತ್ತದೆ. ಮೊದಲನೆಯದು, ಸಾಮ್ಯವಾದಿಗಳನ್ನು ಎಲ್ಲ ಕಡೆಯಿಂದಲೂ ಮಟ್ಟಹಾಕಲಾಯಿತು ಎಂಬುದು. ಎರಡನೆಯದು, ಅಧಿವೇಶನವು-ಹೇಳುತ್ತಿರುವುದರಿಂದ—ತುಂಬಾ ಯಶಸ್ವಿಯಾಯಿತೆಂಬುದು.

ಫೈಜ್‌ಪುರ ಕಾಂಗ್ರೆಸ್ಸು ಅತ್ಯಂತ ಯಶಸ್ವಿಯಾಯಿತೆಂಬಲ್ಲಿ ಭಿನ್ನಾಭಿಪ್ರಾಯವಿಲ್ಲ. ಆದರೆ ಅಧಿವೇಶನವು ಯಶಸ್ವಿಯಾಯಿತೆಂದು ಯಾವ ದೃಷ್ಟಿಯಿಂದ ಪತ್ರಿಕಾ ಸಂಪಾದಕರು ಹೇಳುತ್ತಾರೋ ಆ ದೃಷ್ಟಿಯನ್ನು ಮಾತ್ರ ನಾವು ಒಪ್ಪಲಾರೆವು.

ಫೈಜ್‌ಪುರ ಕಾಂಗ್ರೆಸ್ಸು ಅನೇಕ ದೃಷ್ಟಿಯಿಂದ ಮಹತ್ವದ್ದಾಗಿದ್ದಿತು. ಇದು ಹಳ್ಳಿಯಲ್ಲಿ ನೆರೆದ ಮೊದಲನೇ ಅಧಿವೇಶನವೆಂಬ ದೃಷ್ಟಿಯಿಂದ ತುಂಬಾ ಯಶಸ್ವಿಯಾಯಿತು. ಅಲ್ಲಿ ಕೂಡಿದ ಲಕ್ಷಗಟ್ಟಲೆ ಒಕ್ಕಲಿಗರು ಅದಕ್ಕೆ ವಿಶೇಷ ಅರ್ಥವನ್ನೂ ಕಳೆಯನ್ನೂ ಕೊಟ್ಟದ್ದು ಕಾಂಗ್ರೆಸ್ಸಿನ ಇತಿಹಾಸದಲ್ಲಿ ಅಪೂರ್ವವಾದುದು. ಇಂಥ ಸಾಹಸದ ಪ್ರಯೋಗಕ್ಕೆ ಧೈರ್ಯದಿಂದ ಕೈಹಾಕಿ ಮಾರ್ಗ ತೋರಿಸಿದ ಬಗೆಗೆ ಮಹಾರಾಷ್ಟ್ರದ ಕಾಂಗ್ರೆಸ್ ಮುಂದಾಳುಗಳು ನಮ್ಮ ಹೃತ್ಪೂರ್ವಕ ಅಭಿನಂದನೆಗೆ ಪಾತ್ರರು.

ಈ ಅಧಿವೇಶನದ ಯಶೋಭಾಗವೆಂದರೆ ಅದು ಬಲಪಕ್ಷದ ಶಕ್ತಿಗಳನ್ನು ಶಾಶ್ವತವಾಗಿ ನಿಯಂತ್ರಿಸಿದ್ದು. ಈ ಪಕ್ಷದ ಶಕ್ತಿ ಫೈಜ್‌ಪುರದಲ್ಲಿ ಸಂಪೂರ್ಣವಾಗಿ ಉಡುಗಿತೆಂದು ಇದರ ಅರ್ಥವಲ್ಲ ಬಲಪಕ್ಷವು ಇನ್ನೂ ಬಲಿಷ್ಠವಾಗಿಯೇ ಇದೆ. ಆದರೆ ಫೈಜ್‌ಪುರ ಕಾಂಗ್ರೆಸ್ಸು ಅದರ ಏರಾಟಕ್ಕೆ ತಡೆ ಹಾಕಿತು. ಮಾತ್ರವಲ್ಲ, ಇನ್ನು ಮುಂದೆ ಎಡ ಪಕ್ಷವು ನಿಶ್ಚಯವಾಗಿಯೂ ಬೆಳೆದು ಕಾಂಗ್ರೆಸ್ಸನ್ನು ವ್ಯಾಪಿಸುವುದರಲ್ಲಿ ಸಂದೇಹವಿಲ್ಲ.

ಕೆಲವರಿಗೆ ಇದು ಬರಿಯ ಕಲ್ಪನಾವಿಲಾಸವೆಂದು ತೋರಬಹುದು. 'ನಾವು ಕಾಂಗ್ರೆಸ್ ಬಲ ಪಕ್ಷವನ್ನು 'ಸಾಕಷ್ಟು ಬಲವಾಗಿ ಎದುರಿಸಲಿಲ್ಲ' ವೆಂದು ಹಲವು ಮಿತ್ರರು ಅತೃಪ್ತಿಗೊಂಡಿದ್ದಾರೆ. ವಿವೇಕಶೂನ್ಯ ವಿರೋಧವೇ ರಾಜನೀತಿಯೆಂದು ತಿಳಿದವರನ್ನು ತೃಪ್ತಿಗೊಳಿಸುವಷ್ಟು ನಾವು ಹೋರಾಡ ಲಿಲ್ಲವಾದರೂ ಅಗತ್ಯವಿರುವಲ್ಲೆಲ್ಲ ವಿರೋಧ ವ್ಯಕ್ತಪಡಿಸಿದ್ದರಲ್ಲಿ ಸಂದೇಹವಿಲ್ಲ. ಕಾಂಗ್ರೆಸ್ ಕಾರ್ಯಕಾರೀ ಸಮಿತಿಯು ಮುಂದಿಟ್ಟ ಎಷ್ಟೋ ಗೊತ್ತುವಳಿಗಳು ಎಡಪಕ್ಷದ ಪ್ರಚಾರದ ಹಾಗೂ ಮುಂದಾಳುತನದ ಫಲವಾಗಿದ್ದುವು ಉದಾ ಹರಣೆಗೆ—ಒಕ್ಕಲುತನ, ಯುದ್ಧ, ಜನಸಂಪರ್ಕ ಮುಂತಾದುವುಗಳನ್ನು ಕುರಿತ ಗೊತ್ತುವಳಿಗಳು. ಕಾಂಗ್ರೆಸ್ ಕಾರ್ಯಕಾರೀ ಸಮಿತಿಯು ಮಂಡಿಸಿದ ಇನ್ನೂ ಕೆಲವು ಗೊತ್ತುವಳಿಗಳಿಗೆ ಎಡ ಪಕ್ಷವು ಸೂಚಿಸಿದ ಉಪಸೂಚನೆಗಳು ಸ್ವೀಕೃತವಾದುವು. ಇವರಲ್ಲಿ ಬಹಳ ಮಹತ್ವದ ಗೊತ್ತುವಳಿಯೆಂದರೆ ಸಭಾ ಪದ್ಧತಿಯನ್ನು ಕುರಿತದ್ದು ಎಪ್ರಿಲ್ ೧ ರಲ್ಲಿ ಪಾಲಿಸಬೇಕಾದ ಸಾರ್ವತ್ರಿಕ ಹರತಾಳವನ್ನು ಕುರಿತು ಒಂದು ಗೊತ್ತುವಳಿ ಇದ್ದಿತು. ಇದನ್ನು ಕಾರ್ಯಕಾರೀ ಸಮಿತಿಯು ತಳ್ಳಿಹಾಕಿದ್ದರೂ ವಿಷಯ ನಿಯಾಮಕ ಸಮಿತಿಯಲ್ಲಿ ಇದು ಪ್ರಚಂಡ ಬಹುಮತದಿಂದ ಸ್ವೀಕಾರವಾಯಿತು. ಆಡಳಿತ ಸ್ವೀಕಾರವೇ ಮೊದ ಲಾದ ಕೆಲವು ವಿಷಯಗಳಲ್ಲಿ ನಮಗೆ ಪ್ರಚಂಡ ಪರಾಭವವಾದದ್ದು ನಿಜ. ಆಡಳಿತ ಸ್ವೀಕಾರದ ತೀರ್ಮಾನದ ವಿಷಯದಲ್ಲಿ ನೇರವಾದ ಹೋರಾಟ ನಡೆಯಲಿಲ್ಲ. ಎಂದರೆ, ವಿವಾದವು ಆಡಳಿತ ಸ್ವೀಕಾರಕ್ಕೆ ಅನುಕೂಲವಿದ್ದವ ರಿಗೂ ಪ್ರತಿಕೂಲವಿದ್ದವರಿಗೂ ನಡೆಯಲಿಲ್ಲ. ಆದರೆ ಅನುಕೂಲವಿದ್ದರಿಗೆ ಮತ್ತು ಈ ಪ್ರಶ್ನೆಯನ್ನು ಫೈಜ್‌ಪುರದಲ್ಲಿ ನಿರ್ಣಯಿಸಬಾರದೆನ್ನುವವರಿಗೆ ನಡೆ ಯಿತು. ಇನ್ನು ಕೆಲವು ವಾರಗಳಲ್ಲಿ ಅಧಿಕಾರ ಸ್ವೀಕಾರದ ಪ್ರಶ್ನೆ ಮತ್ತೆ ಬಂದಾಗ, ತನ್ನ ಧ್ಯೇಯ ಧೋರಣೆಗಳಿಗೆ ತಕ್ಕಂತೆ ನಡೆಯುವುದಾದರೆ ಕಾಂಗ್ರೆಸ್ಸು ಅಧಿಕಾರ ಸ್ವೀಕರಿಸಕೂಡದೆನ್ನುವುದನ್ನು ಎಡಪಕ್ಷವು ನಿಶ್ಚಯ ವಾಗಿಯೂ ಮನಗಾಣಿಸಿ ಕೊಡಬಲ್ಲುದು.

ಕಾರ್ಯಕಾರೀ ಸಮಿತಿಯು ಕೆಲ ದಿನಗಳ ಹಿಂದೆ, ಬರಲಿರುವ ಅಧಿವೇಶ ನಕ್ಕೆ ಸಂಬಂಧಿಸಿದ ತನ್ನ ಗೊತ್ತುವಳಿಯನ್ನು ಪ್ರಕಟಿಸಿದಾಗ ನನಗೆ ತುಂಬ ದಿಗಿಲಾಯಿತು. ಇದು 'ರಾಷ್ಟ್ರೀಯ ಸಮ್ಮೇಲನ'ವೆಂದು ಪತ್ರಿಕೆಗಳೆಲ್ಲ ದೊಡ್ಡ ದೊಡ್ಡ ಅಕ್ಷರಗಳಲ್ಲಿ ಪ್ರಕಟಿಸಿದ್ದುವು. ಇಂದಿನ ಹೋರಾಟದ ಸ್ಥಿತಿಯಲ್ಲಿ

ಮತ್ತು ನಾವು ಸಾಮ್ರಾಜ್ಯವಾದದ ನೊಗದ ಅಡಿಯಲ್ಲಿರುವಾಗ, ಇದನ್ನು ರಾಷ್ಟ್ರೀಯ ಸಮ್ಮೇಲನವೆಂದು ಕರೆಯುವ ವಿಚಾರವು ಕೂಡ ಪ್ರಮಾದದ್ದು. ಎರಡನೆಯದಾಗಿ, ಇಂತಹ ಸ್ಥಿತಿಯಲ್ಲಿ ಕೂಡ ಇದು ಕಾಂಗ್ರೆಸ್ಸಿನ ಪ್ರಾತಿನಿಧಿಕ ಸಮ್ಮೇಲನವಾಗದೆ ಸ್ವಲ್ಪವೇ ಜನರ ಮತ್ತು ಅಲ್ಪ ಪ್ರಾತಿನಿಧ್ಯವುಳ್ಳ—ಹೋರಾಟದಿಂದ ದೂರ ನಿಂತವರ—ಅಧಿವೇಶನವಾಗುವುದರಿಂದ ಇದನ್ನು ರಾಷ್ಟ್ರೀಯ ಸಮ್ಮೇಲನವೆಂದು ಕರೆಯುವುದು ಅಪಾಯಕರ.

ಫೈಜ್‌ಪುರ ಗೊತ್ತುವಳಿಗೆ ಮಂಡಿಸಿದ ಉಪಸೂಚನೆಗಳು ಮತ್ತು ಅವುಗಳ ವಿಷಯದಲ್ಲಿ ನಮಗೆ ಮೊದಲಾದ ಆಶ್ವಾಸನಗಳು ನಮ್ಮ ಭಯವನ್ನು ಬಹಳಮಟ್ಟಿಗೆ ಕಡಿಮೆ ಮಾಡಿದುವು. ಈ ಅಧಿವೇಶನವು ರಾಷ್ಟ್ರೀಯ ಸಮ್ಮೇಲನವಾಗಲಾರದೆಂದೂ, ಆ ದಿಕ್ಕಿನಲ್ಲಿ ಇಟ್ಟ ಒಂದು ಹೆಜ್ಜೆ ಕೂಡ ಅಲ್ಲವೆಂದೂ ಸ್ಪಷ್ಟಪಡಿಸಲಾಯಿತು. ಈ ಸಭೆ, ಬೇರೆ ಬೇರೆ ಪ್ರಾಂತಗಳ ಕಾಂಗ್ರೆಸ್ ಪಕ್ಷಗಳು ಬೇರೆ ಬೇರೆ ದಾರಿಯಲ್ಲಿ ನಡೆಯದೆ, ಸಾಮಾನ್ಯವಾದ ಮತ್ತು ಪರಸ್ಪರ ವಿಶ್ವಾಸವುಳ್ಳ ಒಂದು ಧೋರಣೆಯಂತೆ ನಡೆಯಬೇಕೆಂಬ ಉದ್ದೇಶದಿಂದ ಕೂಡಿಸಿದ ಒಂದು ಸಭೆಯಾಗಿತ್ತು. ಈ ಸಭೆ ಸೇರಿದು ಕಾಂಗ್ರೆಸ್ ಧೋರಣೆಯನ್ನು ನಿರ್ಣಯಿಸಲಿಕ್ಕಲ್ಲ; ಆದರೆ ಕಾಂಗ್ರೆಸ್ಸೂ ಅಖಿಲ ಭಾರತ ಕಾಂಗ್ರೆಸ್ ಸಮಿತಿಯೂ ರೂಪಿಸಿದ ಧೋರಣೆಯನ್ನು ಕಾರ್ಯರೂಪಕ್ಕೆ ತರುವ ಸಾಧನಗಳನ್ನೂ ಮಾರ್ಗವನ್ನೂ ಕಂಡುಕೊಳ್ಳಲು ಮಾತ್ರ.

ಹೀಗೆ, ಈ ಸಮ್ಮೇಲನದ ಅಪಾಯಕಾರಕ ಗುಣಗಳನ್ನು ನಾಶಮಾಡಿದ ಮೇಲೆ ಅದು, ನಮ್ಮ ಮೇಲೆ ಹೇರಿದ ಈ ದಾಸ್ಯ ಘಟನೆಯನು ಕಳಚಿಹಾಕುವ ಒಂದು ಸಾಧನ ಮಾತ್ರವಾಗುತ್ತದೆ. ಇದರಿಂದ, ದೇಶದಲ್ಲಿ ಈ ಘಟನೆಯ ವಿರುದ್ಧವಾದ ಅಭಿಪ್ರಾಯವನ್ನು ಒಂದುಗೂಡಿಸಬಹುದು. ಇನ್ನಿತರ ಸಭೆಗಳಿಂದ ಇದು ಸಾಧ್ಯವಿಲ್ಲ. ಆದ್ದರಿಂದ ಇದು ನಮಗೆ ದೊರೆ ಒಂದ ಬಹು ಅಮೌಲ್ಯವಾದ ಆಯುಧ.

ಆದರೂ ಇಲ್ಲಿ ಒಂದು ಎಚ್ಚರಿಕೆ ಕೊಡಬೇಕಾಗಿದೆ. ಈಗ ನಾನು ಹೇಳಿದಂಥ ಈ ಅಪಾಯಕಾರಕ ಗುಣಗಳನ್ನೆಲ್ಲ ಈ ಸಮ್ಮೇಲನದಲ್ಲಿ ಬೆರೆಸುವ ಸಂಧಿಸಾಧಕರು ಕೆಲವರು ಕಾಂಗ್ರೆಸ್ಸಿನಲ್ಲಿದ್ದಾರೆ. ದುರ್ದೈವದಿಂದ ಈ ಸಮ್ಮೇಲನದಲ್ಲಿ ಕಾಂಗ್ರೆಸ್ಸಿನ ಅಗ್ನಿ ಪರೀಕ್ಷೆಗೆ ಒಳಗಾಗದ, ಮೊನ್ನೆ ಮೊನ್ನೆಯ

ವರೆಗೂ ಸಾಮ್ರಾಜ್ಯವಾದದ ಬಿರುದು ಬಾವಲಿಗಳನ್ನು ಧರಿಸಿದ, ದೇಶದ ಬಂಡವಲುಗಾರಿಕೆಗೆ ನಿಕಟ ಸಂಬಂಧವುಳ್ಳ ಅನೇಕರು ಸೇರುವುದು ಖಂಡಿತ. ಇವರೆಲ್ಲರೂ ವಿರುದ್ಧ ದಿಕ್ಕಿಗೆ ಎಳೆಯದಿರಲಾರರು. ಅಖಿಲ ಭಾರತ ಕಾಂಗ್ರೆಸ್ ಸಮಿತಿಯು ಇದರಲ್ಲಿ ಕೈ ಹಾಕುವುದನ್ನು ಅವರು ಪ್ರತಿಭಟಿಸುವರು. ಇದಲ್ಲದೆ ಇಂಥವರಿಗೆ ಬೆಂಬಲ ಕೊಡುವವರೂ ಕಾಂಗ್ರೆಸ್ಸಿನಲ್ಲಿದ್ದಾರೆ. ಆದ್ದರಿಂದ ನಾವು ಬಹಳ ಎಚ್ಚರದಿಂದಿರಬೇಕು.

ಗಾಂಧೀಜಿ ಕಾಂಗ್ರೆಸ್ ವೇದಿಕೆಯ ಮೇಲೆ ಪ್ರಕಟವಾಗಿ ಎರಡು ವರುಷವಾಗಿತ್ತು. ಕಾಂಗ್ರೆಸ್ ಅಧ್ಯಕ್ಷರು ತಮ್ಮ ಸ್ಫೂರ್ತಿದಾಯಕ ಭಾಷಣವನ್ನು ಆಗತಾನೇ ಮುಗಿಸಿದ್ದರು. ಗಾಂಧೀಜಿಯ ವಾಮನ ಮೂರ್ತಿ ವೇದಿಕೆಯ ಮೇಲೆ ಕಾಣತೊಡಗಿದ ಕೂಡಲೇ ಫೈಜ್‌ಪುರ ಅಧಿವೇಶನದ ಆ ಮಹಾ ಜನ ಸಮುದಾಯದಲ್ಲಿ ಆನಂದವೂ ಉತ್ಸಾಹವೂ ಉಕ್ಕೇರತೊಡಗಿತು. ಗಾಂಧೀಜಿಯ ಮಾತನ್ನು ಆಲಿಸಲಿಕ್ಕೆ ಒಂದು ಲಕ್ಷಕ್ಕಿಂತ ಹೆಚ್ಚು ಜನರು ನೆರೆದಿದ್ದರು.

ಅದೇ ದಿನ ಕೆಲವು ಗಂಟೆ ಮುಂಚಿತವಾಗಿ ಗಾಂಧೀಜಿ ತಮ್ಮ ಮೊದಲನೆ ರಾಜಕೀಯ ಭಾಷಣ ಮುಗಿಸಿದ್ದರು. ಅದನ್ನು ಕೇಳಲು ನನಗೆ ಅವಕಾಶ ಒದಗಿರಲಿಲ್ಲ. ಆದ್ದರಿಂದ ನಾನು ಅವರ ಈ ಭಾಷಣವನ್ನು ಚಿತ್ತಗೊಟ್ಟು ಕೇಳಿದೆ. ಅರ್ವಾಚೀನ ಕಾಲದಲ್ಲಿ ಯಾರಿಗಿಂತಲೂ ಹೆಚ್ಚಾಗಿ ಭಾರತದ ಕೋಟಿಗಟ್ಟಲೆ ಜನರ ಹೃದಯವನ್ನು ಮೀಟಿದ ಮಹಾನುಭಾವನು ಮತ್ತೆ ಯುದ್ಧ ಭೂಮಿಗೆ ಬಂದಂತೆ ತೋರಿತು. ಅವರು ಹೇಳಬೇಕೆಂದಿದ್ದುದಾದರೂ ಏನು? ಅವರು ಕಾಂಗ್ರೆಸ್ ಬಿಟ್ಟಂದಿನಿಂದ ಅನೇಕ ಸಂಗತಿಗಳು ನಡೆದಿದ್ದುವು. ಕಾಂಗ್ರೆಸ್ಸು ಸಾವಕಾಶವಾಗಿ, ಆದರೆ ನಿಶ್ಚಯವಾಗಿ ಹೊಸ ದರ್ಶನಗಳನ್ನೂ ಹೊಸ ದಾರಿಗಳನ್ನೂ ಕಾಣ ತೊಡಗಿತ್ತು. ಕಾಂಗ್ರೆಸ್ಸಿನಲ್ಲಿ ಮಹತ್ವದ ಸಮಸ್ಯೆಗಳು, ತೀವ್ರ ವಾದ-ವಿವಾದಗಳು ಉದ್ಭೂತವಾಗಿದ್ದುವು. ಇವುಗಳ ವಿಷಯದಲ್ಲಿ ಅವರು ಮಾರ್ಗದರ್ಶನ ಮಾಡಬೇಕೆಂದಿರುವರೇ? ಮನಸ್ಸಿನಲ್ಲಿ ಈ ಎಲ್ಲ ಪ್ರಶ್ನೆಗಳನ್ನು ತುಂಬಿಕೊಂಡು, ಹಲ್ಲಿಲ್ಲದ ಅವರ ತುಟಿಗಳಿಂದ ಹೊರ ಬರುವ ಪ್ರತಿಯೊಂದು ಶಬ್ದವನ್ನೂ ಆಸ್ಥೆಯಿಂದ ಆಲಿಸಿದೆ. ಅವರಲ್ಲಿ ಎಂದಿನಂತಹ ಆತ್ಮವಿಶ್ವಾಸವೂ ಪ್ರಸಂಗಾವಧಾನವೂ ಕಂಡು

ಬಂದಿತು. ಆದರೆ ಅವರ ಬಾಯಿಯಿಂದ ಶಬ್ದಗಳು ಉರುಳುತ್ತಿದ್ದಂತೆ ಅವು ನಿಸ್ಸತ್ವವಾಗಿದ್ದಂತೆ ತೋರಿತು. ಅವರ ಭಾಷಣ ಮುಗಿದ ಮೇಲೆ ಅಲ್ಲಿ ಉತ್ಸಾಹವೇ ಇರಲಿಲ್ಲ. 'ಗಾಂಧೀಜೀಕಿ ಜೈ' ಎಂಬ ನಿನಾದವೂ ಇರಲಿಲ್ಲ.

ಗಾಂಧೀಜಿ ತಮ್ಮ ಭಾಷಣದಲ್ಲಿ, ತಾನು ಕಾಂಗ್ರೆಸ್ಸನ್ನು ಬಿಟ್ಟ ಮೇಲೆ ನಡೆದ ಎಲ್ಲ ಸಂಗತಿಗಳನ್ನೂ ಸಂಪೂರ್ಣವಾಗಿ ಅಲಕ್ಷಿಸಿದ್ದರು. ಅವರು ಬಂದದ್ದು ತಮ್ಮ ಹಳೆಯ ಕಾರ್ಯಕ್ರಮವನ್ನೂ ಅದರಲ್ಲಿದ್ದ ತಮ್ಮ ಆತ್ಮ ವಿಶ್ವಾಸವನ್ನೂ ಇನ್ನೊಮ್ಮೆ ನೆನಪಿಸಲು, ನಾವು ಏನೇ ಹೇಳಿದರೂ ಏನೇ ಮಾಡಿದರೂ ತಮ್ಮ ದಾರಿ ಮಾತ್ರವೇ ಗೆಲುವಿನ ದಾರಿಯೆಂದು ಸಾರಲು ಎಂಬಂತೆ ತೋರಿತು. ಈಗಿನ ಹೊಸ ವಿಚಾರಗಳಲ್ಲಿ, ಹೊಸ ಯೋಜನೆಗಳಲ್ಲಿ ಹುರುಳಿಲ್ಲದಂತೆ ಅವರಿಗೆ ತೋರಿರಬೇಕು. ಅವರು ಅವುಗಳ ಕಡೆಗೆ ಗಮನವನ್ನೇ ಕೊಡಲಿಲ್ಲ. ಖಾದಿ, ಅಸ್ಪೃಶ್ಯತೆ, ಗ್ರಾಮೋದ್ಯೋಗ, ಹಿಂದೂ ಮುಸಲ್ಮಾನರ ಐಕ್ಯ ಮುಂತಾದ ಕಾರ್ಯಕ್ರಮಗಳನ್ನು ಪೂರ್ಣಗೊಳಿಸದಿದ್ದರೆ ಭಾರತವು ಸ್ವತಂತ್ರವಾಗುವುದು ಸಾಧ್ಯವಿಲ್ಲವೆಂದು ಅವರು ಪುನಃ ಪುನಃ ಎಚ್ಚರಿಸಿದರು. ಅವರ ಈ ಮುನ್ನೆಚ್ಚರಿಕೆ ಪರಿಣಾಮಕಾರಿಯಾಯಿತೆಂದು ನಾನು ಹೇಳಲಾರೆ. ಎಡ ಪಕ್ಷಕ್ಕೆ ಇದೊಂದು ಆಹ್ವಾನವೇ ಆಗಿದ್ದರೆ ಈ ಆಹ್ವಾನವು ಸಂಪೂರ್ಣವಾಗಿ ವ್ಯರ್ಥವಾಯಿತೆಂಬಲ್ಲಿ ಸಂದೇಹವಿಲ್ಲ.

ಫೈಜ್‌ಪುರದಲ್ಲಿ ನಾವು ಗಳಿಸಿದ ಯಶಸ್ಸು ನಮ್ಮ ಮೇಲೆ ದೊಡ್ಡ ಹೊಣೆಯನ್ನು ಹೊರಿಸಿದೆ. ದುರ್ದೈವದಿಂದ, ಟೀಕೆಯಿಂದ ಆರಂಭವಾಗಿ ಟೀಕೆಯಲ್ಲಿ ಕೊನೆಗೊಳ್ಳುವುದೇ ನಮ್ಮ ಕಾರ್ಯಕ್ರಮವೆಂದು ತಿಳಿದುಕೊಳ್ಳುವ ಹಲವು ಮಿತ್ರರು ನಮ್ಮಲ್ಲಿದ್ದಾರೆ. ಇಂಥ ಪ್ರವೃತ್ತಿಯನ್ನು ತೊಡೆದುಹಾಕುವುದಲ್ಲದೆ ನಾವು ಕಾರ್ಯಪ್ರವೃತ್ತರಾಗಿ ಕಾಂಗ್ರೆಸ್ ಕಾರ್ಯಕ್ರಮವನ್ನು ಮುಂದುವರಿಸಬೇಕು. ನಮ್ಮ ಎದುರಗಿರುವ ಮೊದಲನೆಯ ಕೆಲಸವೆಂದರೆ ಏಪ್ರಿಲ್ ಗ ರ ಹರತಾಳ ಸಂಪೂರ್ಣ ಯಶಸ್ವಿಯಾಗುವಂತೆ ಮಾಡುವುದು.

ಸೋದರರೇ ಮುನ್ನುಗ್ಗಿರಿ.

೨

## ಬಿಹಾರಿನಲ್ಲಿ ರಾಜಕೀಯ ಭೂಕಂಪ (೧೯೫೨)

ಬಿಹಾರಿಗೆ ಚುನಾವಣೆಯ ಕಾವೇರಿದೆ. ಈ ಪ್ರಾಂತದ ಪ್ರತಿಯೊಂದು ಹಳ್ಳಿಯಲ್ಲಿ ಕಾಂಗ್ರೆಸ್ಸು ಆಳವಾಗಿ ಬೇರು ಬಿಟ್ಟದ್ದರಿಂದ ಸಾರ್ವತ್ರಿಕ ಚುನಾವಣೆ ಪ್ರತಿಯೊಂದು ಹಳ್ಳಿಗಾಡನ್ನೂ ಹುರಿದುಂಬಿಸಿದೆ.

ಈ ನಾಲ್ಕು ದಿವಸಗಳ ಮತದಾನದಲ್ಲಿ ಕಾಂಗ್ರೆಸ್ಸು ಎದುರಿಗೆ ಬಂದ ಎಲ್ಲವನ್ನೂ—ಯಾವ ಒಕ್ಕಲಿಗರನ್ನು ನಗ್ನ ನಿರಂಕುಶತ್ವದಿಂದ ಪರಿಪರಿಯಾಗಿ ಪೀಡಿಸಿದ್ದರೋ ಅದೇ ಒಕ್ಕಲಿಗರ ಮತಗಳನ್ನು ಯಾಚಿಸುವ ಮಹಾ ಮಹಾ ಜಮೀನುದಾರರು, ಧನದ ಮದ ಮತ್ತು ಕೈಗಡದ ಅಧಿಕಾರದ ಮದವುಳ್ಳ ರಾಜದೂತರು, ಜಾತ್ಯಂಧರು, ಸುಲಿಗೆಗಾರರು ಮುಂತಾದ ಎಲ್ಲರನ್ನು ಕೂಡ— ಗುಡಿಸಿಕೊಂಡು ಹೋಗುತ್ತಿದೆಯೆಂಬ ವರದಿಗಳು ಬರುತ್ತಿವೆ.

ಕಾಂಗ್ರೆಸ್ಸಿನ ಈ ಯಶಸ್ಸು, ಎಲ್ಲವನ್ನೂ ಕೊಚ್ಚಿಕೊಂಡು ಹೋದ ಇತ್ತೀಚಿನ ಅದ್ಭುತ ನೆರೆಯನ್ನು ನೆನಪಿಗೆ ತರುತ್ತಿದೆ. ಮೊದಲದಿನ ನಾನು ಎರಡು ಕಡೆಗಳಲ್ಲಿ ಮತದಾನವನ್ನು ನಿರೀಕ್ಷಿಸಿದೆ. ಉತ್ಸಾಹವು ಅವರ್ಣನೀಯವಾಗಿದ್ದಿತು. ಮತಗಟ್ಟೆಗಳ ಮುಂದೆ ಹಾರಾಡುತ್ತಿರುವ ತ್ರಿವರ್ಣ ಧ್ವಜಗಳ ಮಹಾ ಸಮುದ್ರದ ಮುಂದೆ, ಪ್ರತಿ ಸ್ಪರ್ಧಿಗಳ ಧ್ವಜಸಂಕೇತಗಳು ಕಸದ ಕುಪ್ಪೆಯಂತೆ ಕಂಡುಬರುತ್ತಿದ್ದುವು. ರಾಷ್ಟ್ರೀಯ ಜಯಘೋಷಗಳು ಗಡ ಚಿಕ್ಕುತ್ತಿದ್ದುವು. ಮತದಾರರು ಗುಂಪುಗೂಡಿಕೊಂಡು ಧ್ವಜಹಸ್ತರಾಗಿ ವಾದ್ಯ ಬಾರಿಸುತ್ತ ಹಾಡುತ್ತ ಬರುತ್ತಲಿದ್ದರು. ನಡೆದು ಬಂದವರೇ ಹೆಚ್ಚು ಜನ. ಆದರೆ ತ್ರಿವರ್ಣ ಧ್ವಜಗಳನ್ನು ಹಾರಿಸುತ್ತಿರುವ ಕೆಲವು ಆನೆ ಕುದುರೆಗಳೂ ಇದ್ದುವು!

ನಾನು ಇದನ್ನು ನೋಡುತ್ತಿದ್ದಂತೆಲ್ಲ, ಎಂದೂ ಮರೆಯಲಾಗದ ಇಂಥ ಉತ್ಸಾಹದ ಪ್ರದರ್ಶನದ ಕಾಲದಲ್ಲಿ ಏಳುತ್ತಿದ್ದ ಧೂಳಿಯಲ್ಲಿ ಸ್ವಾತಂತ್ರ್ಯವು ಮೇಲೇರಿ ಬರುತ್ತಿರುವಂತೆ ಕಂಡುಬಂದಿತು. ನಮಗೆ ಸ್ವಾತಂತ್ರ್ಯ ದೊರೆತ ಮೇಲೆ ಘಟನಾ ಸಮಿತಿಯ ಸದಸ್ಯರ ಐಕ್ಯದಲ್ಲಿ ಇವರ ಉತ್ಸಾಹವು ಅಪರಿಮಿತವಾಗುವುದೆಂದು ನನಗೆ ತೋರಿತು.

ಬಿಹಾರಿನ ಚುನಾವಣೆ ಪ್ರಚಾರವು ಪ್ರಚಂಡರಾದ ಪಂಡಿತ ನೆಹರೂ ರವರ ಸಂಚಾರದಿಂದ ಆರಂಭವಾಯಿತು. ಮೇಲಿಂದ ಮೇಲೆ ಪ್ರಕೃತಿಯ ಕ್ಷೋಭೆಗೆ ಗುರಿಯಾಗುತ್ತಿರುವ ಈ ಪ್ರಾಂತದಲ್ಲಿ ಎಲ್ಲವೂ ನೈಸರ್ಗಿಕ ಪ್ರವೃತ್ತಿ ಯನ್ನೇ ಅವಲಂಬಿಸಿದ ಹಾಗೆ ಕಾಣುತ್ತದೆ.

ಹಳ್ಳಿಗಾಡಿನ ಮತದಾನದಿಂದ ನಮಗೆ ಮಹಾ ನೆರೆಹಾವಳಿಯ ನೆನಪಾ ದರೆ ಜವಾಹರಲಾಲರ ಸಂಚಾರದಿಂದ ಮಹಾ ಭೂಕಂಪದ ನೆನಪಾಗುತ್ತದೆ. ಅವರ ಆಗಮನ ರಾಜಕೀಯ ಭೂಕಂಪವೆಂದೇ ಹೇಳಬೇಕು. ಅರ್ವಾಚೀನ ಕಾಲದಲ್ಲಿ ಇಡಿಯ ಪ್ರಾಂತವನ್ನು ಅವರಷ್ಟು ಹೆಚ್ಚಾಗಿ ಯಾರೂ ನಡುಗಿಸಿ ಅಲಿಲ್ಲ. ಮಹಾಪುರುಷನೊಬ್ಬನು ಬಂದು ಗಾಢನಿದ್ದೆಯಲ್ಲಿರುವ ಪ್ರಾಂತ ವನ್ನು ಕೈಯಲ್ಲಿ ಹಿಡಿದು ಅಲುಗಾಡಿಸಿ ಎಚ್ಚರವನ್ನೂ ಚೈತನ್ಯವನ್ನೂ ತುಂಬಿದ ಹಾಗಿತ್ತು ಈ ಸ್ಥಿತಿ. ಅವರು ಹೋದಲ್ಲೆಲ್ಲ ಜನ ಗದ್ದೆಗಳನ್ನೂ ನೇಗಿಲನ್ನೂ ಬಿಟ್ಟು ಅವರ ಸಂದೇಶ ಕೇಳಲು ಮುಕುರುತ್ತಿದ್ದರು. ಅವರ ಮಾತೋ! ತಿಳಿಯಾಗಿ, ನೇರವಾಗಿ ಜನಮನವನ್ನೇ ತಟ್ಟುತ್ತಿದ್ದಿತು. ಈ ಭಾಷಣಗಳು ಅನೇಕರ ಕಣ್ಣು ತೆರೆದವು. ಸಾಮಾನ್ಯವಾಗಿ ಪ್ರತಿಯೊಬ್ಬ ಒಕ್ಕಲಿಗನೂ 'ತಂದೆ, ನಮ್ಮ ಕಣ್ಣಿನ ಮಂಜನ್ನು ತೊಡೆದು ಹಾಕಿದೆ' ಎನ್ನುತ್ತಿದ್ದನು. ಚುನಾವಣೆಯಲ್ಲಿ ಅಪೂರ್ವ ಯಶಸ್ಸು ದೊರೆಯಿತು!

* * * *

ಜನರ ಈ ಉತ್ಸಾಹ, ಈ ಸಹಕಾರ ನಮಗೆ ಹೊಸ ದಾರಿಯನ್ನು ತೋರಿಸಿದೆ. ಕಾಂಗ್ರೆಸ್ಸಿನ ಬಗೆಗೆ ಎಷ್ಟೊಂದು ಗಾಢ ವಿಶ್ವಾಸ! ದೇವಾಲಯಕ್ಕೆ ಬಂದಹಾಗೆ ಮತಗಟ್ಟೆಗೆ ಬಂದು ತಮ್ಮ ಮತಗಳನ್ನು 'ಗಾಂಧೀಜಿ'ಯ ಪೆಟ್ಟಿಗೆಯಲ್ಲಿ ಹಾಕಿ ಭಕ್ತಿಯಿಂದ ನಮಸ್ಕರಿಸಿ ಮನೆಗೆ ಮರಳುತ್ತಿದ್ದರು– ತಿಳಿ ಹೃದಯದ ಒಕ್ಕಲಿಗರು. ಯಾರ ಆದರೋಪಚಾರವೂ ಇಲ್ಲದೆ, ಯಾರ ಬೆದ ರಿಕೆ ದಬ್ಬಾಳಿಕೆಗಳಿಗೂ ಸೊಪ್ಪುಹಾಕದೆ, 'ಸ್ವತಂತ್ರ ಭಾರತಕ್ಕೆ ಜಯವಾಗ ಲೆಂ'ದು ಕೂಗುತ್ತ ದೂರದ ತಮ್ಮ ಮನೆಗಳಿಂದ ಬಂಡಿಗಳಲ್ಲಿ ಪ್ರಯಾಣ ಮಾಡುತ್ತ ಸಾವಿರಾರು ಜನರು ಕಾಂಗ್ರೆಸ್ಸಿಗೆ ಮತ ಕೊಡಲು ಬರುತ್ತಿದ್ದರು. ಕಾಂಗ್ರೆಸ್ಸೇ ಅವರ ಊರುಗೋಲು—ಅದು ತಮ್ಮ ಸಂಕಟವನ್ನು ನಿವಾರಿಸ

ವುದೆಂದು ಅವರ ಭಾವನೆ. ಹಸಿದ ಹೊಟ್ಟೆಯ ಒಕ್ಕಲಿಗನು ಮತಗಟ್ಟೆಗೆ ಮಾಡಿದ ಈ ಪ್ರಯಾಣವು ರಣಭೂಮಿಗೆ ಹೊರಡುವುದರ ಪೂರ್ವಪೀಠಿಕೆ ಯಾಯಿತು.

× × × ×

ಈ ಚುನಾವಣೆಯಿಂದ ಮಹತ್ವದ ರಾಜಕೀಯ ಪರಿಣಾಮಗಳೂ ಅದಕ್ಕೆ ಎಳ್ಳಷ್ಟೂ ಕಡಿಮೆಯಲ್ಲದ ಎರಡು ಸಾಮಾಜಿಕ ಪರಿಣಾಮಗಳೂ ಕಂಡು ಬರುತ್ತವೆ. ಬಿಹಾರು ಇಬ್ಬರ ದಾಸ್ಯದಲ್ಲಿದೆ—ಬ್ರಿಟಿಷ್ ಪ್ರಭುತ್ವ ಮತ್ತು ಮಹಾ ಮಹಾ ಜಮೀನುದಾರರು. ಭಾರತದ ಪ್ರಮುಖ ಜಮೀನುದಾರರಿರು ವುದು ಬಿಹಾರಿನಲ್ಲಿ. ಇಂಥ ' ದೊರೆ 'ಗಳ ಎದುರಿನಲ್ಲಿ ಒಕ್ಕಲಿಗನ ಸಾಮಾ ಜಿಕಸ್ಥಿತಿ—ಅವನು ಯಾವ ಜಾತಿಪಂಥಕ್ಕೆ ಸೇರಿದ್ದರೂ, ಅವನ ಸಾಂಪತ್ತಿಕ ಸ್ಥಿತಿ ಎಂಥದಿದ್ದರೂ—ಗುಲಾಮನಂತೆಯೇ ಇದೆ ಇಲ್ಲಿ, ತಮ್ಮ ಅತಿ ಧನಿಕ ಒಕ್ಕಲಿಗರಿಗೂ ತಮ್ಮ ಎದುರು ಕುಳಿತುಕೊಳ್ಳಲು ಬಿಡದಿರುವ, ಮೆಟ್ಟುಗಳನ್ನು ಹಾಕಿಕೊಳ್ಳಲು ಬಿಡದಿರುವ ಜಮೀನುದಾರರೂ ಇದ್ದಾರೆ. ಒಡೆಯರಿಗೆ ಮಾಡಬೇಕಾದ ವಿಶಿಷ್ಟರೀತಿಯ ನಮಸ್ಕಾರಗಳಿವೆ. ಒಕ್ಕಲಿಗನು ಒಳಗಾದ ಹಿಂಸೆಯ ರೀತಿ ಇದು! ಒಡೆಯನು ಕಣ್ಣೆತ್ತಿ ಕೂಡ ನೋಡದಿರುವ ದನಗಳ ಹಿಂದೆಂದರೆ ಒಕ್ಕಲಿಗರೇ ಸರಿ.

ಇಂಥ ಜಮೀನುದಾರನು ಚುನಾವಣೆಯ ಉಮೇದುವಾರನಾದರೆ—ಸುದೈವದಿಂದ ಇಂತಹ ಹಲವು ಪೀಡಕರು ಈ ಗುಂಪಿಗೆ ಸೇರಿದ್ದಾರೆ—ಒಕ್ಕಲಿ ಗರ ಮನೆ ಮನೆಗೂ ಅಲೆದು, ಅವರಿಗೆ ಪರಿಹಾರದ ಸಹಾಯದ ಅಭಯ ವನ್ನಿತ್ತು, ಅವರ ದನ ಕರುಗಳ ಮೇಲೆ ಸಲಿಗೆಯಿಂದಲೂ ಪ್ರೀತಿಯಿಂದಲೂ ಕೈಯಾಡಿಸಿ ಮತಗಳ ಭಿಕ್ಷೆ ಬೇಡುತ್ತಾನೆ. ಇದರ ಪರಿಣಾಮ—ಒಡೆಯ ಗುಲಾಮರ ನಡುವಿನ ಸಾಮಾಜಿಕ ಭಿನ್ನತೆಯ ಬೆಸುಗೆ.

ಈಗ ಗುಲಾಮನಲ್ಲಿ ಆತ್ಮ ವಿಶ್ವಾಸ ಹೆಚ್ಚುತ್ತಲಿದೆ. ಮತವು ಅವನನ್ನು ಮನುಷ್ಯನನ್ನಾಗಿ ಮಾಡಿದೆ. ಅವನ ಹೃದಯದಲ್ಲಿ ಮನೆ ಮಾಡಿಕೊಂಡಿದ್ದ ಹೆದರಿಕೆ ದೂರವಾಗುತ್ತಲಿದೆ. ಅವನು ಜಗತ್ತನ್ನು ಆತ್ಮ ಗೌರವದ, ಘನತೆಯ ಹೊಸ ನೋಟದಿಂದ ನೋಡುತ್ತಾನೆ ಒಂದು ವೇಳೆ ಒಡೆಯನಿಗೆ ಸೋಲು ಬಂದರೆ—ಅನೇಕ ಸಂದರ್ಭಗಳಲ್ಲಿ ಹಾಗೆ ಆಗುವುದೇ ನಿಶ್ಚಯ—ಅವನು

ಗೇಣಿಗಷ್ಟೇ ಹಕ್ಕುದಾರನಾದ ಬರಿಯ ಜಮೀನುದಾರನಾಗುತ್ತಾನೆ. ಇದು ಬಿಹಾರಿನಲ್ಲಿ ಆಗಬಹುದಾದ ಮಹತ್ವದ ಸಾಮಾಜಿಕ ಬದಲಾವಣೆ.

ಇನ್ನೊಂದು ಮಹತ್ವದ ಸಾಮಾಜಿಕ ಪರಿಣಾಮವೆಂದರೆ ಹಿಂದೂ ಸಮಾಜ ರಚನೆಯಲ್ಲಿ ಆಗುವಂತಹದು. ವರ್ಣಾಶ್ರಮದ ತಳಹದಿಯ ಮೇಲೆ ರಚಿತವಾದ ನಮ್ಮ ಹಿಂದೂ ಸಮಾಜವು ಇಂದು ಮಾನವ ಪ್ರಾಣಿಗಳಲ್ಲಿ ಸಾಮಾಜಿಕ ಸ್ಥಾನಮಾನಗಳ ವರ್ಗಗಳನ್ನು ಕಲ್ಪಿಸಿದೆ. ಚುನಾವಣೆ ಇಂಥ ಸಾಮಾಜಿಕ ರಚನೆಗೆ ಒಂದು ಪ್ರಬಲ ಆಹ್ವಾನವಾಗಿದೆ. ಇಂಥ ಆಹ್ವಾನಗಳಿಗೆ ಇಂದಿನವರೆಗೆ ಸಮಾಜ ಸುಧಾರಕರೇ ಕಾರಣರಾಗಿದ್ದರು. ದೀನ ದಲಿತರೆನ್ನಿಸಿಕೊಳ್ಳುವವರು ಅನಾಸಕ್ತರಾಗಿಯೇ ಇದ್ದರು. ಚುನಾವಣೆ ಅವರಿಗೆ ಬಲವನ್ನು ಕೊಟ್ಟಿತು. ಸಂಖ್ಯೆಯಲ್ಲಿ ಅಲ್ಪರಾದ ಈ ಮೇಲ್ಜಾತಿಯ ಜನರು ತಮ್ಮ ಮತಗಳಿಂದಲೇ ಕೊಬ್ಬುತ್ತಿರುವುದು ಈ ದೀನ ದಲಿತರಿಗೆ ಗೊತ್ತಾಗಿದೆ. ಎಂದ ಮೇಲೆ ಇವರು ಇದಕ್ಕೆಂತು ಅನುವುಗೊಡಬಲ್ಲರು? ಈ ಲಾಭವನ್ನು ತಾವೇ ಏಕೆ ಮಾಡಿಕೊಳ್ಳಬಾರದು? ಸಾಮಾಜಿಕ ಸಮನತೆಯ ಭಾವನೆ, ಹಿಂದೂ ಸಮಾಜದ ಇಂಥ ಕ್ರೂರ ಪದ್ಧತಿಯನ್ನು ನಿರ್ಮೂಲಗೊಳಿಸಬೇಕೆನ್ನುವ ಸಮಾಜ ಸುಧಾರಕರ ಆದರ್ಶ ಭಾವನೆ ಹುಟ್ಟಿ ಈಗ ತೀವ್ರವಾಗಿ ಬೆಳೆಯತೊಡಗಿದೆ.

ಆದರೆ ಇಂಥ ವಿಚಾರದ ಬೆಳವಣಿಗೆಯ ದುರುಪಯೋಗವನ್ನು ಕೆಲವು ಸ್ವಾರ್ಥಸಾಧಕರೂ ಸಂಧಿಸಾಧಕರೂ ಪಡೆಯುತ್ತಿದ್ದಾರೆ. ಹೀಗಿದ್ದರೂ ಇಡಿಯ ಹಿಂದೂ ಸಮಾಜವೇ ಇಂದು ಬದಲಾವಣೆಗೊಳ್ಳುತ್ತಿದೆ, ಪ್ರಜಾಪ್ರಭುತ್ವದ ತತ್ವವನ್ನು ರಕ್ತಗತ ಮಾಡಿಕೊಳ್ಳುತ್ತಿದೆ, ಭಾರತದಲ್ಲಿ ತೀವ್ರವಾದ ಸಾಮಾಜಿಕ ಕ್ರಾಂತಿಯನ್ನು ತರುತ್ತಿದೆ.

* * * *

ಒಬ್ಬ ಜೊತೆ ಪ್ರಯಾಣಿಕನೊಡನೆ ನಡೆದ ಒಂದು ಸಂವಾದವನು ಕುರಿತು ಹೇಳಿದರೆ ವಿಶೇಷ ತಪ್ಪಾಗಲಾರದು. ಉಗೆಬಂಡಿ ಒಂದು ದೃಷ್ಟಿಯಿಂದ ವಾಸ್ತವಿಕ ಜೀವನದ ಪ್ರತಿನಿಧಿಯೆನ್ನಬಹುದು. ರೇಲ್ವೆ ಬಂಡಿಯಲ್ಲಿರುವ ವರ್ಗಗಳು ಸಮಾಜದೊಳಗಿನ ವರ್ಗಗಳನ್ನು ಸಾಮಾನ್ಯವಾಗಿ ಹೋಲುತ್ತವೆ. ರೇಲ್ವೆಯ ಇಂಟರ್ ವರ್ಗವು, ನನ್ನ ಭಾವನೆಯ ಮೇರೆಗೆ,

ನಮ್ಮ ವಿಶಾಲ ಸಮಾಜದೊಳಗಿನ ಕೆಳಮಟ್ಟದ ಮಧ್ಯಮ ವರ್ಗವನ್ನು ಹೋಲುತ್ತದೆ. ಈ ಮಾತುಕತೆ ನಡೆದಾಗ ನಾನು ಇಂಟರ್ ವರ್ಗದಲ್ಲಿಯೇ ಪ್ರಯಾಣ ಮಾಡುತ್ತಲಿದ್ದೆ. ಅಲ್ಲಿ, ಆದೇತಾನೇ ಪದವೀಧರನಾದ ಉತ್ಸಾಹೀ ಮುಸಲ್ಮಾನ ತರುಣನೊಬ್ಬನನ್ನು ಕಂಡೆ. ಅವನ ಬಗೆಗೆ ಕುತೂಹಲ ಉಂಟಾದುವರಿಂದ ಅವನೊಡನೆ ಮಾತಿಗೆ ಮೊದಲಿಟ್ಟೆ. ಅವನು ಚುರುಕಾಗಿದ್ದುದು ದೇಹದಿಂದ ಮಾತ್ರವಲ್ಲ, ಎದ್ದು ಕಾಣುವಂಥ ತೀಕ್ಷ್ಣ ಬುದ್ಧಿ ಶಕ್ತಿಯೂ ಅವನಲ್ಲಿತ್ತು.

ಜವಹರಲಾಲರ ಭಾಷಣ ಕೇಳುವ 'ಸುಯೋಗ' ಅವನಿಗೆ ಒದಗಿತ್ತಂತೆ. ಅವನ ಅಭಿಪ್ರಾಯದ ಮೇರೆಗೆ ಮುಂದಾಳೆಂದರೆ ಜವಾಹರಲಾಲರೊಬ್ಬರೇ. ಹಿಂದೂ ಮುಸಲ್ಮಾನರಿಬ್ಬರಿಗೂ ಅವರು ಮಾತ್ರವೇ ಸರಿಯಾದ ದಾರಿ ತೋರಿಸಬಲ್ಲರು. ಜನರ ಹಿತಕ್ಕಾಗಿ ನಿಸ್ವಾರ್ಥ ಬುದ್ಧಿಯಿಂದ ದುಡಿಯುತ್ತಿರುವ ಸಂಸ್ಥೆಯೆಂದರೆ ಕಾಂಗ್ರೆಸ್ ಒಂದೇ. ಉಳಿದ ಎಲ್ಲ ಸಂಸ್ಥೆಗಳು ಸ್ವಾರ್ಥ ಸಾಧಕರ ಮತಗಳು. ಮುಸಲ್ಮಾನರ ಹಿತಸಾಧನೆಗಾಗಿ ಸ್ವತಂತ್ರ ಪಕ್ಷವೊಂದನ್ನು ಕಟ್ಟಲು ಅವನು ಸ್ವತಃ ಹೆಣಗಿದವನೇ. ಕೊನೆಗೆ ನಿರಾಶನಾಗಿ ಆ ಕೆಲಸವನ್ನು ಬಿಟ್ಟುಬಿಟ್ಟ. ಕುರುಡರಿಗೆ ಒಂದು ಕಣ್ಣಿನವನೇ ರಾಜನೆಂಬ ಗಾದೆಯ ಮಾತಿಲ್ಲವೆ?—ತನ್ನ ಪಕ್ಷ ಅದರ ಹಾಗೆ ಎಂದು ಅವನು ಬಣ್ಣಿಸಿದ. ತನ್ನ ಪಕ್ಷವು ಶ್ರೇಷ್ಠವಲ್ಲದಿದ್ದರೂ ಇದ್ದವುಗಳಲ್ಲಿ ಉತ್ತಮವಾಗಿತ್ತೆಂದು ಅವನ ಅಭಿಪ್ರಾಯ. ಅದು ನಿಜವಾದ ಮಾತು. ಉಳಿದ ಎಲ್ಲವೂ ಹೊಲ್ಲದ ಪಕ್ಷಗಳು.

ಸ್ವತಂತ್ರ ಮುಸಲ್ಮಾನ ಪಕ್ಷವು ಹೆಸರಿಗೆ ಮಾತ್ರ ರಾಷ್ಟ್ರೀಯ ದೃಷ್ಟಿಯನ್ನಿಟ್ಟುಕೊಂಡ ಸಂಸ್ಥೆ. ಅದರ ಉಮೇದುವಾರರು ಜಾತ್ಯಂಧರು, ಸಾಮ್ರಾಜ್ಯವಾದ ನಿಷ್ಠರು, ಪ್ರತಿಗಾಮಿಗಳು. ಈ ಪಕ್ಷವು ಚುನಾವಣೆಯಲ್ಲಿ ಒಬ್ಬ ಕಾಂಗ್ರೆಸ್ ಮುಸಲ್ಮಾನನನ್ನು ವಿರೋಧಿಸಿತು ಕೂಡ! ಇವೆಲ್ಲ ನನ್ನ ಜೊತೆ ಪ್ರಯಾಣಿಕನು ತನ್ನ ಪಕ್ಷದ ವಿರುದ್ಧವಾಗಿ ಹೇಳಿದ ದೂರುಗಳು. ಕಾಂಗ್ರೆಸ್ಸು ಧೈರ್ಯದಿಂದ ಮುಂದೆ ಬಂದು ಮುಸಲ್ಮಾನ ಮತದಾರ ಕ್ಷೇತ್ರಗಳಲ್ಲಿ ಇನ್ನೂ ಹೆಚ್ಚು ಜನ ಉಮೇದುವಾರರನ್ನು ಚುನಾವಣೆಗೆ ನಿಲ್ಲಿಸದಿದ್ದುದು ತಪ್ಪೆಂದು ಅವನು ವಾದಿಸಿದನು.

ಹಲವು ಮಿತ್ರರು 'ಹಳ್ಳಿಗಳಲ್ಲಿ ಎಷ್ಟೋ ಮುಸಲ್ಮಾನ ಒಕ್ಕಲಿಗರು ಕಾಂಗ್ರೆಸ್ ಉಮೇದುವಾರರಿಗೇ ಮತ ಕೊಡಲು ನಿರ್ಧರಿಸಿದ್ದರು. ಆದರೆ ಕಾಂಗ್ರೆಸ್ ಉಮೇದುವಾರರು ಇಲ್ಲದುದನ್ನು ಕಂಡು ಅವರಿಗೆ ನಿರಾಸೆಯಾಯಿತು' ಎಂದು ಮುಂತಾಗಿ ನನ್ನಲ್ಲಿ ಹೇಳಿದ್ದಾರೆ. ಮುಸಲ್ಮಾನ ಸ್ಥಳಗಳಿಗಾಗಿ ಹೋರಾಡದಿರುವುದು ಕಾಂಗ್ರೆಸ್ಸಿನ ಅಕ್ಷಮ್ಯ ಅಪರಾಧವೆಂದು ನನ್ನ ತಿಳಿವಳಿಕೆ.

ಯಾವ ವಸ್ತುವಿಗೂ ಎರಡು ಬದಿಗಳಿರುತ್ತವೆ. ಚುನಾವಣೆಯಲ್ಲಿ ಕಾಂಗ್ರೆಸ್ಸಿಗೆ ಸಿಗುವ ಬಹುಮತ ಅದರ ಒಂದು ಮೈ—ಹೊಳೆಯುವ ಮೈ. ಈ ಚುನಾವಣೆಯ ಸದುಪಯೋಗವನ್ನು ಮಾಡಿಕೊಳ್ಳದಿರುವದೇ ಅದರ ಇನ್ನೊಂದು ಮೈ. ಎಷ್ಟೋ ಮತದಾರ ಕ್ಷೇತ್ರಗಳಲ್ಲಿ ಚುನಾವಣೆಯನ್ನು ತಮ್ಮ ವೈಯಕ್ತಿಕ ಪ್ರತಿಷ್ಠೆಗಾಗಿ ಬಳಿಸಿಕೊಳ್ಳುತ್ತಿದ್ದಾರೆ. ತತ್ವ, ಧ್ಯೇಯ, ಮತ್ತು ನೀತಿನಿಯಮಗಳನ್ನೆಲ್ಲ ಹಿಂದೆ ನೂಕಿಬಿಡುತ್ತಾರೆ. ಇಂಥ ಧೋರಣೆಯನ್ನು ಅಲ್ಲಲ್ಲಿ ಕೆಲಸಗಾರರ ಗುಂಪುಗಳು, ವಿಶೇಷವಾಗಿ ಸಾಮ್ಯವಾದೀ ಕೆಲಸಗಾರರು— ಕಿಸಾನ್ ಸಭೆಯ ಕಾರ್ಯಕರ್ತರು ಕೂಡ— ಎಷ್ಟೋ ಸಲ ಯಶಸ್ವಿಯಾಗಿ ಪ್ರತಿಭಟಿಸಿದ್ದಾರೆ. ಪ್ರಾಂತದಲ್ಲಿ ಪಂಡಿತ್ ನೆಹರೂರವರ ಸಂಚಾರ ಕ್ರಾಂತಿಯನ್ನುಂಟುಮಾಡಿತು; ಹೊಸ ಹುಮ್ಮಸ್ಸನ್ನು ತುಂಬಿತು.

ಈ ಚುನಾವಣೆಯ ಕಾಲದಲ್ಲುಂಟಾದ ಜಾಗ್ರತಿಯ ಚಿರಲಾಭವು ಕಾಂಗ್ರೆಸ್ ಸಂಸ್ಥೆಗೆ ಸಿಗುವಂತೆ ಮಾಡಲು ಪ್ರಾಂತಿಕ ಮುಂದಾಳುಗಳು ಏನೂ ಯತ್ನಿಸಲಿಲ್ಲವೆಂಬುದು ವಿಷಾದದ ಸಂಗತಿ ಚುನಾವಣೆಯ ಅವಶ್ಯಕತೆಯ ಮೂಲಕ ಉಂಟಾದ ಹೊಸ ಹುಮ್ಮಸ್ಸನ್ನು ಕಾಂಗ್ರೆಸ್ ಸಂಸ್ಥೆಯ ಸಂಘಟನೆಗಾಗಿ ಉಪಯೋಗಿಸಿಕೊಳ್ಳುವ ಪ್ರಯತ್ನವೇನೋ ನಡೆದಿದೆ. ಆದರೆ ಇದರ ಶ್ರೇಯಸ್ಸು ಕೂಡ ಸಾಮ್ಯವಾದೀ ಕಾರ್ಯಕರ್ತರಿಗೇ ಸಲ್ಲತಕ್ಕದ್ದು. ಚುನಾವಣೆಯ ಕೆಲಸಕ್ಕಾಗಿ ಮುಂದೆ ಬಂದ ಕೆಲಸಗಾರರನ್ನು ಸೇರಿಸಿ, ಸೇವಾದಲಗಳ ನಿರ್ಮಾಣಕ್ಕಾಗಿ ಕಾರ್ಯಕರ್ತರನ್ನು ಸಂಘಟಿಸುವುದೇ ಇವರ ಮುಖ್ಯ ಉದ್ದೇಶವೆಂಬಂತೆ ತೋರುತ್ತದೆ.

ಮೊನ್ನೆ ರಾತ್ರಿ ಚುನಾವಣೆ ಸಭೆಗೆ ಹೋಗಿದ್ದ ನಾನು ಬಂಡಿಯಲ್ಲಿ ಕುಳಿತು ಒಂದು ಕಮ್ಮಾರ ಸಾಲೆಯ ಪಕ್ಕದಿಂದ ಮರಳಿ ಬರುತ್ತಲಿದ್ದೆ. ಆಗ

ಒಮ್ಮೆಲೇ 'ಸ್ವತಂತ್ರ ಭಾರತ್‌ಕೀ ಜೈ' ಎಂಬ ಕೂಗೂ, ಅದನ್ನು ಹಿಂಬಾಲಿಸಿ 'ರಾಮಚಂದ್ರಜೀಕೀ ಜೈ' ಎಂಬ ನಮ್ಮ ಪುರಾತನ ಘೋಷಣೆಯೂ ಕೇಳಬಂದಿತು.

ಅಲ್ಲಿ ಕೂಲಿಕಾರರ ಗುಂಪು ರಾಮಾಯಣದ ಒಂದು ಭಾಗವನ್ನು ಆಲಿಸುತ್ತ ಕುಳಿತಿದ್ದಿತೆಂದು ತೋರುತ್ತದೆ. ನಿರ್ದಿಷ್ಟ ಕಡೆಗಳಲ್ಲೆಲ್ಲ 'ರಾಮಚಂದ್ರಜೀಕೀ ಜೈ' ಎಂದು ಕೂಗುವುದು ವಾಡಿಕೆ. ಆದರೆ ನಮ್ಮ ರಾಷ್ಟ್ರೀಯ ಘೋಷಣೆ ಈ ಪವಿತ್ರ ಧಾರ್ಮಿಕ ಘೋಷಣೆಯಷ್ಟೇ ಆದರಣೀಯವೂ ಜನಪ್ರಿಯವೂ ಆದುದನ್ನು ಕಂಡು ನನ್ನ ಮನಸ್ಸು ಉಬ್ಬಿ ಹೋಯಿತು. ನಮ್ಮ ಜನತೆಯ ಮಾನಸಿಕ ಕ್ರಾಂತಿಯ ಸ್ಪಷ್ಟ ದ್ಯೋತಕವಿದು. ನಮ್ಮ ಕ್ರಾಂತಿ ಸಂಪೂರ್ಣವಾಗಿ ಮಾಡಿದೆಯೆಂದೇ ನನ್ನ ತಿಳಿವಳಿಕೆ.

—o—

೩

# ಜಮ್‌ಶೇಟ್‌ಪುರದ ಕಟ್ಟಳೆಯಲ್ಲಿ ಹೇಳಿಕೆ (೧೯೪೦)

"ನಾನು ಯುದ್ಧಕ್ಕೆ ಆವಶ್ಯಕವಾದ ಮದ್ದುಗುಂಡುಗಳ ನಿರ್ಮಾಣ ಕಾರ್ಯಕ್ಕೆ ತಡೆಹಾಕಿದೆನೆಂದೂ, ಬ್ರಿಟಿಷ್‌ಭಾರತದ ರಕ್ಷಣೆಗೆ ಗಂಡಾಂತರ ಒದಗುವಂತೆ ಜನರ ಆಚಾರ ವಿಚಾರಗಳನ್ನು ಪಲ್ಲಟಿಸಲು ಯತ್ನಿಸಿದೆನೆಂದೂ ಯಶಸ್ವಿಯಾಗುತ್ತಿರುವ ಯುದ್ಧ ಕಾರ್ಯಕ್ಕೆ ಅಡ್ಡ ಬಂದಿರುವೆನೆಂದೂ ನನ್ನ ಮೇಲೆ ಆಪಾದನೆ ಹೊರಿಸಲಾಗಿದೆ. ಈ ಎಲ್ಲ ವಿಷಯಗಳಲ್ಲಿ ನಾನು ಅಪರಾಧಿಯೆಂಬುದನ್ನು ಒಪ್ಪಿಕೊಳ್ಳುತ್ತೇನೆ."

"ನನ್ನ ಮೇಲೆ ಹೊರಿಸಿದ ಈ ಅಪಾದನೆಗಳು, ನನ್ನ ದೃಷ್ಟಿಯಿಂದ, ನನ್ನ ಕರ್ತವ್ಯಗಳೇ ಹೊರತು ಅಪರಾಧವಲ್ಲವೆಂದು ನಾನು ತಿಳಿದಿದ್ದೇನೆ. ಈ ಭಾವನೆಯ ಪರಿಣಾಮವೇನಾದೀತೆಂಬ ಭಯ ನನಗಿಲ್ಲ. ಒತ್ತಾಯದಿಂದ ಆಳುತ್ತಿರುವ ಪರಕೀಯ ಸರಕಾರದ ಕಟ್ಟಳೆಗಳನ್ನು ನಾನು ಮನ್ನಿಸಲಾರೆ. ಈ ಕಾಯಿದೆಗಳ ಉದ್ದೇಶ ನಮ್ಮ ರಾಷ್ಟ್ರೀಯ ಭಾರತದ ಉದ್ದೇಶಕ್ಕೆ ತೀರ

ವಿರುದ್ಧವಾಗಿವೆ. ನಾನು ಭಾರತದ ನಮ್ರ ಸೇವಕ. ಎಂದ ಮೇಲೆ ನಮ್ಮ ನಿಮ್ಮಲ್ಲಿ ಈ ತಿಕ್ಕಾಟ ಸ್ವಾಭಾವಿಕವಾದುದು.

ಈಗಿನ ಯುದ್ಧದಲ್ಲಿ ನನ್ನ ದೇಶವು ಯಾವುದೇ ರೀತಿಯಿಂದ ಸಹಕರಿಸಲಿಲ್ಲ. ಏಕೆಂದರೆ ಜರ್ಮನಿಯು ನಾಜೀವಾದ ಮತ್ತು ಬ್ರಿಟನ್ನಿನ ಸಾಮ್ರಾಜ್ಯವಾದ ಇವೆರಡೂ ಪಾಪದ ಮೊಟ್ಟೆಯೆಂದು, ತನ್ನ ಹಗೆಯೆಂದು ಅದು ಭಾವಿಸಿದೆ. ಯುದ್ಧದಲ್ಲಿ ತೊಡಗಿದ ಈ ಎರಡೂ ಪಕ್ಷಗಳು ಸುಲಿಗೆಯ ಮತ್ತು ದಬ್ಬಾಳಿಕೆಯ, ದಿಗ್ವಿಜಯದ ಮತ್ತು ಅಧಿಕಾರ ನಡೆಸುವ ಸ್ವಾರ್ಥಪರ ಉದ್ದೇಶವನ್ನಿಟ್ಟುಕೊಂಡಿವೆ. ಜರ್ಮನಿಯ ವಿರುದ್ಧ ಇಂಗ್ಲೆಂಡು ಕಾದಾಡುತ್ತಿರುವುದು ತಾನೇ ಸಾಕಿ ಸಲಹಿದ ನಾಜೀವಾದವನ್ನು ನಾಶಪಡಿಸುವುದಕ್ಕಲ್ಲ; ಆದರೆ ತೀವ್ರವಾಗಿ ಬೆಳೆಯುತ್ತಿರುವ ತನ್ನ ಪ್ರತಿ ಸ್ಪರ್ಧಿಯನ್ನು ಅಡಗಿಸುವುದಕ್ಕೆ. ಅದು ಹೋರಾಡುತ್ತಿರುವುದು ಜಗತ್ತಿನೊಳಗಿನ ತನ್ನ ಉನ್ನತಸ್ಥಾನವನ್ನುಳಿಸಿಕೊಳ್ಳುವದಕ್ಕೆ; ತನ್ನ ಸಾಮ್ರಾಜ್ಯವಾದೀ ಶಕ್ತಿಯನ್ನೂ ವೈಭವವನ್ನೂ ಉಳಿಸಿಕೊಳ್ಳುವುದಕ್ಕೆ. ಭಾರತದ ಮಟ್ಟಿಗೆ ಹೇಳುವುದಾದರೆ, ಇಂಗ್ಲೆಂಡು ಹೋರಾಡುತ್ತಿರುವುದು ಭಾರತದ ತನ್ನ ಸಾಮ್ರಾಜ್ಯವನ್ನು ಕಾಪಾಡಿಕೊಳ್ಳುವದಕ್ಕೆ."

"ಸ್ಪಷ್ಟವಾಗಿ ಹೇಳುವುದಾದರೆ ಭಾರತಕ್ಕೂ ಇಂಥ ಯುದ್ಧಕ್ಕೂ ಸಂಬಂಧವಿಲ್ಲ. ಯಾವ ಭಾರತೀಯನೂ ಸಾಮ್ರಾಜ್ಯವಾದದ ರಕ್ಷಣೆಗಾಗಿ' ಯುದ್ಧದ ಮೂಲಕ ತನ್ನ ದೇಶದ ದಾಸ್ಯಶೃಂಖಲೆಗಳನ್ನು ಬಿಗಿಯಾಗಿಸುವುದಕ್ಕಾಗಿ, ತನ್ನ ದೇಶದ ಸಾಧನ ಸಂಪತ್ತು ವ್ಯಯವಾಗುತ್ತಿರುವುದನ್ನು ಸಹಿಸಲಾರ. ಇಂಥ ಸಂದರ್ಭದಲ್ಲಿ ದೇಶದ ಪವಿತ್ರವಾದ ಕರ್ತವ್ಯವೇನೆಂಬುದನ್ನು ರಾಷ್ಟ್ರದ ಏಕಮೇವ ಪ್ರತಿನಿಧಿಯಾದ ಕಾಂಗ್ರೆಸ್ಸು ತೋರಿಸಿಕೊಟ್ಟಿದೆ. ಕಾಂಗ್ರೆಸ್ಸಿನ ನಮ್ರ ಸೇವಕನಾದ ನಾನು ಈ ಕರ್ತವ್ಯವನ್ನು ಸಾಧ್ಯವಿದ್ದ ಮಟ್ಟಿಗೆ ಪೂರ್ಣಗೊಳಿಸಲು ಪ್ರಯತ್ನ ಪಟ್ಟಿದ್ದೇನೆ."

"ಆದರೆ ಬ್ರಿಟಿಷ್ ಪ್ರಭುತ್ವವಾದರೋ ಭಾರತದ ಅಭಿಪ್ರಾಯವನ್ನು ಸಂಪೂರ್ಣವಾಗಿ ತಿರಸ್ಕರಿಸಿ ಭಾರತವನ್ನು ಯುದ್ಧಾಸಕ್ತ ರಾಷ್ಟ್ರವೆಂದು ಸಾರಿದುದಲ್ಲದೆ, ನಮ್ಮ ದೃಢ ವಿರೋಧವುಳ್ಳ ಯುದ್ಧಕ್ಕಾಗಿ ಭಾರತದ ಜನ, ಧನ ಮತ್ತು ಸಾಧನ ಸಾಮಗ್ರಿಗಳನ್ನು ಉಪಯೋಗಿಸಿಕೊಳ್ಳುತ್ತಿದೆ. ಇದು ಭಾರತದ ಮೇಲೆ ಮಾಡಿದ ದಾಳಿ, ಜರ್ಮನರು ಪೋಲಂಡಿನ ಮೇಲೆ ನಡೆಸಿದ

ದಾಳಿಗೆ ಕಿಂಚಿತ್ತೂ ಕಡಿಮೆಯಲ್ಲದಂಥ ಉಗ್ರವಾದ ದಾಳಿ, ಎಂಬಲ್ಲಿ ಸಂದೇಹ ವಿಲ್ಲ. ಹಿಂದುಸ್ಥಾನವು ಇದನ್ನು ಪ್ರತಿಭಟಿಸದೆ ಬೇರೆ ದಾರಿಯಿಲ್ಲ. ಆದ್ದರಿಂದ ತನ್ನ ಸಾಮ್ರಾಜ್ಯರಕ್ಷಣೆಯ ಉದ್ದೇಶವನ್ನು ಈಡೇರಿಸಿಕೊಳ್ಳಲು ಈ ರಾಷ್ಟ್ರದ ಸಂಪತ್ತನ್ನು ಬಳಸಿಕೊಳ್ಳುತ್ತಿರುವ ಬ್ರಿಟಿಷ್ ಸರಕಾರದ ಪ್ರಯತ್ನವನ್ನು ಪ್ರತಿಭಟಿಸುವುದು ದೇಶಾಭಿಮಾನಿಯಾದ ಪ್ರತಿಯೊಬ್ಬ ಭಾರತೀಯನ ಪವಿತ್ರ ಕರ್ತವ್ಯ. ಹೀಗೆ, ಯುದ್ಧ ಕಾರ್ಯಕ್ಕೆ ತಡೆಯನ್ನುಂಟು ಮಾಡಿದೆನೆಂದು ನನ್ನ ಮೇಲೆ ಹೇರಿದ ಅಪಾದನೆಯೆಂದರೆ ಕರ್ತವ್ಯವನ್ನು ನಿರ್ವಹಿಸಿದ್ದಕ್ಕಾಗಿ ನನಗೆ ಕೊಟ್ಟ ಪ್ರಶಸ್ತಿಯೆಂದು ನಾನು ತಿಳಿದಿದ್ದೇನೆ. ಸ್ವಾತಂತ್ರ್ಯಪ್ರಿಯ ಭಾರತವು ಯಾವುದನ್ನು ಕರ್ತವ್ಯವೆಂದು ಭಾವಿಸಿದೆಯೋ ಬ್ರಿಟಿಷ್ ಸರಕಾರವು ಅದನ್ನು ಅಪರಾಧವೆಂದು ಗಣಿಸುತ್ತಿರುವುದರಿಂದ ಅದರ ಸಾಮ್ರಾಜ್ಯವಾದೀ ಸ್ವಭಾವವು ಚೆನ್ನಾಗಿ ಸ್ಪಷ್ಟವಾಗುತ್ತದೆ."

"ಯಾವ ಭಾಷಣಕ್ಕಾಗಿ ನನ್ನ ಮೇಲೆ ಕಟ್ಲೆ ನಡೆಸಲಾಗಿದೆಯೋ ಆ ಭಾಷಣದ ಉದ್ದೇಶವು ಎಷ್ಟರ ಮಟ್ಟಿಗೆ ಸಫಲವಾಗಿದೆಯೆಂಬುದನ್ನು ನಾನು ಹೇಳಲಾರೆ. ಆದರೆ ಇದರಿಂದ ಒಂದು ವೇಳೆ ಯುದ್ಧ ನಿರ್ವಹಣ ಕಾರ್ಯವು ಸ್ವಲ್ಪಮಟ್ಟಿಗಾದರೂ ನಿಂತು ಹೋಗಿದೆಯೆಂದು ತಿಳಿದು ಬಂದರೆ ನನ್ನ ಜೀವನದಲ್ಲಿ ಅದರಂತಹ ಮಂಗಳ ದಿನ ಬೇರೊಂದಿಲ್ಲವೆಂದು ನನ್ನ ಭಾವನೆ. ಇದರಲ್ಲಿ ನನಗೆ ಗೆಲುವು ದೊರಕಿದುದು ನಿಜವಾದರೆ ಎಂಥ ಶಿಕ್ಷೆಯನ್ನಾದರೂ ನಾನು ಸಂತೋಷದಿಂದ ಸ್ವಾಗತಿಸುತ್ತೇನೆ."

"ಬ್ರಿಟಿಷ್ ಭಾರತದ ರಕ್ಷಣೆಗೆ ಅಪಾಯ ಮಾಡಿದೆನೆಂದು ನನ್ನ ಮೇಲೆ ಹೊರಿಸಲಾದ ಆಪಾದನೆ ವ್ಯಂಗೋಕ್ತಿಯಲ್ಲದೆ ಇನ್ನೇನು ? ಗುಲಾಮನು ತನ್ನ ದಾಸ್ಯವನ್ನು ಉಳಿಸಿಕೊಳ್ಳಬೇಕೆಂಬ ನಿರ್ಬಂಧವೆಲ್ಲಿಯೂ ಇಲ್ಲ. ತನ್ನ ದಾಸ್ಯವನ್ನು ಕಡೆದೊಗೆಯುವುದೇ ಅವನ ಕರ್ತವ್ಯ. ನಮ್ಮ ಸ್ವಾತಂತ್ರ್ಯವನ್ನು ನಾವು ಗಳಿಸಿದ ಮೇಲೆ ನಮ್ಮ ರಕ್ಷಣೆ ಹೇಗೆ ಮಾಡಿಕೊಳ್ಳಬೇಕೆಂಬುದನ್ನು ತಿಳಿದುಕೊಳ್ಳಲಾರೆವೆ ?"

"ಜಮ್‌ಶೇಟ್‌ಪುರದ ಉಪನ್ಯಾಸಕ್ಕಾಗಿ ನನ್ನನ್ನು ಇಲ್ಲಿ ವಿಚಾರಣೆಗೆ ಗುರಿಪಡಿಸಿದ್ದರಿಂದ ನಾನು ಸುದೈವಿಯೆಂದು ತಿಳಿದಿದ್ದೇನೆ. ನಮ್ಮ ರಾಷ್ಟ್ರದಲ್ಲೆಲ್ಲ ಅತ್ಯಂತ ಮಹತ್ವದ ಔದ್ಯೋಗಿಕ ಕೇಂದ್ರವಾದ ಈ ನಗರವು ಕೂಲಿ

ಕಾರರ ಆಂದೋಲನದ ದೃಷ್ಟಿಯಿಂದಲೂ ರಾಜಕೀಯ ದೃಷ್ಟಿಯಿಂದಲೂ ತೀರ ಹಿಂದುಳಿದಿದೆ. ನನ್ನ ಒಂದು ಭಾಷಣದಿಂದ ನಮ್ಮ ರಾಷ್ಟ್ರದ ರಾಜಕೀಯ ಮತ್ತು ಕೂಲಿಕಾರ ಮುಂದಾಳುಗಳು ಈ ನಗರದ ಕಡೆಗೆ ಸ್ವಲ್ಪಮಟ್ಟಿಗಾದರೂ ಗಮನ ಕೊಟ್ಟರೆ ಸಾಕು, ನಾನು ಸೆರೆಮನೆಯಲ್ಲಿ ಸಂತೋಷದಿಂದ ಕಾಲ ಕಳೆಯುತ್ತೇನೆ. ನಾವು ಕಟುವಾಗಿ ವಿರೋಧಿಸುತ್ತಿರುವ ಯುದ್ಧಕಾರ್ಯದಲ್ಲಿ ನಮ್ಮ ರಾಷ್ಟ್ರದ ಚೈತನ್ಯವೆಲ್ಲ ಹಾಳಾಗುತ್ತಿರುವುದು ಉದ್ವೇಗಕರವಾಗಿದೆ. ಇಡಿಯ ದೇಶದ ಕೂಲಿಕಾರರು ಯುದ್ಧದಿಂದ ಉಂಟಾದ ಪರಿಸ್ಥಿತಿಗೆ ತಕ್ಕಂತೆ ಉಗ್ರವಾಗಿ ಪ್ರತೀಕಾರ ಹೂಡಿರುವಾಗ ಜಮ್‌ಶೇಟ್‌ಪುರದ ಕೂಲಿಕಾರರು ಮಹತ್ವದ ಯಾವ ಘಟನೆಯೂ ನಡೆದಿಲ್ಲವೆಂಬಂತೆ ಸಾಗುತ್ತಿರುವುದು ಕಡಿಮೆ ಉದ್ವೇಗಕರವಲ್ಲ. ನನ್ನ ಈ ವಿಚಾರಣೆಯಿಂದ ಅವರಿಗೆ ಯುದ್ಧಕಾಲದ ಬೋನಸ್ಸಾದರೂ ಸಿಗುವಂತಾಗಲಿ."

"ಕಟ್ಟಕಡೆಯಲ್ಲಿ, ಒಬ್ಬ ಆಂಗ್ಲ ನಾಗರಿಕನ ದೃಷ್ಟಿಯಿಂದಲಾದರೂ ನೀವು (ನ್ಯಾಯಾಧೀಶರು) ನನ್ನ ಬಗೆಗೆ ತಪ್ಪು ಭಾವನೆ ಮಾಡಿಕೊಳ್ಳಬಾರದೆಂದು ಕೋರುತ್ತೇನೆ. ಈ ಯುದ್ಧಕ್ಕೆ ಅಡ್ಡಿಯನ್ನುಂಟುಮಾಡುವುದರ ಮೂಲಕ ನನಗೆ ಜರ್ಮನಿಗೆ ನೆರವಾಗುವ ಇಚ್ಛೆಯಿದೆಯೆಂದಾಗಲಿ, ಜರ್ಮನಿಗೆ ಗೆಲುವಾಗಬೇಕೆಂಬ ಅಭಿಲಾಷೆ ಇದೆಯೆಂದಾಗಲಿ ತಿಳಿದುಕೊಳ್ಳಕೂಡದು. ನನ್ನ ಬಯಕೆ ಸಾಮ್ರಾಜ್ಯವಾದಕ್ಕಾಗಲಿ ನಾಜೀವಾದಕ್ಕಾಗಲಿ ಗೆಲುವಾಗಕೂಡದೆಂಬುದು. ಆದರೂ ನಾನು ಕಾಂಗ್ರೆಸ್ಸಿಗನೂ ಸಾಮ್ಯವಾದಿಯೂ ಆಗಿರುವುದರಿಂದ ಬ್ರಿಟಿಷ್ ಮತ್ತು ಜರ್ಮನ್ ಜನತೆಯ ಬಗೆಗೆ ನನಗೆ ಸಹಾನುಭೂತಿಯಿದೆ. ಬ್ರಿಟನ್ನು ಹೂಡಿದ ಸಾಮ್ರಾಜ್ಯವಾದದ ರಕ್ಷಣೆಯ ಯುದ್ಧಕ್ಕೆ ಭಾರತೀಯರ ವಿರೋಧದಿಂದ ತೊಂದರೆಯಾಗಿ ಜರ್ಮನಿಗೆ ಗೆಲುವಾಗುವುದು ನಿಜವಾದರೆ, ತಾವು ನಾಜೀ ನಾಯಕತ್ವಕ್ಕೆ ಒಳಗಾಗಬೇಕೋ ಇಂಗ್ಲಂಡಿನಲ್ಲಿಯೂ ಭಾರತದಲ್ಲಿಯೂ ನಿಜವಾದ ಪ್ರಜಾಪ್ರಭುತ್ವಕ್ಕೆ ಜಯವನ್ನು ಕೋರಬೇಕೋ ಎಂಬುದನ್ನು ಇಂಗ್ಲಿಷ್ ಜನತೆಯೇ ನಿರ್ಧರಿಸಬೇಕು. ಒಂದು ವೇಳೆ ಬ್ರಿಟಿಷರು ತಮ್ಮ ಸಾಮ್ರಾಜ್ಯವನ್ನು ವಿಸರ್ಜಿಸಿ ತಮ್ಮ ಮತ್ತು ಬಂಡವಲುಗಾರ ಅರಸರ ಆಳಿಕೆಯನ್ನು ಮುಕ್ತಾಯಗೊಳಿಸಿದರೆ ಬರಿಯ ಹಿಂದುಸ್ಥಾನ ಮಾತ್ರವಲ್ಲ, ಪ್ರಪಂಚದ ಎಲ್ಲ ಸ್ವಾತಂತ್ರ್ಯಪ್ರಿಯ ಜನಾಂಗಗಳು

ಸ್ವಾತಂತ್ರ್ಯ ಮತ್ತು ಪ್ರಜಾಪ್ರಭುತ್ವದ ಗೆಲುವಿಗಾಗಿ ನಾಜೀವಾದವನ್ನು ಸೋಲಿಸಲು ಸಿದ್ಧರಾಗುವುದರಲ್ಲಿ ಸಂದೇಹವಿಲ್ಲ. ಸದ್ಯದ ಪರಿಸ್ಥಿತಿಯಲ್ಲಿ ಭಾರತಕ್ಕೆ ಬ್ರಿಟಿಷ್ ಸಾಮ್ರಾಜ್ಯದ ವಿರುದ್ಧವಾಗಿ ಹೋರಾಡಿ ಅದನ್ನು ನಾಶಗೊಳಿಸದೆ ಗತ್ಯಂತರವಿಲ್ಲ. ಭಾರತವು ಇದರಿಂದ ಮಾತ್ರವೇ ಜಗತ್ತಿಗೆ ಶಾಂತಿ ಸುಖಗಳನ್ನು ಒದಗಿಸಬಲ್ಲುದು"

"ಸ್ವಾಮಿ, ನನ್ನ ಈ ಹೇಳಿಕೆಯಿಂದ ನಿಮ್ಮ ಕೆಲಸ ಹಗುರವಾಗಿದೆ ಯೆಂಬುದನ್ನು ನಾನು ಬಲ್ಲೆ. ಇದಕ್ಕಾಗಿ ನಾನು ವಿಷಾದಪಡುವುದಿಲ್ಲ"

"ಕೊನೆಗೆ, ಈ ವಿಚಾರಣೆಯಲ್ಲಿ ನೀವು ತೋರಿದ ಔದಾರ್ಯ ಮತ್ತು ಸೌಹಾರ್ದತೆಗಾಗಿ ನನ್ನ ವಂದನೆಗಳು."



# ೭

# ಇತ್ತೀಚೆಗಿನ ಉಪನ್ಯಾಸಗಳು

೧ ಪಾಟ್ನಾದ ಪ್ರಥಮ ಉಪನ್ಯಾಸ (೧೯೪೬)

೨ ಮುಂಬಯಿಯಲ್ಲಿ ಅ. ಭಾ. ಕಾಂ. ಸಮಿತಿಯಲ್ಲಿ ಉಪನ್ಯಾಸ (೧೯೪೬)

# ಇತ್ತೀಚೆಗಿನ ಉಪನ್ಯಾಸಗಳು

## ೧

## ಪಾಟ್ನಾದ ಪ್ರಥಮ ಉಪನ್ಯಾಸ (೧೯೪೬)

### ಕೊನೆಯ ಹೋರಾಟಕ್ಕೆ ಸಿದ್ಧರಾಗಿರಿ

**('ತೊಲಗಿರಿ' ಆಂದೋಲನದಲ್ಲಿ ಸೆರೆಯಾದ ಜಯಪ್ರಕಾಶರು, ಬಿಡುಗಡೆಯಾದ ಮೇಲೆ ಮೊದಲನೆಯ ಸಲ ಪಾಟ್ನಾಕ್ಕೆ ಹೋದಾಗ ಅಲ್ಲಿ ಅವರಿಗೆ ಪ್ರಚಂಡ ಸ್ವಾಗತ ವಾಯಿತು. ಕೆಳಗಿನ ಈ ವರದಿಯನ್ನು ಪಾಟ್ನಾದ 'ಇಂಡಿಯನ್ ನೇಶನ್' ಎಂಬ ದಿನಪತ್ರಿಕೆ (೧೯೪೬ ನೇ ಎಪ್ರಿಲ್ ೨೨ ರ ಸಂಚಿಕೆ)ಯಿಂದ ಶಬ್ದಶಃ ಎತ್ತಿಕೊಳ್ಳ ಲಾಗಿದೆ)**

ಪಾಟ್ನಾ, ಎಪ್ರಿಲ್ ೨೧. ಮಹತ್ವದ ಅಗಸ್ಟ್ ಘಟನೆಗಳ ನಂತರ ಶ್ರೀ ಜಯಪ್ರಕಾಶ ನಾರಾಯಣರು ಪಾಟ್ನಾಕ್ಕೆ ಮೊದಲನೆಯ ಸಲ ಬಂದ ಸಂದರ್ಭದಲ್ಲಿ, ಅವರ ಸ್ವಾಗತಕ್ಕಾಗಿ ಇಂದು ಸಂಜೆ ಬಂಕಿಪುರ ಬೈಲಿನಲ್ಲಿ ನಗರದ ಅರ್ಧಕ್ಕಿಂತ ಹೆಚ್ಚು ಜನರ ಪ್ರಚಂಡ ಸಮುದಾಯವು ಕಿಕ್ಕಿರಿದಿತ್ತು. ಇದೊಂದು ಅಪೂರ್ವ ದೃಶ್ಯ. ಈ ಹತ್ತು ವರುಷಗಳಲ್ಲಿ ಈ ಪಟ್ಟಣದಲ್ಲಿ ಯಾವನೊಬ್ಬ ಮುಂದಾಳಿನ ಭಾಷಣಕ್ಕಾಗಿ ಇಷ್ಟೊಂದು ಜನ ಎಂದಿಗೂ ನೆರೆದಿರಲಿಲ್ಲ; ಭಾಷಣವನ್ನು ಇಷ್ಟೊಂದು ಶಾಂತತೆಯಿಂದ, ಏಕಾಗ್ರತೆಯಿಂದ ಕೇಳಿರಲೂ ಇಲ್ಲ. ಸಭೆಯ ಆರಂಭಕ್ಕಿಂತ ಒಂದು ಗಂಟೆ ಮುಂಚೆ ಎಲ್ಲ ನಿಟ್ಟಿನಿಂದಲೂ ಜನರು ಬಂದು ನೆರೆದುದರಿಂದ ಬೈಲಿನಲ್ಲಿ ನೋಡಿದಲ್ಲೆಲ್ಲ ತಲೆಗಳೇ ಕಾಣುತ್ತಿದ್ದುವು. ಆ ಬೆಳುದಿಂಗಳ ರಾತ್ರಿಯಲ್ಲಿ ದೊಡ್ಡದಾಗಿ ಹಾರಾಡುತ್ತಿರುವ ಆ ತ್ರಿವರ್ಣಧ್ವಜವೂ 'ಇನ್‌ಕಿಲಾಬ್ ಜಿಂದಾ ಬಾದ್', 'ಜೈಹಿಂದ್' ಮುಂತಾದ ಕೂಗೂ ಆ ಶ್ರೇಷ್ಠ ಮುಂದಾಳಿನ ಮಹಾಸ್ವಾಗತದ ಸುರಮ್ಯ ದೃಶ್ಯಕ್ಕೆ ಎಣೆಯಿಲ್ಲದ ಕಳೆ ತಂದಿದ್ದುವು. ನಮ್ಮ ಮಾನ್ಯ ಮುಂದಾಳು ವೇದಿಕೆಯ ಮೇಲೆ ಬಂದಕೂಡಲೇ ಜನರು ಪ್ರಚಂಡವಾದ ಸ್ವಾಗತ ಕೋರಿದರು. ಆಗ ಅವರು ಪ್ರತಿಯಾಗಿ ಕೈಜೋಡಿಸಿ ವಂದಿಸಿದರು.

ಮುಖ್ಯ ಮಂತ್ರಿಗಳಾದ ಮಾನ್ಯ ಶ್ರೀ ಕೃಷ್ಣಸಿಂಹರು ತಮ್ಮ ಪ್ರಾಂತದ ಜನತೆಯ ಪರವಾಗಿ ಜಯಪ್ರಕಾಶರನ್ನು ಸ್ವಾಗತಿಸುತ್ತ ಅವರು ತರುಣರ ಹೃದಯದ ಅಧಿದೈವತವೆಂದರು.

ಮುಖ್ಯ ಮಂತ್ರಿಗಳು ಬ್ರಿಟಿಷ್ ಪ್ರಭುತ್ವಕ್ಕೆ "ಇಲ್ಲಿ ನೆರೆದ ಈ ಪ್ರಚಂಡ ಸಭೆ, ಭಾರತವು ಎಚ್ಚೆತ್ತ ಜ್ವಾಲಾಮುಖಿಯಾಗಿರುವುದರ ಪ್ರತೀಕವಾಗಿದೆ. ನಮ್ಮ ಅದೃಷ್ಟ ನಿರ್ಣಾಯಕರಾದ ಪರಕೀಯ ಸರಕಾರವು ಈ ಸಂಗತಿಯನ್ನು ಚೆನ್ನಾಗಿ ಗಮನದಲ್ಲಿಟ್ಟುಕೊಳ್ಳಬೇಕು" ಎಂದು ಎಚ್ಚರಿಸಿದರು

ಜಯಪ್ರಕಾಶರ ವ್ಯಕ್ತಿತ್ವಕ್ಕೆ ವಿಶೇಷ ಗೌರವವನ್ನು ಸಲ್ಲಿಸುತ್ತ ಮುಖ್ಯ ಮಂತ್ರಿಗಳು ಹೀಗೆ ಹೇಳಿದರು—"ಅವರು ಜನತೆಯ ಆಶೆ ಆಕಾಂಕ್ಷೆಗಳ ಮೈವೆತ್ತ ಮೂರ್ತಿ. ಅವರ ಪ್ರತಿಯೊಂದು ಆಚಾರ ವಿಚಾರವು ಹಸಿದ, ಬತ್ತಲೆಯಾದ ಲಕ್ಷಗಟ್ಟಲೆ ಜನರಿಗೆ ಅನ್ನ ಬಟ್ಟೆಗಳನ್ನು ದೊರಕಿಸುವುದ ರಲ್ಲಿಯೇ ತೊಡಗಿರುತ್ತದೆ. ಅವರ ಹಂಬಲು, ಪ್ರತಿಯೊಬ್ಬ ವ್ಯಕ್ತಿಯು ಯಾವ ಬಂಧನವೂ ಇಲ್ಲದೆ ತಲೆಯೆತ್ತಿ ತಿರುಗುವಂಥ ಸಮಾಜವನ್ನು ಕಾಣ ಬೇಕೆಂಬುದು."

"ಜಯಪ್ರಕಾಶರನ್ನು ಸೆರೆಯಲ್ಲಿಟ್ಟ ಆಡಳಿತಕ್ಕೆ ನಿಜವಾಗಿಯೂ ನಾಚಿಕೆ ಯಾಗಿರಬೇಕು. ಅವರು ಸೆರೆಮನೆಯ ಕಟ್ಟಳೆಗಳನ್ನು ಮುರಿದಿರುವುದು ನಿಜ ಆದರೆ ಇಂಥ ನಡತೆಯನ್ನು ಪ್ರಚಲಿತ ಕಟ್ಟಳೆಗಳ ದೃಷ್ಟಿಯಿಂದ ಅಳೆಯುವು ದಕ್ಕಿಂತ ರಾಜಕೀಯ ಅವಶ್ಯಕತೆಯ ದೃಷ್ಟಿಯಿಂದ ನಿರ್ಣಯಿಸುವುದು ಯೋಗ್ಯ."

ಶ್ರೀ ಕೃಷ್ಣ ಸಿಂಹರು "ಜಯಪ್ರಕಾಶರು ಉದ್ದಂಡ ಆಯುಷ್ಮಂತರಾಗಿ ತಮ್ಮ ಹಂಬಲು ಹಣ್ಣಿಸಿದುದನ್ನು ಕಾಣಲಿ. ವಯಸ್ಸಿನಿಂದ ಹಿರಿಯನಾದ ನಾನು ಅವರನ್ನು ಹೃತ್ಪೂರ್ವಕವಾಗಿ ಹರಸುತ್ತೇನೆ" ಎಂದು ತಮ್ಮ ಭಾಷಣ ಮುಗಿಸಿದರು.

ಜಯಪ್ರಕಾಶರಿಗೆ ವಿದ್ಯಾರ್ಥಿ ಸಂಘ, ಮೊಮಿನ್ ವಿದ್ಯಾರ್ಥಿ ಕಾಂಗ್ರೆಸ್, ಮತ್ತು ಇನ್ನಿತರ ಸಾರ್ವಜನಿಕ ಸಂಘ ಸಂಸ್ಥೆಗಳು ಮಾನಪತ್ರವನ್ನರ್ಪಿಸಿ ದುವು. ಸೈನ್ಸ್ ಕಾಲೇಜ್ ವಿದ್ಯಾರ್ಥಿಗಳ ಪರವಾಗಿ ಕುಮಾರಿ ಪ್ರಮಿಲಾ ಶ್ರೀವಾತ್ಸವರೂ, ಪ್ರಾಂತೀಯ ಮಹಿಳೆಯರ ಪ್ರತಿನಿಧಿಯಾಗಿ ಶ್ರೀಮತಿ ಅನ್ನಪೂರ್ಣಾದೇವಿಯವರೂ ಮಾನಸಪತ್ರವನ್ನರ್ಪಿಸಿದರು. ಪಾಟ್ನಾ ನಾಗರಿ ಕರ ಪರವಾಗಿ ಹದಿನಾರುಸಾವಿರ ರೂಪಾಯಿಗಳ ಹಮ್ಮಿಣಿಯನ್ನು ಅರ್ಪಿಸಿ

ದ್ದಲ್ಲದೆ ವೈಯಕ್ತಿಕವಾಗಿ ಅದೇ ಸ್ಥಳದಲ್ಲಿ, ಆಗಿಂದಾಗ ಎಷ್ಟೋ ಹಣ ಉಂಗುರ ಮತ್ತು ಆಭರಣಗಳ ಕಾಣಿಕೆಗಳು ಬಂದುವು.

## ಮುಖ್ಯ ಸಂಗತಿಗಳು

೧೯೪೨ರ ಕ್ರಾಂತಿಯ ಮುಂದಾಳು ಶ್ರೀ. ಜಯಪ್ರಕಾಶ ನಾರಾಯಣರ ಸ್ವಾಗತಕ್ಕಾಗಿ ಇಂದು ಸಂಜೆ ಪಾಟ್ನಾದಲ್ಲಿ ಸೇರಿದ ಸಾರ್ವಜನಿಕ ಸಭೆಯ ಮುಖ್ಯ ಸಂಗತಿಗಳು ಇವು:

ಪಾಟ್ನಾದ ಜನರು ಹೃತ್ಪೂರ್ವಕವಾಗಿ ಏರ್ಪಡಿಸಿದ ಅಭೂತಪೂರ್ವ ಸ್ವಾಗತ ಸಮಾರಂಭ.

ಎಲ್ಲ ವರ್ಗದ ಜನರ ಕಾಣಿಕೆಯೂ ಸೇರಿದ ನಿಧಿ.

ಈ ಪಟ್ಟಣದಲ್ಲಿ ಸಾಮಾನ್ಯವಾಗಿ ಎಂದೂ ಸೇರದಿದ್ದ ಜನನೆರವಿ. ಒಳ್ಳೇ ವಿಮರ್ಶಾತ್ಮಕ ಮತ್ತು ವಿವೇಚನಾತ್ಮಕ ಭಾಷಣವನ್ನು ಆಲಿಸಲು ಜನರ ಏಕಾಗ್ರತೆ.

ಕಾಂಗ್ರೆಸ್ ಧೋರಣೆಯ ವಿಷಯದಲ್ಲಿ ಕಾಂಗ್ರೆಸ್ ಮುಖ್ಯಸ್ಥರ ಮೇಲೆ ಸಾಮ್ಯವಾದೀ ಮುಂದಾಳು ಎಸೆದ ಬಹಿರಂಗ ಟೀಕೆಯ ಸ್ನೇಹಮಯ, ಆದರೆ ಉಗ್ರ ಅಣು ಬಾಂಬು.

ಕಾಂಗ್ರೆಸ್ ಬಲಪಕ್ಷದ ಕೆಲವೊಂದು ಜನರ ಅಯೋಗ್ಯ ವರ್ತತೆಯನ್ನು ಸಹಿಸಿಯೂ ಕಾಂಗ್ರೆಸ್ಸಿನ ಒಕ್ಕಟ್ಟನ್ನು ಕಾಯುವುದಾಗಿ ಸಾಮ್ಯವಾದೀ ಮುಂದಾಳಿನ ಭರವಸೆ.

ಇಂದಿನ ಹೋರಾಟದ ಸಿದ್ಧತೆಯೆಂದರೆ ಮದ್ದು, ಗುಂಡು, ಮತ್ತು ಪ್ರಾಣಾರ್ಪಣೆ; ಕಾಲೋಚಿತವಲ್ಲದ ಸೆರೆಮನೆಯ ವಾಸವನ್ನು ಸಮರ್ಥಿಸುವ ಘಟನಾತ್ಮಕ ಕಾರ್ಯಕ್ರಮವಲ್ಲ ಎಂಬ ಸಂದೇಶ.

ದಿಲ್ಲಿಯಲ್ಲಿ ರಾಜಪ್ರತಿನಿಧಿ ಪ್ರಜಾಪ್ರತಿನಿಧಿಗಳಲ್ಲಿ ನಡೆಯುತ್ತಿರುವ ಮಾತು ಕತೆಗಳಿಗೆ ಮಹತ್ವ ಕೊಡಲು, ಅವುಗಳ ಫಲಿತಾಂಶದ ಕಡೆಗೆ ಗಮನಕೊಡಲು. ಅಸಮ್ಮತಿ ಕಾರ್ಯದ ಪ್ರಗತಿಯ ಮಾಸಿಕ ಇಲ್ಲವೇ ತ್ರೈಮಾಸಿಕ ಪರಶೀಲನೆಗೆ ಅವಕಾಶವುಳ್ಳ ಸಂಘಟನಾತ್ಮಕ ಮತ್ತು ಶಾಶ್ವತಕಾರ್ಯಕ್ಕಾಗಿ ಒತ್ತಾಯ.

ಪ್ರಾಂತದ ಮುಖ್ಯ ಮಂತ್ರಿಗಳ ಅಧ್ಯಕ್ಷತೆಯಲ್ಲಿ ಸೇರಿದ ಸಭೆಯಲ್ಲಿ ಕ್ರಾಂತಿಕಾರಕ ಅಭಿಪ್ರಾಯಗಳನ್ನು ಧೈರ್ಯದಿಂದ, ಸ್ಪಷ್ಟವಾಗಿ ಪ್ರಕಟಿಸಿದ್ದು.

ಈ ಸಭೆ, ಈ ಸಂದರ್ಭಕ್ಕಾಗಿಯೇ ಶ್ರೀ. ದಿನಕರರಿಂದ ರಚಿತವಾದ ರೋಮಾಂಚಕಾರಿ ಕವನವೊಂದರಿಂದ ಮೊದಲಾಯಿತು. ಆಮೇಲೆ ೧೯೪೨ರ ಆಗಸ್ಟ್ ಆಂದೋಲನದ ಘಟನೆಗಳನ್ನು ಬಣ್ಣಿಸುವ ಕೆಲವು ಉತ್ಸಾಹಕಾರಕ ಗೀತಗಳಾದುವು. ಅನೇಕ ಸಂಘ-ಸಂಸ್ಥೆಗಳ ಪರವಾಗಿ ಮಾನಪತ್ರ ಮತ್ತು ನಿಧಿಯ ಅರ್ಪಣೆಯಾದಮೇಲೆ, ಅಚ್ಚುಮೆಚ್ಚಿನ ಮುಂದಾಳನ್ನು ಜನತೆಯ ಪರವಾಗಿ ಸ್ವಾಗತಿಸಲು ಮುಖ್ಯ ಮಂತ್ರಿ ಶ್ರೀಕೃಷ್ಣಸಿಂಹರು ವೇದಿಕೆಯನ್ನೇರಿದರು.

ತಲೆಯಮೇಲೆ ಬೆಳ್ಳಗಿನ ಗಾಂಧೀ ಟೊಪ್ಪಿಗೆಯನ್ನೂ ಖಾದೀ ಸಮವಸ್ತ್ರವನ್ನೂ ಧರಿಸಿದ ಜಯಪ್ರಕಾಶರು ನಡುನಡುವೆ ಸ್ವಲ್ಪಸ್ವಲ್ಪವಾಗಿ ನೀರನ್ನು ಹೀರಿಕೊಳ್ಳುತ್ತ ಸುಮಾರು ಒಂದು ಗಂಟೆಯವರೆಗೆ ಮಾತನಾಡಿದರು. ಜನಜಂಗುಳಿ ಕುತೂಹಲಿಯಾಗಿ, ಆದರೆ ಶಾಂತವಾಗಿ ಕುಳಿತಿದ್ದಿತು. ೧೯೪೨ನೇ ಆಗಸ್ಟಿನಲ್ಲಿ ನಡೆದ ಮಹತ್ವದ ಘಟನೆಗಳನ್ನು ನೆನೆಯುತ್ತ ಜಯಪ್ರಕಾಶರು ಹುತಾತ್ಮರಿಗೆ ವಂದನೆಗಳನ್ನರ್ಪಿಸಿದರು ದಿಲ್ಲಿಯಲ್ಲಿ ನಡೆಯುತ್ತಿರುವ ಸದ್ಯದ ಮಾತುಕತೆಗಳ ಕಡೆಗೆ ಹೊರಳುತ್ತ, ಹಿಂದೆ ನಡೆದ ಗಾಂಧೀ ಇರ್ವಿನ್ ಮಾತುಕತೆಯನ್ನೂ ದುಂಡುಮೇಜಿನ ಪರಿಷತ್ತಿನ ನಂತರದ ಘಟನೆಗಳನ್ನೂ ನೆನಪು ಕೊಟ್ಟು ಮುಂದೆ ಒದಗಬಹುದಾದ ಪರಿಸ್ಥಿತಿಯನ್ನು ಎದುರಿಸಲು ಸಿದ್ಧರಾಗಬೇಕೆಂದು ಕೇಳಿಕೊಂಡರು. ಸಂಜೆ ಆರುವರೆ ಗಂಟೆಗೆ ಆರಂಭವಾದ ಸಭೆ ರಾತ್ರಿ ಒಂಬತ್ತುವರೆ ವರೆಗೆ ನಡೆದು 'ಜಯಪ್ರಕಾಶರಿಗೆ ಜಯವಾಗಲಿ', 'ಕ್ರಾಂತಿಗೆ ಜಯವಾಗಲಿ', 'ಮಹಾತ್ಮಾ ಗಾಂಧಿಗೆ ಜಯವಾಗಲಿ' ಎಂಬ ಮೊಳಗಿನೊಂದಿಗೆ ಕೊನೆಗಂಡಿತು.

ಜಯಪ್ರಕಾಶರು ಮಾತಾಡುವುದಕ್ಕಾಗಿ ಎದ್ದುನಿಂತೊಡನೆ ಆ ವಿಶಾಲವಾದ ಜನಸಮೂಹವು ಪ್ರಚಂಡ ಚಪ್ಪಾಳೆಗಳಿಂದ ಅವರನ್ನು ಸ್ವಾಗತಿಸಿತು. ಆ ಮಹಾ ಸ್ವಾಗತವನ್ನೂ ಜನತೆಯ ಅಪೂರ್ವ ಉತ್ಸಾಹವನ್ನೂ ಕಂಡು ಅವರ ಆನಂದಕ್ಕೆ ಮೇರೆ ಉಳಿಯಲಿಲ್ಲ. ಜನತೆ ನನಗೆ ತೋರಿಸಿದ ಈ ಗೌರವ, ಆಗಸ್ಟ್ ಕ್ರಾಂತಿಗೆ ತೋರಿಸಿದ ಗೌರವವೆಂಬುದನ್ನೂ ತನಗೆ ತೋರಿಸಿದ ಗೌರವ

ವಲ್ಲವೆಂಬುದನ್ನೂ ಅವರು ವ್ಯಕ್ತಪಡಿಸಿದರು. ತನ್ನ ಬಿಡುಗಡೆಯಾದಮೇಲೆ ತಾನು ದೇಶದ ಸ್ವಾತಂತ್ರ್ಯ ಸಂಗ್ರಾಮವನ್ನು ಸಾಗಿಸುವುದು ಯಾರ ಬೆಂಬಲ ದಿಂದ, ಹೇಗೆ, ಎಂದು ಸೆರೆಮನೆಯಲ್ಲಿ ಯೋಚಿಸುತ್ತಿದ್ದುದಾಗಿ ಅವರು ಹೇಳಿದರು. ಆದರೆ ಎಲ್ಲೆಲ್ಲಿಯೂ ಉಕ್ಕಿ ಬರುತ್ತಲಿರುವ ಉತ್ಸಾಹವು ತನ್ನ ಸಂದೇಹವನ್ನು ನಿವಾರಿಸಿತೆಂದೂ ಸ್ವಾತಂತ್ರ್ಯ ಸಂಗ್ರಾಮವನ್ನು ಮುಂದು ವರಿಸಲು ಜನತೆ ಸದಾ ಸಿದ್ಧವಿದೆಯೆಂಬುದು ತನಗೆ ಖಂಡಿತವಾಯಿತೆಂದೂ ಅವರು ಸಾರಿದರು.

ಜಯಪ್ರಕಾಶರು ಜನತೆಯನ್ನು ಉದ್ದೇಶಿಸಿ ದೃಢವಾದ, ನಿರ್ಧಾರದ ಧ್ವನಿಯಲ್ಲಿ ಹೀಗೆ ಹೇಳಿದರು—"ಇಂದು ದಿಲ್ಲಿಯಲ್ಲಿ ನಡೆಯುತ್ತಿರುವ ಮಾತು ಕತೆಗಳು ವಿಫಲವಾದರೆ ೧೯೪೨ರ ರಂತೆ ಈಗಲೂ ಕಾಂಗ್ರೆಸ್ಸು ಹೋರಾಡಲೇ ಬೇಕಾಗುವುದು. ಆದರೆ ಕಾಂಗ್ರೆಸ್ಸು ಯಾವ ಸಿದ್ಧತೆಯನ್ನೂ ಮಾಡಲಿಲ್ಲ. ಸರಕಾರವಾದರೋ ಎಲ್ಲ ಬಗೆಯ ಮುನ್ನೆಚ್ಚರವನ್ನೂ ತೆಗೆದುಕೊಂಡಿದೆ. ಕಾಂಗ್ರೆಸ್ ಮುಂದಾಳುಗಳ ಹೆಸರಿನ ಪಟ್ಟಿ ಈಗಾಗಲೇ ಸಿದ್ಧವಾಗಿದೆ. ಪ್ರತಿ ಯೊಂದು ಪೋಲೀಸ್‌ಚಾವಡಿಯಲ್ಲಿಯೂ ಮದ್ದು ಗುಂಡು, ರೇಡಿಯೋ ಗಳನ್ನು ಇಟ್ಟಿದ್ದಾರೆ. ಎಂದಮೇಲೆ ನಾವಾದರೂ ಏಕೆ ಸಿದ್ಧತೆ ಮಾಡಿಕೊಳ್ಳ ಬಾರದು? ನಾವು ತೆಪ್ಪಗೆ ಕುಳಿತುಕೊಂಡು ಇಂಥ ಸುಸಂಧಿಯನ್ನು ಕಳೆದು ಕೊಳ್ಳುವುದೇಕೆ?"

ಅವರು ಆಗಸ್ಟ್ ಆಂದೋಲನವನ್ನು ವಿವರಿಸುತ್ತ ಜಮ್‌ಶೇಟ್‌ಪುರ ದಲ್ಲಿ ಪೋಲೀಸರು ಸಂಪು ಹೂಡಿದ ಅತ್ಯಂತ ಮಹತ್ವದ ಒಂದು ಘಟನೆ ಯನ್ನು ಹೇಳಿದರು.–ಅಧಿಕಾರಿಗಳೆಲ್ಲ ಭಯಗ್ರಸ್ತರಾಗಿ ಪರಿಸ್ಥಿತಿಯನ್ನು ಹಿಡಿತ ದಲ್ಲಿಡಲು ಬ್ರಿಟಿಷ್ ಸೈನಿಕರನ್ನು ಬರಿಸಿದರು. ಕೆಲವು ಜನರನ್ನು ಸೆರೆಹಿಡಿ ದರು. ಆದರೆ ಯಾವ ಸುದ್ದಿಯೂ ಹರಡದಂತೆ, ಈ ಘಟನೆಗೆ ಮಹತ್ವ ಬರ ದಂತೆ ದಕ್ಷತೆ ತೆಗೆದುಕೊಂಡರು. ಪೋಲೀಸರಂತಹ ಸರಕಾರನಿಷ್ಠ ಹಾಗೂ ಪೀಡಕ ಅಧಿಕಾರವರ್ಗವು ಕೂಡ ದೇಶದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ನೆರ ವಾದುದು ಹೆಮ್ಮೆಯ ವಿಷಯವೆಂದರವರು. ಅಗತ್ಯ ತೋರಿದರೆ ಎಲ್ಲ ಕಡೆಯ ಪೋಲೀಸರೂ ಹೀಗೆಯೇ ಮಾಡಬೇಕೆಂದು ಅವರು ಕೋರಿದರು.

ಆಗಸ್ಟ್ ವೀರರ ವಿಷಯದಲ್ಲಿ ಕಾಂಗ್ರೆಸ್ ವರಿಷ್ಠರ ಧೋರಣೆಯನ್ನು ಕುರಿತು ಜಯಪ್ರಕಾಶರು ಹೀಗೆ ಹೇಳಿದರು—“ಆಗಸ್ಟ್ ವೀರರ ಕೃತಿಗಳಲ್ಲಿ ಕಾಂಗ್ರೆಸ್ ಮುಂದಾಳುಗಳು ತಪ್ಪು ಹುಡುಕುತ್ತಲಿದ್ದಾರೆ. ಅವರು ತೋರಿಸುತ್ತಿರುವ ತಪ್ಪುಗಳನ್ನೇನೋ ನಾವು ತಿದ್ದಿಕೊಳ್ಳಲು ಯತ್ನಿಸುತ್ತಲಿದ್ದೇವೆ. ಆದರೆ ತಮ್ಮ ತಪ್ಪುಗಳಿಗಾಗಿ ಮುಂದಾಳುಗಳೂ ಚೆನ್ನಾಗಿ ಯೋಚಿಸಬೇಕಾದೀತು. ೧೯೪೨ರಲ್ಲಿ ನಮ್ಮ ದೇಶದಲ್ಲಿ ನಡೆದಂತಹ ಘಟನೆ ಎಲ್ಲ ದೇಶಗಳಲ್ಲಿಯೂ ಯಾವಾಗಲೂ ನಡೆಯುವಂತಹದಲ್ಲ ಇದು ಬಹಳ ಅಪರೂಪದ ಘಟನೆ. ಆದರೆ ನಾವು ಇದರ ಪೂರ್ಣ ಪ್ರಯೋಜನ ಪಡೆಯಲಿಲ್ಲ. ಬ್ರಿಟಿಷರು ಇಲ್ಲಿಂದ ತೊಲಗುವಂತೆ ಮಾಡಬೇಕಾಗಿದ್ದರೆ, ನಾವು ಆ ಗುರಿಯನ್ನು ಮುಟ್ಟಲು ಸಾಧ್ಯವಾಗುವಂತೆ ನಮ್ಮ ಮುಂದಾಳುಗಳು ನಿರ್ದಿಷ್ಟವಾದ ಒಂದು ಕಾರ್ಯಕ್ರಮವನ್ನು ಗೊತ್ತುಮಾಡಬೇಕಾಗಿದ್ದಿತು. ಬ್ರಿಟಿಷರಿಗೆ ನಾವು ತೊಲಗಲು ಹೇಳಿದ್ದೇನೋ ನಿಜ. ಆದರೆ ಆ ಬಗೆಗೆ ನಮ್ಮಲ್ಲಿ ಕಾರ್ಯಕ್ರಮವೇನೂ ಇರಲಿಲ್ಲ. ಪಂ. ಜವಾಹರಲಾಲರ ಹೊರತು ಯಾವ ಮುಂದಾಳೂ ಈ ಸಮಸ್ಯೆಯ ಕಡೆಗೆ ಗಮನ ಕೊಡಲಿಲ್ಲ—ಇನು ತಪ್ಪೆಂಬುದನ್ನೂ ಒಪ್ಪಿಕೊಳ್ಳಲಿಲ್ಲ. ಮತ್ತು ಕಾಂಗ್ರೆಸ್ಸಿನ ಎಲ್ಲ ಮುಂದಾಳುಗಳನ್ನೂ ಗಾಂಧೀಜಿಗೇ ಒಪ್ಪಿಸಿರುವುದಾಗಿ ಅವರು ತಮ್ಮನ್ನು ತಾವೇ ಸಮರ್ಥಿಸಿಕೊಳ್ಳಲು ಯತ್ನಿಸಿದರು. ನಮಗೆ ದಾರಿ ತೋರಿಸುವುದು ಅವರ ಕರ್ತವ್ಯವಾಗಿದ್ದಿತು ಅವರ ಸಮರ್ಥನೆಯಲ್ಲಿ ಹುರುಳಿಲ್ಲ ಕ್ರಾಂತಿಕಾಲದಲ್ಲಿ ಇಂಥ ಧೋರಣೆ ಸರಿಯಾದುದೆ? ಇದು ಜಾಣತನದ ಕೃತಿಯೊ? ಅವರು ಒಂದು ಕಾರ್ಯಕ್ರಮವನ್ನು ಗೊತ್ತುಮಾಡಬೇಕಾಗಿದ್ದಿತು ಕಾಂಗ್ರೆಸ್ ವರಿಷ್ಠರಿಗೆ ಎಲ್ಲವೂ ಗೊತ್ತಿದೆಯೆಂಬ, ನಾವು ಹೋರಾಟದ ಯೋಜನೆಯನ್ನಾಗಲಿ ಸಿದ್ಧತೆಯನ್ನಾಗಲಿ ಮಾಡುವ ಅಗತ್ಯವಿರಲಿಲ್ಲವೆಂಬ ವಾದವನ್ನು ನಾನು ಒಪ್ಪಲಾರೆ.

“ಆಗಸ್ಟ್ ಆಂದೋಲನದಲ್ಲಿ ಸುಮಾರು ೪೦ ಸಾವಿರ ಜನರು ಪ್ರಾಣಕ್ಕೆರವಾದರು, ಮಾನವ ಜೀವಿಗಳ ಈ ಮಹಾ ಯಜ್ಞದ ಹೊಣೆಯೆಲ್ಲ ನಮ್ಮ ಮುಂದಾಳುಗಳದು. ಈ ಹೋರಾಟವನ್ನು ಹೇಗೆ ನಡೆಸಬೇಕೆಂಬುದು ಜನತೆಗೆ ಗೊತ್ತಿರಲಿಲ್ಲ. ಜನರು ಈ ವಿಷಯದಲ್ಲಿ ಸಂಪೂರ್ಣ ಅಜ್ಞಾನಿಗಳಾಗಿದ್ದರು. ಈಗಲಾದರೋ ಈ ಮುಂದಾಳುಗಳು ಜನರಿಗೆ ದಾರಿದೋರಿದವರ ತಪ್ಪನ್ನು

ಮಾತ್ರ ಹುಡುಕುತ್ತಾರೆ. ದಾರಿ ತೋರಿಸುವ ಪೂರ್ಣವಾದ ಕರ್ತವ್ಯ ಅವರ ದಾಗಿದ್ದಿತು."

ಶ್ರೀ. ಜಯಪ್ರಕಾಶರು ಹೇಳಿದ್ದು ಇನ್ನೂ ಇದೆ—"ನಾವು ಅಹಿಂಸೆ ಯನ್ನು ತಿರಸ್ಕರಿಸಿದೆವೆಂದು ನಮ್ಮ ಮೇಲೆ ಆಪಾದನೆ ಇದೆ. ಮೌಲಾನಾ ಅಜಾದರಿಗೆ ಅಹಿಂಸೆಯಲ್ಲಿ ಎಷ್ಟು ವಿಶ್ವಾಸವಿದೆಯೋ ಅಷ್ಟೇ ನನಗೂ ಇದೆ, ನನಗೆ ಹಿಂಸೆಯಲ್ಲಿ ಎಷ್ಟು ವಿಶ್ವಾಸವಿದೆಯೋ ಅಷ್ಟೇ ಮೌಲಾನಾ ಅಜಾದ ರಿಗೂ ಇದೆ. ಮಹಾತ್ಮರ ಅಹಿಂಸೆಯ ಅಚಲ ಶ್ರದ್ಧೆಯನ್ನು ನಾನು ಬಲ್ಲೆ. ಅದಕ್ಕೆ ನಾನು ತಲೆಬಾಗಿಸಲೇಬೇಕು. ಆದರೆ ಅವರಷ್ಟು ಆತ್ಮಬಲವಿಲ್ಲದ ನಾನು ಮದ್ದುಗುಂಡುಗಳಿಂದ ಹೋರಾಡುವುದೇ ಸುಲಭವೆಂದು ತಿಳಿದರೆ ತಪ್ಪೆ ? ಕಾಂಗ್ರೆಸ್ಸಿಗೆ ಬೇಕಾದುದಾದರೂ ಏನು ? ಬರಿಯ ಸ್ವಲ್ಪವೇ ಅಧಿಕಾರ ವುಳ್ಳ ರಾಷ್ಟ್ರೀಯ ಸರಕಾರ ಸ್ಥಾಪಿತವಾದರೂ ಸಾಕು, ತಾನು ಜಪಾನೀಯರ ವಿರುದ್ಧವಾಗಿ ಮದ್ದು ಗುಂಡುಗಳ ಮೂಲಕ ಹೋರಾಡುವುದಾಗಿ ಮೌಲಾನಾ ಅಜಾದರೇ ಒಮ್ಮೆ ಹೇಳಲಿಲ್ಲವೆ ? ಜಪಾನೀಯರ ಪ್ರಾಣ ಮಾನವ ಪ್ರಾಣ ವಲ್ಲವೆ ? ಬ್ರಿಟಿಷರ ವಿರುದ್ಧ ಶಸ್ತ್ರವನ್ನೆತ್ತುವುದರಿಂದ ಅಹಿಂಸಾಭಂಗವಾಗುವು ದಾದರೆ ಅವರ ಪ್ರಾಣಗಳು ಮಾತ್ರ ಮಾನವ ಪ್ರಾಣಗಳೆಂದು ಅರ್ಥವೆ"?

"೧೯೪೨ ರಿಂದ ಈಚೆಗೆ ಸ್ವತಃ ಕಾಂಗ್ರೆಸ್ಸೇ ಎರಡು ಸಲ ಅಹಿಂಸಾ ಭಂಗಕ್ಕೆ ಸಿದ್ಧವಾಗಿದ್ದಿತು ನನ್ನ ಅಭಿಪ್ರಾಯದ ಮೇರೆಗೆ ಅಹಿಂಸೆಯು ಇಂದು ಬರಿಯ ಅಧಿಕಾರವನ್ನು ಕೈವಶಪಡಿಸಿಕೊಳ್ಳುವ ಸಾಧನವಾಗಿದೆ."

ಶ್ರೀ ಜಯಪ್ರಕಾಶರು ಮುಂದುವರಿಯುತ್ತ ಹೀಗೆ ಹೇಳಿದರು–"ಕಾಂಗ್ರೆ ಸ್ಸಿನಲ್ಲಿ ಬಿಸಿ ನೆತ್ತರಿನ ತರುಣರನ್ನು ಸೇರಿಸಿಕೊಳ್ಳಬೇಕೆಂದು ಡಾ. ರಾಜೇಂದ್ರ ಪ್ರಸಾದರು ಹೊರಡಿಸಿದ ಪ್ರಕಟನೆಯನ್ನು ಓದಿ ನನಗೆ ಸಂತೋಷವಾಯಿತು. ಆದರೆ ಇದು ನಡತೆಯಲ್ಲಿ ಎಷ್ಟರ ಮಟ್ಟಿಗೆ ಬಂದೀತೆಂದು ಮಾತ್ರ ಹೇಳಲಾರೆ. ತರುಣರಿಲ್ಲದ ಯಾವ ಸಂಘಟನೆಯೂ ಬದುಕಲಾರದು. ಹೊಸ ನೆತ್ತರನ್ನು ಸೇರಿಸಿಕೊಳ್ಳದಿರುವ ಈ ಧೋರಣೆಯನ್ನೇ ಕಾಂಗ್ರೆಸ್ ಅನುಸರಿಸಿದರೆ ಅದಕ್ಕೆ ಸಾವು ದೂರವಿಲ್ಲ."

ಜಯಪ್ರಕಾಶರ ಭಾಷಣ ಅಲ್ಲಿಗೇ ಮುಗಿಯಲಿಲ್ಲ. ಸ್ವಾತಂತ್ರ್ಯ ದೊರೆಯುವವರೆಗೆ ಕಾಂಗ್ರೆಸ್ಸಿನ ಎಲ್ಲ ಪಕ್ಷಗಳಲ್ಲಿ ಒಕ್ಕಟ್ಟು ಉಳಿಯಬೇ

ಕೆನ್ನುವ ಪಕ್ಷಕ್ಕೆ ತಾನು ಸೇರಿದವನೆಂದು ಅವರು ಹೇಳಿದರು. ಎಷ್ಟೋಸಲ ಅವರ ಈ ಧೋರಣೆ ಅವರಿಗೆ ಬಹಳ ತೊಂದರೆ ಕೊಟ್ಟಿತಂತೆ. ಇವರ ಎಷ್ಟೋ ಸಂಗಡಿಗರಿಗೆ ಈ ಧೋರಣೆ ಒಗ್ಗಿರಲಿಲ್ಲ. ಆದುದರಿಂದ ಇವರು ಉಗ್ರ ಟೀಕೆಗೆ ಒಳಗಾಗಬೇಕಾಯಿತು. ಆದರೆ ಕಾಂಗ್ರೆಸ್ಸಿನ ಐಕ್ಯವೇ ಮುಖ್ಯ ಗುರಿಯಾದುದರಿಂದ ಅವರ ಪಕ್ಷವು ಇದೆಲ್ಲವನ್ನೂ ತಾಳ್ಮೆಯಿಂದ ಸಹಿಸಿತು. ಈ ಪಕ್ಷವು ಅವಕಾಶ ದೊರೆತಾಗಲೆಲ್ಲ ತನ್ನ ಉದ್ದೇಶಸಾಧನೆಗಾಗಿ ಸಾಧ್ಯವಿದ್ದ ಸ್ವಾರ್ಥತ್ಯಾಗವನ್ನೂ ಮಾಡಿತು. ಈ ಧೋರಣೆ ಕುತ್ಸಿತ ಟೀಕೆಗೆ ಗುರಿಯಾದುದಲ್ಲದೆ ಕಾಂಗ್ರೆಸ್ಸಿನಿಂದ ಅವರ ಪಕ್ಷವನ್ನು ಹೊರದೂಡಲು ಹಲವು ಪ್ರಯತ್ನಗಳೂ ನಡೆದುವು. ಆಗಸ್ಟ್‌ವೀರರು ವಹಿಸಿದ ಪ್ರತಾಪಯುಕ್ತ ಪಾತ್ರವನ್ನು ಜಯಪ್ರಕಾಶರು ಮರಳಿ ಸ್ಮರಿಸಿದ್ದಲ್ಲದೆ ಭಾರತದ ಧ್ಯೇಯವನ್ನೂ ಮನೋಭಾವವನ್ನೂ ಬದಲಿಸಲು ಈ ವೀರರೇ ಕಾರಣರೆಂಬುದನ್ನು ಸ್ಪಷ್ಟಪಡಿಸಿದರು.

೧೯೪೨ ರಲ್ಲಿ ಕಾಂಗ್ರೆಸ್ ಮುಂದಾಳುಗಳು ಬ್ರಿಟಿಷರಿಗೆ ತೊಲಗಲು ಹೇಳಿದರು. ಆದರೆ ಬ್ರಿಟಿಷರು ಹಾಗೆ ಮಾಡಲಿಲ್ಲ. ಮುಂದಾಳುಗಳು ಈಗ ಸ್ವರಾಜ್ಯ ಬಂದೇಬಿಟ್ಟಿತೆನ್ನುತ್ತಾರೆ. ಆದರೆ, ಅದೆಂತಹ ಸ್ವರಾಜ್ಯವೆಂಬುದನ್ನು ಹೇಳುವುದು ಸಾಧ್ಯವಿಲ್ಲ. ಸ್ವಾತಂತ್ರ್ಯ ಗಳಿಸುವುದು ಸಾಧ್ಯವೆ?—ಎಂದು ಗೆಳೆಯರು ಕೇಳುತ್ತಲಿದ್ದಾರೆ ದಿಲ್ಲಿಯ ಇಂದಿನ ಮಾತುಕತೆಗಳಿಗೂ ಹಿಂದಿನ ದುಂಡುಮೇಜಿನ ಪರಿಷತ್ತಿಗೂ ಬಹಳ ಅಂತರವಿದೆಯೆಂಬುದನ್ನು ಮರೆಯಬಾರದು. ಸಂಧಾನದ ಈ ಮಾತುಕತೆ ೧೯೪೨ ರ ಆಂದೋಲನದ ಹಾಗೂ ಅಂತರ್‌ರಾಷ್ಟ್ರೀಯ ಪರಿಸ್ಥಿತಿಯ ಪರಿಣಾಮವೆಂಬುದನ್ನು ಸ್ಪಷ್ಟವಾಗಿ ತಿಳಿದುಕೊಳ್ಳಬೇಕು. ಅಜಾದ್‌ಹಿಂದ್ ಸೈನಿಕರ ಯಶಸ್ಸೂ ಈ ಸಂಧಾನಕ್ಕೆ ಬಹಳ ಮಟ್ಟಿಗೆ ಕಾರಣವಾಗಿದೆ. ಏಕೆಂದರೆ ಈ ಸೈನ್ಯ ಸಂಘಟನೆಯೇ ಪ್ರಭುತ್ವದ ಭೂ, ಜಲ, ವಾಯುಪಡೆಗಳ ಮನೋಭಾವದಲ್ಲಿ ತೀವ್ರ ಬದಲಾವಣೆಯನ್ನುಂಟುಮಾಡಿ, ಬ್ರಿಟಿಷ್ ಸಾಮ್ರಾಜ್ಯದ ಬೇರುಗಳನ್ನು ಸಡಲಿಸಿದ್ದು. ಮೂವರು ಬ್ರಿಟಿಷ್ ಮಂತ್ರಿಗಳು ಹಿಂದುಸ್ಥಾನಕ್ಕೆ ಬರುವಂತೆ ಮಾಡಿದ್ದು ಭಾರತದ ಸ್ವಾತಂತ್ರ್ಯ ಸಂಗ್ರಾಮದ ಉಬ್ಬರದ, ಕ್ರಾಂತಿ ಕಿಚ್ಚಿನ ಜ್ವಾಲೆ.

ಆದರೆ ಭಾರತವು ತಕ್ಕಷ್ಟು ಬಲಶಾಲಿಯಾಗದಿದ್ದುದರಿಂದ ಸಂಪೂರ್ಣ ಸ್ವಾತಂತ್ರ್ಯ ಮಾತ್ರ ಸಾಧ್ಯವಾಗಲಿಲ್ಲ. ಕಾಂಗ್ರೆಸ್ಸು ಬಿಹಾರಿನಲ್ಲಿ ಮುಸಲ್ಮಾ

ನರ ನಾಲ್ವತ್ತು ಸ್ಥಳಗಳಲ್ಲಿ ಮೂವತ್ತನ್ನಾದರೂ ಪಡೆದಿದ್ದರೆ ನಮ್ಮ ಮುಂದಾಳುಗಳ ಸ್ವಾತಂತ್ರ್ಯದ ಪಾತ್ರತೆ ಸಿದ್ಧವಾಗುತಿದ್ದಿತು. ನಮ್ಮ ಮುಂದಾಳುಗಳು, ಘಟನಾತ್ಮಕವಾಗಿ ಹೋರಾಡಿ ಸಂಪೂರ್ಣ ಸ್ವಾತಂತ್ರ್ಯವನ್ನು ದೊರಕಿಸಿದ ಐರ್ಲ್ಂಡಿನ ಮುಂದಾಳು ಡಿವೆಲರಾರವರನ್ನು ಅನುಕರಿಸುವಂತೆ ತೋರುತ್ತದೆ. ಆದರೆ ಐರ್ಲೆಂಡಿನೊಡನೆ ಅಲ್‌ಸ್ಟರನ್ನು ಸಮಾವೇಶ ಮಾಡಿದ ಹೊರತು ಡಿವೆಲರಾರವರು ಐರ್ಲಂಡಿಗೆ ಸಂಪೂರ್ಣ ಸ್ವಾತಂತ್ರ್ಯವನ್ನು ದೊರಕಿಸಿದ ಹಾಗೆ ಆಗುವುದಿಲ್ಲವೆಂಬುದನ್ನು ಮರೆಯಲಾಗದು.

ಜಯಪ್ರಕಾಶರು ದಿಲ್ಲಿಯಲ್ಲಿದ್ದಾಗ ಸಂಧಾನದ ಮಾತುಕತೆಗಳಲ್ಲಿ ಇಣಿಕಿಕ್ಕಲು ಬಯಸಲಿಲ್ಲವಾದ್ದರಿಂದ ಅದು ಯಶಸ್ವಿಯಾಗಬಹುದೋ ಇಲ್ಲವೋ ಎಂಬುದನ್ನು ಹೇಳಲಾರದವರಾದರು. ಕಾಂಗ್ರೆಸ್ ಮುಂದಾಳುಗಳೇನೋ ತುಂಬಾ ನೆಚ್ಚಿಕೊಂಡಿದ್ದರು. ಆದರೆ ಇಷ್ಟರಿಂದಲೇ ಸಂಧಾನವು ಯಶಸ್ವಿಯಾಗುವುದೆಂದು ಖಚಿತವಾಗಿ ಹೇಳುವುದು ಸಾಧ್ಯವಿಲ್ಲ. ಹಿಂದೆ ಇಂಥ ಎಷ್ಟೋ ಸಂಧಾನಗಳು ಮುರಿದುಬಿದ್ದುದುಂಟು.

ಆದುದರಿಂದ ಕೊನೆಯ ಹೋರಾಟಕ್ಕಾಗಿ ಸಿದ್ಧತೆ ಮಾಡಬೇಕಾದುದು ಅನಿವಾರ್ಯ. ಸಂಧಾನದ ಯಶಾಪಯಶಗಳನ್ನು ನಿರೀಕ್ಷಿಸುವುದು ಪ್ರಯೋಜನಕರವಲ್ಲ. ಭಾರತದಲ್ಲಿ ಬ್ರಿಟಿಷ್ ಪ್ರಭುತ್ವ ಇನ್ನೂ ಭದ್ರವಾಗಿದೆಯೆಂಬುದು ಮುಖ್ಯವಾದ ಮಾತು. ಯೂನಿಯನ್ ಬಾವುಟ ಇಲ್ಲಿ ಇನ್ನೂ ಹಾರಾಡುತ್ತಿದೆ. ಅದನ್ನು ತುಂಡು ತುಂಡು ಮಾಡಿ ಎಸೆದು ಅದರ ಸ್ಥಳದಲ್ಲಿ ಸ್ವತಂತ್ರ ಭಾರತದ ಬಾವುಟವನ್ನು ಏರಿಸುವುದು ನಮ್ಮ ಮುಂದಾಳುಗಳ ಕರ್ತವ್ಯವಾಗಿದ್ದಿತು.

೧೯೪೨ ರ ಕ್ರಾಂತಿ ಭಾರತದ ಜೀವನದಲ್ಲಿ ನವಚೈತನ್ಯವನ್ನು ತುಂಬಿದೆ. ಜನರಲ್ಲಿ ಉತ್ಸಾಹ, ಧೈರ್ಯ, ಮತ್ತು ಸ್ವಾತಂತ್ರ್ಯದ ಹೆಬ್ಬಯಕೆ ವೆಗ್ಗಳವಾಗಿದ್ದಿತು. ಆದರೆ ಇಷ್ಟೇ ಸಾಕಾಗಿರಲಿಲ್ಲ. ಆಗ ನಮಗೆ ಮುಖ್ಯವಾಗಿ ಬೇಕಾಗಿದ್ದುದು ಸಂಘಟನೆ. ಸಂಘಟನೆಯ ಮಹತ್ವವನ್ನು ತೋರಿಸುವುದಕ್ಕಾಗಿ ಜಯಪ್ರಕಾಶರು ೧೯೪೨ ರ ಬಾಲಿಯಾ ಜಿಲ್ಲೆಯನ್ನು ಉದಾಹರಿಸಿದರು. ಈ ಜಿಲ್ಲೆಯಲ್ಲಿ ಕೆಲವು ದಿನಗಳವರೆಗೆ ಬ್ರಿಟಿಷ್ ಸರಕಾರದ ಯಂತ್ರವೇ ನಿಂತುಹೋಗಿದ್ದಿತು. ಜನರು ನಿಜವಾಗಿ ಸ್ವತಂತ್ರರಾಗಿದ್ದರು.

ಮತ್ತು ಜಿಲ್ಲೆಯ ಎಲ್ಲ ಅಧಿಕಾರಿಗಳು ಜನರ ಸೆರೆಯಾಳುಗಳಂತಿದ್ದರು. ಆದರೆ ಬರಿಯ ಕೆಲವು ದಿನಗಳ ನಂತರ ಮುನ್ನೂರು ಸೈನಿಕರ ಒಂದು ಚಿಕ್ಕ ದಂಡು ಬ್ರಿಟಿಷ್ ಆಡಳಿತದ ಜೀರ್ಣೋದ್ಧಾರ ಮಾಡಿದುದಲ್ಲದೆ ಅಮಾನುಷ ಅತ್ಯಾಚಾರಕ್ಕೆ ಕೈ ಹಾಕಿತು. ಮುಂದಾಳುಗಳು ಜಿಲ್ಲೆಯನ್ನೆಲ್ಲ ಸಂಚರಿಸಿ ಜನತೆಯ ಸಾಹಸ ಕೃತ್ಯಗಳನ್ನು ಕೊಂಡಾಡಿದರು. ಬಾಲಿಯಾ ಜಿಲ್ಲೆಯು ಮಾಡಿದ ಸಾಹಸವನ್ನು ಇಡಿಯ ಬಿಹಾರ್ ಪ್ರಾಂತವೇ ಮಾಡಿತು ಆದರೆ ಗಳಿಸಿದ ಶಕ್ತಿಯನ್ನು ಬಹು ದಿನಗಳವರೆಗೆ ಉಳಿಸಿಕೊಳ್ಳಲು ಜನರು ಎಲ್ಲಿಯೂ ಶಕ್ತರಾಗಲಿಲ್ಲ. ಇಂಥ ಒಂದು ಚಿಕ್ಕ ಸೈನ್ಯದ ತುಂಡಿಗೆ ಜನರು ಮಣಿದ ಕಾರಣವೇನೆಂಬುದನ್ನು ತಿಳಿದುಕೊಳ್ಳಲು ಜಯಪ್ರಕಾಶರು ಬಾಲಿಯಾ ಜಿಲ್ಲೆಯಲ್ಲಿ ಸಂಚರಿಸಬೇಕೆಂದಿದ್ದಾರೆ. ಒಮ್ಮೆ ನಡೆದ ತಪ್ಪು ತಡೆಗಳು ಇನ್ನೊಮ್ಮೆ ಆಗದಂತೆ ಜಾಗರೂಕರಾಗಿರಬೇಕು.

ಒಟ್ಟಿನಲ್ಲಿ ಇಂದು ಬೇಕಾದುದು ಸಂಘಟನೆ. ಸಭೆ, ಸಮ್ಮೇಲನ, ಪ್ರದರ್ಶನಗಳ ಕಾಲವು ಮುಗಿಯಿತು. ಒಂದಾನೊಮ್ಮೆ ಅವುಗಳ ಅವಶ್ಯಕತೆ ಇದ್ದಿತು. ಹಿಂದೆ ದೊಡ್ಡ ದೊಡ್ಡ ಸಭೆಗಳನ್ನು ಸೇರಿಸಿ ಮುಂದಾಳುಗಳು ಜನತೆಗಿತ್ತ ಸಂದೇಶ ಅವರ ಹೃದಯದಲ್ಲಿ ಮನೆಮಾಡಿದೆ. ಈಗ ಬೇಕು ಸಂಘಟನೆ—ಹೋರಾಟವನ್ನು ಯಶಸ್ವಿಯಾಗಿ ಮುಂದುವರಿಸುವ ಸಂಘಟನೆ. ಹೆಂಗುಸರು ಮತ್ತು ಗಂಡುಸರು, ತರುಣರು ಮತ್ತು ಮುದುಕರು,—ಎಲ್ಲರೂ ಒಕ್ಕೊರಲಿನಿಂದ 'ಭಾರತದಿಂದ ತೊಲಗಿರಿ' ಎಂದು ಮೊಳಗುತ್ತಿರುವಾಗ ಅದರ ಪ್ರಚಾರಕ್ಕಾಗಿ ಸಭೆ ಸೇರಿಸುವುದರಲ್ಲಿ ಅಗತ್ಯವೇನಿದೆ? "ನಮ್ಮದು ಶಾಂತಿಯ ಸಂಘಟನೆಯಾಗಲಿ. ಈ ಬಗೆಗೆ ಕಾಂಗ್ರೆಸ್ಸನ್ನು ದೂರಬೇಕಾಗಿದೆ. ಕಾಂಗ್ರೆಸ್ಸು ಕಟ್ಟಳೆಬದ್ಧ ಸಂಸ್ಥೆಯೆಂದು ಸರಕಾರವು ಸಾರಿದಂದಿನಿಂದ ಅದು ತನ್ನ ಶಕ್ತಿ ಸರ್ವಸ್ವವನ್ನೂ ಚುನಾವಣೆಯ ಹೋರಾಟಗಲ್ಲಿ ತೊಡಗಿಸಿದುದಲ್ಲದೆ ಸಂಘಟನಾತ್ಮಕ ಕೆಲಸವನ್ನು ಸಂಪೂರ್ಣ ದುರ್ಲಕ್ಷಿಸಿದೆ. ಮಹಾತ್ಮಾಜಿಯವರು ಸಂಧಾನದ ಮಾತುಕತೆ ಆರಂಭಿಸಿದರೋ ಇಲ್ಲವೋ, ಅಷ್ಟರಲ್ಲಿ ಎಲ್ಲರ ಕಣ್ಣೂ ಅತ್ತ ಕಡೆಗೇ ಹೊರಳಿಬಿಡುತ್ತವೆ."

ಜಯಪ್ರಕಾಶರು ಈ ನಡತೆಯನ್ನು ಮೆಚ್ಚಲಿಲ್ಲ. ಕಾಂಗ್ರೆಸ್ ಕಾರ್ಯಕರ್ತರೆಲ್ಲ ಸಂಘಟನೆಯ ಕೆಲಸದಲ್ಲಿ ಪೂರ್ಣವಾಗಿ ತೊಡಗಬೇಕೆಂದು ಅವರು

ಒತ್ತಿ ಹೇಳಿದರು. ಕಾಂಗ್ರೆಸ್ ಕಾರ್ಯಕಾರೀ ಸಮಿತಿಯ ನಿರ್ದಿಷ್ಟವಾದ ಒಂದು ಕಾರ್ಯಕ್ರಮವನ್ನು ಸಿದ್ಧಗೊಳಿಸಬೇಕು. ಅದು ಒಂದು ಬಲಿಷ್ಠವಾದ ಸ್ವಯಂ ಸೇವಕ ದಲವನ್ನು ನಿರ್ಮಿಸಲು ಇನ್ನೂ ಸಮರ್ಥವಾಗಲಿಲ್ಲ. ಚುನಾವಣೆ ಕೆಲಸದಲ್ಲಿ ಕೆಲವರು ಮಾತ್ರ ತೊಡಗಬೇಕು. ಉಳಿದವರು ಕೊನೆಯ ಹೋರಾಟದ ಸಿದ್ಧತೆಯಲ್ಲಿ ಆಣಿಯಾಗಲಿ.

ಜನರ ಮುಂದೆ ಮಂಡಿಸಲು ಈಗಾಗಲೇ ಸಿದ್ಧಪಡಿಸಿದ ಕಾರ್ಯಕ್ರಮವೇನೂ ಇಲ್ಲವೆಂದರವರು. ಏಕೆಂದರೆ ಮೊದಲು ಅವರು ಪರಿಸ್ಥಿತಿಯನ್ನು ಅಭ್ಯಸಿಸಬೇಕಾಗಿದೆ. ಆದರೂ ಬೇಗನೆ ಅವರು ತಮ್ಮ ಕಾರ್ಯಕ್ರಮವೊಂದನ್ನು ಜನತೆಯ ಮುಂದೆ ಇಡತಕ್ಕವರಿದ್ದಾರೆ.

## ೨

# ಮುಂಬೈಯಲ್ಲಿ ಅ. ಭಾ. ಕಾಂಗ್ರೆಸ್ ಸಮಿತಿಯಲ್ಲಿ ಭಾಷಣ [೧೯೪೬]

## ಸಂಕ್ಷಿಪ್ತ ಪತ್ರಿಕಾ ವರದಿ

ಕಾಂಗ್ರೆಸ್ ಕಾರ್ಯಕಾರೀ ಸಮಿತಿಯ ನಿರ್ಣಯವನ್ನು ಕಾಂಗ್ರೆಸ್ ಸಾಮ್ಯವಾದೀ ಮುಂದಾಳು ಶ್ರೀ ಜಯಪ್ರಕಾಶರು ಎಡಪಕ್ಷದ ಪರವಾಗಿ ವಿರೋಧಿಸುತ್ತ ಹೀಗೆ ಹೇಳಿದರು—" ಕಾಂಗ್ರೆಸ್ಸು ಭಾರತಕ್ಕೆ ಸ್ವರಾಜ್ಯವನ್ನು ತರುವುದಕ್ಕಾಗಿ ಇಷ್ಟೊಂದು ದಿನಗಳ ವರೆಗೆ ಹೋರಾಡುತ್ತ ಬಂದಿದೆ. ಬ್ರಿಟಿಷರು ಈಗ ನಮ್ಮ ಮೇಲೆ ಹೇರಿದ ಘಟನಾ ಸಮಿತಿಯಿಂದ ನಮ್ಮ ಜನತೆಗೆ ಬೇಕಾದ ಸ್ವಾತಂತ್ರ್ಯ ದೊರೆಯಲಾರದು. ಹಿಂದುಸ್ಥಾನದ ಸ್ವಾತಂತ್ರ್ಯಕ್ಕಾಗಿ ಯತ್ನಿಸುತ್ತಿರುವ ಕಾಂಗ್ರೆಸ್ಸಿನ ಉದ್ದೇಶವೂ ಸಫಲವಾಗಲಾರದು "

" ಬ್ರಿಟಿಷರ ಸಾಮ್ರಾಜ್ಯಪ್ರಭುತ್ವವನ್ನು ಭಾರತದಿಂದ ತಳ್ಳಿಬಿಡುವುದಕ್ಕಾಗಿ ೧೯೪೨ರ 'ಭಾರತದಿಂದ ತೊಲಗಿರಿ' ಆಂದೋಲನದ ಆರಂಭವಾಯಿತು ಆದರಿಂದ ಭಾರತದಲ್ಲೆಲ್ಲ ಹೊಸಶಕ್ತಿಯ ಸಂಚಾರವಾಗಿ, ಧ್ಯೇಯವನ್ನು ಸಮೀಪಿಸುತ್ತ ಬಂದಿರುವೆವಾದರೂ ನಮ್ಮ ಉದ್ದೇಶ ಮಾತ್ರ ಸಫಲ

ವಾಗಿಲ್ಲ. ದೇಶದ ಮುಂದಿರುವ ಮಹತ್ವದ ಪ್ರಶ್ನೆ ಬ್ರಿಟಿಷರನ್ನು ಭಾರತದಿಂದ ಹೊರತಳ್ಳುವುದಕ್ಕಾಗಿ ಜಾಗ್ರತವಾಗಿರುವ ಹೊಸ ಶಕ್ತಿಗಳ ಉಪಯೋಗವನ್ನು ಹೇಗೆ ಮಾಡಿಕೊಳ್ಳಬೇಕೆಂಬುದೇ ಹೊರತು ಬ್ರಿಟಿಷ್ ಸಾಮ್ರಾಜ್ಯವು ಹೇರಿದ ಘಟನಾಸಮಿತಿಯನ್ನು ಸ್ವೀಕರಿಸಬೇಕೋ ಬಾರದೋ ಎಂಬುದಲ್ಲ.

"ಬ್ರಿಟಿಷ್ ಮಂತ್ರಿಮಂಡಲದ ಪ್ರತಿನಿಧಿಗಳು ಬಂದದ್ದು ಕಾಂಗ್ರೆಸ್ಸಿಗೂ ಮುಸ್ಲಿಂ ಲೀಗಿಗೂ ಮಧ್ಯಸ್ತಿಕೆ ಮಾಡಲಿಕ್ಕೇ ಹೊರತು ಹಿಂದುಸ್ಥಾನಕ್ಕೆ ಸ್ವಾತಂತ್ರ್ಯ ಕೊಡುವುದಕ್ಕಲ್ಲ. ಹಿಂದೂ ಮುಸಲ್ಮಾನರಲ್ಲಿ ವೈಷಮ್ಯವನ್ನು ಹುಟ್ಟಿಸಿದವರು ಬ್ರಿಟಿಷರು. ಅವರು ಅದನ್ನು ಇನ್ನಷ್ಟು ಹೆಚ್ಚಿಸಲು ಯತ್ನಿಸುತಿದ್ದಾರೆ. ಮುಸ್ಲಿಂ ಲೀಗಿಗೆ ಇಂದು ಭಾರತದ ಮುಸಲ್ಮಾನರ ಪ್ರಚಂಡ ಬೆಂಬಲವಿರಬಹುದು. ಮುಸ್ಲಿಂ ಲೀಗು ಇಂದಿಗೂ ಬ್ರಿಟಿಷರ ಸ್ನೇಹಿ, ಸಹಕಾರಿ. ೧೯೪೨ ರ 'ತೊಲಗಿರಿ' ಆಂದೋಲನ ಬ್ರಿಟಿಷರ ವಿರುದ್ಧವಾಗಿರದೆ ಹಿಂದೂ ಸಾಮ್ರಾಜ್ಯವನ್ನು ಕಟ್ಟಲು ಮುಸಲ್ಮಾನರ ವಿರುದ್ಧ ಕಾಂಗ್ರೆಸ್ಸು ಹೂಡಿದ ಒಳಸಂಚೆಂದು ನಾಚಿಕೆ ಇಲ್ಲದೆ ಸಾರಿದ ಲೀಗ್ ಮುಂದಾಳಿನೊಡನೆ ಕಾಂಗ್ರೆಸ್ಸು ತನ್ನ ತತ್ವಗಳಿಗೆ ತಿಲಾಂಜಲಿಯನ್ನಿತ್ತು ಒಪ್ಪಂದ ಮಾಡಿಕೊಳ್ಳಬೇಕೆಂದು ಕ್ಯಾಬಿನೆಟ್ ಮಿಶನ್ನು ಸಲಹೆ ಕೊಡುತ್ತಿದೆ. ಇಂಥವರೊಡನೆ ಕಾಂಗ್ರೆಸ್ಸು ಒಪ್ಪಂದ ಮಾಡಿಕೊಳ್ಳುವುದೆಂತು? ನಾವು ಮುಸಲ್ಮಾನ ಜನತೆಯೊಡನೆ ನೇರವಾದ ಸಂಬಂಧವನ್ನಿಟ್ಟುಕೊಂಡರೆ ಮುಸಲ್ಮಾನರ ಮೇಲಿರುವ ಲೀಗಿನ ಹಿಡಿತ ಸಡಿಲಾಗುವುದೆಂಬ ವಿಶ್ವಾಸ ನನಗಿದೆ. ಇದನ್ನು ಬಿಟ್ಟು ನಮ್ಮ ಹಗೆಯ ಹಸ್ತಕರೆಂದು ನಾವು ಚೆನ್ನಾಗಿ ಬಲ್ಲ ಲೀಗ್ ಮುಂದಾಳಿನೊಡನೆ ಒಪ್ಪಂದಕ್ಕಾಗಿ ನಾವು ಯತ್ನಿಸುತ್ತಲಿದ್ದೇವೆ. ಕಾಂಗ್ರೆಸ್ ಕಾರ್ಯಕಾರೀ ಸಮಿತಿ ನಡುಗಾಲ ಸರಕಾರದ ಸೂಚನೆಯನ್ನು ನಿರಾಕರಿಸಿದ್ದಕ್ಕಾಗಿ ನನಗೆ ಸಂತೋಷವಾಗಿದೆ.

"ಘಟನಾ ಸಮಿತಿಯ ಯೋಜನೆಯ ಸ್ವೀಕಾರವೂ ಅಷ್ಟೇ ಗಂಡಾಂತರವನ್ನೆ ಸೂಚಿಸುತ್ತದೆಂದು ನನ್ನ ಭಾವನೆ. ಬ್ರಿಟಿಷರು ಸೂಚಿಸಿರುವ ಈ ಘಟನಾ ಸಮಿತಿಗೂ ನಮ್ಮ ರಾಷ್ಟ್ರಪತಿ ಪಂ. ಜವಾಹರಲಾಲ ನೆಹರೂರವರು ನಮಗೆ ದಯಪಾಲಿಸಿದ, ಘಟನಾ ಸಮಿತಿಯ ಮೂಲ ಯೋಜನೆಗೂ ತುಂಬ ವ್ಯತ್ಯಾಸವಿದೆ. ಬ್ರಿಟಿಷ್ ನಿರ್ಮಿತ ಈ ಘಟನಾ ಸಮಿತಿ ನಾವು ಈ ವರೆಗೆ

ಹೋರಾಡಿದ ಸ್ವಾತಂತ್ರ್ಯವನ್ನು ಎಂದಿಗೂ ತರಲಾರದು. ಘಟನಾ ಸಮಿತಿಯು ಸಿದ್ಧಪಡಿಸಿದ ರಾಜ್ಯಘಟನೆಗೆ ಒಪ್ಪಿಕೊಳ್ಳುವುದಾಗಿ ಬ್ರಿಟಿಷ್ ಸರಕಾರ ಆಶ್ವಾಸನ ಕೊಡಬಹುದು. ಆದರೆ ಆ ಮೇಲೆ, ನಾವು ಬಯಸುತ್ತಿರುವ ಸ್ವತಂತ್ರ ಭಾರತದ ನಿರ್ಮಾಣವು ಸಾಧ್ಯವಾಗುವಂತಹ ರಾಜ್ಯಘಟನೆಯನ್ನು ಸಿದ್ಧಪಡಿಸದಂತೆ ಅದು ಸೂತ್ರಚಾಲನೆ ಮಾಡುವುದರಲ್ಲಿ ಸಂದೇಹವಿಲ್ಲ. ಘಟನಾ ಸಮಿತಿಯಲ್ಲಿ ಕಾಂಗ್ರೆಸ್ಸಿಗೂ ಲೀಗಿಗೂ ಭಿನ್ನಾಭಿಪ್ರಾಯವಾದಾಗ—ಭಿನ್ನಾಭಿಪ್ರಾಯವಾಗುವುದು ಖಂಡಿತ—ಪರಿಹಾರಕ್ಕಾಗಿ ನಾವು ಬ್ರಿಟಿಷ್ ಸರಕಾರವನ್ನೇ ಮೊರೆ ಹೋಗಬೇಕಾಗುತ್ತದೆ. ಇಂಥ ಸಂದರ್ಭದಲ್ಲಿ ಬ್ರಿಟಿಷರು ನ್ಯಾಯವಾಗಿ ವರ್ತಿಸುವರೆಂದು ನಿಮ್ಮ ಭಾವನೆಯೆ? ಇದಕ್ಕೆ ಬದಲಾಗಿ, ನಮ್ಮ ಜನರ ಬೆಂಬಲದಿಂದಲೇ ರಚಿತವಾದ ಘಟನಾ ಸಮಿತಿಯಾದರೆ ನಮ್ಮ ಎಲ್ಲ ಸಮಸ್ಯೆಗಳನ್ನು ಜನತೆಯ ಅಭಿಪ್ರಾಯದ ಮೇರೆಗೇ ಪರಿಹರಿಸಿಕೊಳ್ಳಬಹುದು.''

''ಈಗಿನ ಈ ಕೊನೆಯ ತೀರ್ಮಾನವನ್ನು ಕೈಕೊಳ್ಳುವ ಮೊದಲು ಕಾಂಗ್ರೆಸ್ ಕಾರ್ಯಕಾರೀ ಸಮಿತಿ ಎಲ್ಲ ತೊಡಕುತೊಂದರೆಗಳನ್ನು ಕೂಲಂಕಷವಾಗಿ ಪರ್ಯಾಲೋಚಿಸಿರಬಹುದೆಂಬುದನ್ನು ನಾನು ಬಲ್ಲೆ. ಆದರೂ, ಇದರಲ್ಲಿ ಮೋಸವಿದೆಯೆಂದು ತಿಳಿದೂ ತಿಳಿದು, ಮತ್ತು ನಮ್ಮ ಶಕ್ತಿಸಾಮರ್ಥ್ಯವನ್ನು ಚೆನ್ನಾಗಿ ಬಲ್ಲವರಾಗಿ ಈ ದೋಷಯುಕ್ತ ಯೋಜನೆಯನ್ನು ಸ್ವೀಕರಿಸುವ ಕಾರಣವೇನೋ ನನಗೆ ತಿಳಿಯದು.''

''ಆದುದರಿಂದ ಈಗ ನಾವು ಮಾಡಬೇಕಾದ ಒಂದೇ ಒಂದು ಕೆಲಸವೆಂದರೆ ಇಂಥ ನಿರ್ಬಂಧಯುಕ್ತ, ದೋಷಯುಕ್ತ ಘಟನಾ ಸಮಿತಿ ನಮಗೆ ಬೇಡವೆಂದು ಹೇಳುವುದು. ಬ್ರಿಟಿಷ್ ಸರಕಾರದ ಈ ಯೋಜನೆಯನ್ನು ಸ್ವೀಕರಿಸುವುದರಿಂದ ನಮ್ಮ ಸಾಮರ್ಥ್ಯವನ್ನು ಕುಗ್ಗಿಸಿಕೊಂಡಂತಾಗುವುದು. ಪ್ರಾಂತಗಳ ಆಡಳಿತ ಸ್ವೀಕಾರದಿಂದ ನಮ್ಮ ಬಲ ತಕ್ಕಷ್ಟು ಉಡುಗಿದೆ. ಈ ಯೋಜನೆಯನ್ನು ಒಪ್ಪಿಕೊಂಡರೆ ನಾವು ಇನ್ನೂ ಬಲಹೀನರಾಗುವೆವು. ನಾನು ಹೇಳುವುದಾದರೆ ಕಾರ್ಯಕಾರೀ ಸಮಿತಿಯ ಈ ಸಂಧಾನಮಾರ್ಗದಿಂದ ನಮ್ಮ ಧ್ಯೇಯವನ್ನು ನಾವು ಕೊಂಚವೂ ಸಮೀಪಿಸಲಿಲ್ಲ. ಎಂದ ಬಳಿಕ ಸಂಧಾನದ ಇಂತಹ ಮಾತುಕತೆಯನ್ನು ಬಿಟ್ಟು ನಾವು ಇನ್ನೊಂದು

ಹೋರಾಟಕ್ಕೆ ಏಕೆ ಅಣಿಯಾಗಬಾರದು? ಈಗ ನಮಗೆ ಉಳಿದಿರುವುದು ಒಂದೇ ಒಂದು ಮಾರ್ಗ—ಕಾಂಗ್ರೆಸ್ ಸಂಸ್ಥೆಯನ್ನು ಬಲಪಡಿಸುವುದು; ನಮಗೆ ನಮ್ಮ ನೈಜಬಲ ಅರಿವಾದೊಡನೆ ಬ್ರಿಟಿಷ್ ಸರಕಾರದ ವಿರುದ್ಧವಾಗಿ ಹೋರಾಟವನ್ನು ಹೂಡುವುದು; ಮತ್ತು ಬ್ರಿಟಿಶರು ಒಡಂಬಡಿಕೆಯ ಮೂಲಕ ಅಧಿಕಾರವನ್ನು ಕಾಂಗ್ರೆಸ್ಸಿನ ಸ್ವಾಧೀನಪಡಿಸಿ ಭಾರತದಿಂದ ಕಡ್ಡಾಯವಾಗಿ ತೊಲಗುವಂತೆ ಮಾಡುವುದು."

"ಕಾಂಗ್ರೆಸ್ ಕಾರ್ಯಕಾರೀ ಸಮಿತಿಯು ಈ ಗೊತ್ತುವಳಿ ಅಯೋಗ್ಯವಾದುದೆಂದೂ ಆದುದರಿಂದ ಅದನ್ನು ಅನುಮೋದಿಸಕೂಡದೆಂದೂ ತೋರುವುದರಿಂದ ಅದನ್ನು ವಿರೋಧಿಸುತ್ತಿದ್ದೇನೆಯೇ ಹೊರತು ಕಾರ್ಯಕಾರೀ ಸಮಿತಿಯ ಗೌರವವನ್ನು ಕಡಿಮೆ ಮಾಡುವುದಕ್ಕಾಗಿ ಅಲ್ಲವೆಂಬುದನ್ನು ಸ್ಪಷ್ಟಪಡಿಸುತ್ತೇನೆ. ಅಖಿಲ ಭಾರತ ಕಾಂಗ್ರೆಸ್ ಸಮಿತಿಗೆ ಈ ತಪ್ಪನ್ನು ಸರಿಪಡಿಸುವ ಅವಕಾಶ ದೊರೆತಿದೆ. ಈ ಸುಸಂಧಿಯನ್ನು ಕಳೆದುಕೊಳ್ಳಬಾರದು."

---

# ಸ್ವಾತಂತ್ರ್ಯಯೋಧರಿಗೆ ಮೂರನೇ ಓಲೆ

—೧೯೪೬ನೇ ಆಗಸ್ಟ್ ೯

ಗೆಳೆಯರೇ,

ನನ್ನ ಬಿಡುಗಡೆಯೊಡನೆ 'ಜನತಾ' ಪತ್ರಿಕೆಯ ಮುಖಾಂತರ ನಿಮ್ಮೆಲ್ಲರಿಗೆ ಕಳುಹಿದ ಅಭಿನಂದನೆಗಳಲ್ಲಿ, ದೇಶದ ಈಗಿನ ಪರಿಸ್ಥಿತಿಯ ಬಗೆಗೂ ಮುಂದೆ ನಾವು ಕೈಕೊಳ್ಳಬೇಕಾದ ಕಾರ್ಯದ ಬಗೆಗೂ ನನ್ನ ವಿಚಾರಗಳನ್ನು ಬೇಗನೆ ತಿಳಿಸುವೆನೆಂದು ಹೇಳಿದ್ದೆ. ಆದರೆ ಅದಕ್ಕೆ ಇಷ್ಟು ತಡವಾದುದಕ್ಕೆ ವಿಷಾದಿಸುತ್ತೇನೆ. ವಿಲಂಬವು ಅನಿವಾರ್ಯವಾಯಿತು. ಏಕೆಂದರೆ ಈ ವಿಷಯದಲ್ಲಿ ಮೊಟ್ಟಮೊದಲು ಗೆಳೆಯರನ್ನೂ ಸಹೋದ್ಯೋಗಿಗಳನ್ನೂ ಕಂಡು ಅವರೊಡನೆ ಆಲೋಚಿಸುವುದು ಅಗತ್ಯವಾಗಿದ್ದಿತು. ಈಗ ನಿಮ್ಮ ಮುಂದೆ ನನ್ನ ಹಲವು ನಿಶ್ಚಿತ ಮಾತುಗಳನ್ನಿಡಲು ಸಾಧ್ಯವಾಗಿದೆ.

ಇದುವರೆಗೂ ಮಹತ್ವದ ಸಂದರ್ಭಗಳಲ್ಲಿ ನಾನೂ ನನ್ನ ಗೆಳೆಯರೂ ಬರಹಗಳಿಂದ ನಮ್ಮ ಕಾರ್ಯಕ್ಷೇತ್ರದ ರೂಪರೇಷೆಗಳನ್ನು ತಿಳಿಸುತ್ತಲೇ ಇದ್ದೇವೆ. ಕಳೆದ ಅಖಿಲಭಾರತ ಕಾಂಗ್ರೆಸ್ ಸಮಿತಿಯಲ್ಲಿ ನಾವು ತಳೆದ ಧೋರಣೆಯನ್ನು ನೀವು ಬಲ್ಲಿರಿ. ಇಲ್ಲಿ ನನ್ನ ಮತ್ತು ನನ್ನ ಗೆಳೆಯರ ಸ್ಪಷ್ಟ ವಿಚಾರಗಳನ್ನೂ ನಮ್ಮೆದುರಿಗಿನ ಸಮಸ್ಯೆಗಳನ್ನೂ ಅವುಗಳ ನೆರವೇರಿಕೆಯ ಉಪಾಯಗಳನ್ನೂ ಸೂಚಿಸಿದ್ದೇನೆ.

ಈಗಿನ ಕಾಲ ತೀವ್ರ ಬದಲಾವಣೆಗಳ ಕಾಲ. ಅಖಿಲ ಭಾರತ ಕಾಂಗ್ರೆಸ್ ಸಮಿತಿ ಬ್ರಿಟಿಷ್ ಸೂಚಿತ ಘಟನಾ ಸಮಿತಿಯ ಯೋಜನೆಯನ್ನು ಸ್ವೀಕರಿಸಬೇಕೆಂದು ನಿರ್ಧರಿಸಿದೆ. ವೈಸ್‌ರಾಯರ ನೇತೃತ್ವದಲ್ಲಿ ಒಂದು ನಡುಗಾಲ ಸರಕಾರ ಬೇಗನೆ ಏರ್ಪಡಬಹುದು. ಈ ಸರಕಾರ ಯಾವಾಗ ಸ್ಥಾಪಿತವಾದರೂ ವೈಸ್‌ರಾಯರು, ಬ್ರಿಟಿಷ್ ದಂಡು ಮತ್ತು ಬ್ರಿಟಿಷ್ ಬಂಡವಲುಗಾರಿಕೆ ಇಲ್ಲಿಂದ ತೊಲಗುವವರೆಗೆ ಅದು ಸ್ವತಂತ್ರ ರಾಷ್ಟ್ರದ ಸ್ವತಂತ್ರ ಸರ

ಕಾರವಾಗಲಾರದು. ಈ ಸರಕಾರವು ಸ್ವತಂತ್ರ ರಾಷ್ಟ್ರದ ಸರಕಾರದಂತೆ ಕೆಲಸ ನಡೆಸುವುದು ಎಂದು ನಿರೀಕ್ಷಿಸುವುದು ದಡ್ಡತನ. ತಮ್ಮ ಮನ ಬಂದಾಗ ಅಧಿಕಾರ ಬಿಟ್ಟುಕೊಡಲು ಅಧಿಕಾರವುಳ್ಳ ಜನರು ಅದನ್ನು ಮನ ಬಂದಾಗ ಸೆಳೆದುಕೊಳ್ಳುವ ಅಧಿಕಾರ ಪಡೆಯುತ್ತಾರೆ. ಆದುದರಿಂದ ಈ ನಡುಗಾಲ ಸರಕಾರ ಸ್ವತಂತ್ರ ಹಿಂದುಸ್ಥಾನದ ಸ್ವತಂತ್ರ ಸರಕಾರ' ವಾಗುವುದು ' ಎಂಬ ಮಾತಿಗೆ ಮರುಳಾಗುವುದು ಬೇಡ.

ಇನ್ನು, ಈ ಘಟನಾ ಸಮಿತಿ ನಮಗೆ ಸ್ವಾತಂತ್ರ್ಯವನ್ನು ತರಬಹುದೊ? ಎಂದರೆ ಈ ಘಟನಾ ಸಮಿತಿ, ಹಿಂದುಸ್ಥಾನವು ಸ್ವತಂತ್ರ ಪ್ರಜಾಧಿಪತ್ಯವೆಂದು ಸಾರಿ ಈ ಘೋಷಣೆಯನ್ನು ಕೃತಿಗಿಳಿಸಬಲ್ಲುದೊ? ಅದು ಮೊಟ್ಟಮೊದಲು, ಒಂದು ತಾತ್ಪೂರ್ತಿಕ ಸರಕಾರವನ್ನು ರಚಿಸಿ, ವೈಸ್‌ರಾಯನು ತನ್ನ ಎಲ್ಲ ಅಧಿಕಾರವನ್ನು ಬಿಟ್ಟು ತೊಲಗುವಂತೆ ಮಾಡಬಲ್ಲುದೊ? ಇಂಥ ತಾತ್ಪೂರ್ತಿಕ ಸರಕಾರವು ಎಲ್ಲ ಬ್ರಿಟಿಷ್ ಸೈನ್ಯವನ್ನೂ ಅಧಿಕಾರಿಗಳನ್ನೂ ಇಲ್ಲಿಂದ ಹೊರಡಿಸಬಲ್ಲುದೊ? ಈ ಸರಕಾರವು, ಬ್ರಿಟನ್ನು ಈ ದೇಶದ ಮೇಲೆ ಹಾಕಿದ ಆರ್ಥಿಕ ಬಂಧನಗಳನ್ನು ಹರಿದೊಗೆಯಬಲ್ಲುದೊ? ಈ ಘಟನಾ ಸಮಿತಿಯು ಬ್ರಿಟಿಷರು ತೊಲಗಿದ ಬಳಿಕ ವಿಸರ್ಜಿತವಾಗಿ, ಅನಿರ್ಬಂಧ ಪ್ರೌಢ ಮತದಾನ ತತ್ವದ ಮೇರೆಗೆ ಜನರಿಂದ ನಿಯೋಜಿತವಾದ ನಿಜವಾದ ಘಟನಾಸಮಿತಿಯನ್ನು ರಚಿಸಲು ತಾತ್ಪೂರ್ತಿಕ ಸರಕಾರಕ್ಕೆ ಅಧಿಕಾರ ಕೊಡಬಲ್ಲುದೊ? ಈಗ ಸೇರಲಿರುವ ಈ ಘಟನಾಸಮಿತಿ ಭಾರತದ ಸಂಪೂರ್ಣ ಸ್ವಾತಂತ್ರ್ಯಕ್ಕೂ ಪ್ರಜಾಪ್ರಭುತ್ವಕ್ಕೂ ಅಗತ್ಯವಿರುವ ಈ ಎಲ್ಲ ಕೆಲಸಗಳನ್ನು ಕೈಕೊಳ್ಳಬಲ್ಲುದೊ? ಈಗಿನ ಪರಿಸ್ಥಿತಿಯಲ್ಲಿ, ಈಗಿನ ಶಕ್ತಿಸಾಧನಗಳ ಸಹಾಯದಿಂದ, ಈ ಘಟನಾಸಮಿತಿಯು ಈ ಎಲ್ಲ ಕೆಲಸಗಳನ್ನು ಜರುಗಿಸಿ ತನ್ನ ಗುರಿಯನ್ನು ಮುಟ್ಟಬಲ್ಲುದೆಂದು ತಿಳಿಯುವುದು ತಿಳಿಗೇಡಿತನ. ಒಂದು ವೇಳೆ ಈ ಘಟನಾ ಸಮಿತಿ ಇದೆಲ್ಲವನ್ನು ಮಾಡಲು ಯತ್ನಿಸಿದರೂ ಬ್ರಿಟಿಷರು ಅದಕ್ಕೆ ತಡೆಯನ್ನೊಡ್ಡುವುದು ಖಂಡಿತ. ಎಂದಮೇಲೆ ಈ ಘಟನಾಸಮಿತಿ ಪ್ರಾಮಾಣಿಕವಾಗಿದ್ದರೆ ಬ್ರಿಟಿಷರ ಈ ಕುತಂತ್ರವನ್ನು ಜನಸಮುದಾಯದ ಪ್ರಚಂಡ ಬೆಂಬಲದ ಮೂಲಕ ಎದುರಿಸಿ ತನ್ನ ಸಂಕಲ್ಪವನ್ನು ಸಾಧಿಸಲೇ ಬೇಕು. ಆಗ, ಘಟನಾ ಸಮಿತಿಯನ್ನು ನೆರೆಯಿಸಬೇಕೆಂದಿರುವ ವೈಸ್‌ರಾಯರು ಅದನ್ನು

ಕೂಡಲೇ ವಿಸರ್ಜಿಸಲು ಮುಂದೆ ಬರುವರು. ಆ ಬಳಿಕ ಒಂದು ಸರ್ವತೋಮುಖವಾದ ಸ್ವಾತಂತ್ರ್ಯ ಸಮರವು ಮೊದಲಾಗಿ, ಅದರ ಫಲವಾಗಿ ಜನತೆಯ ನಿಜವಾದ ಘಟನಾಸಮಿತಿಯೂ ರಾಷ್ಟ್ರಕ್ಕೆ ನಿಜವಾದ ಪ್ರಜಾಪ್ರಭುತ್ವವೂ ಲಭಿಸುವವು.

ಅಂತೂ ಈ ಘಟನಾ ಸಮಿತಿ ಈ ದಾರಿ ಹಿಡಿಯುವಂತೆ ತೋರುವುದಿಲ್ಲ. ಏಕೆಂದರೆ ರಾಷ್ಟ್ರಾಧ್ಯಕ್ಷ ನೆಹರೂರವರು ನಿಜಪರಿಸ್ಥಿತಿಯನ್ನು ಅಲ್ಲಗಳೆಯಬಾರದೆಂದು ಸೂಚಿಸಿದ್ದಾರೆ ಎಂದರೆ, ಘಟನಾ ಸಮಿತಿಗೆ ಇರುವ ನಿರ್ಬಂಧ, ಅದರ ದುರ್ಬಲತೆ, ಹಿಂದುಸ್ಥಾನದ ಸ್ವಾತಂತ್ರ್ಯ ವಿರೋಧಿಗಳಾದ ಬ್ರಿಟಿಷರ ಡೊಂಕುತನ, ಕೊನೆಯದಾಗಿ ಬ್ರಿಟಿಷ್ ದಂಡು ಮತ್ತು ಬ್ರಿಟಿಷ್ ವೈಸ್ ರಾಯರು ಇದರಲ್ಲಿ ಯಾವುದನ್ನೂ ಮರೆಯಲಾಗದು ಇದಲ್ಲದೆ, ನೈಜ ಮಾರ್ಗವೆಂದು ಬಣ್ಣಿಸಲ್ಪಡುವ ಮಾರ್ಗವನ್ನೇ ಈ ಘಟನಾಸಮಿತಿಯು ತುಳಿಯುವುದೆಂಬುದನ್ನೂ ಮರೆಯಲಾಗದು. ಇದನ್ನೇ ಬೇರೆ ರೀತಿಯಿಂದ ಹೇಳುವುದಾದರೆ ಈ ಘಟನಾ ಸಮಿತಿ ಒಪ್ಪಂದದ ಮೇಲೆ ಒಪ್ಪಂದ ಮಾಡಿಕೊಳ್ಳುತ್ತ ಕೊನೆಯಲ್ಲಿ ಸ್ವಾತಂತ್ರ್ಯವನ್ನಾಗಲಿ ಪ್ರಜಾಪ್ರಭುತ್ವವನ್ನಾಗಲಿ ರಾಷ್ಟ್ರೀಯ ಒಕ್ಕಟ್ಟನ್ನಾಗಲಿ ಸಾಧಿಸದೆ ಹೋಗುವುದು. ಆದುದರಿಂದ ಈ ಭ್ರಮನಿರಸನದ ಬಳಿಕ ರಾಷ್ಟ್ರವು ಈಗಿನ ತಪ್ಪುದಾರಿಯನ್ನು ಬಿಟ್ಟು ಕ್ರಾಂತಿಕಾರಕ ಚಟುವಟಿಕೆಗಳ, ಪ್ರತಿಕ್ರಿಯೆ ಮತ್ತು ಹೋರಾಟದ, ಸರಳವಿದ್ದೂ ಕಠಿಣವಾದ ಸ್ವಾತಂತ್ರ್ಯ ಮಾರ್ಗವನ್ನೇ ಮರಳಿ ಹಿಡಿಯಬೇಕಾಗುವುದು.

ಅಂತೂ ಈ ಎರಡು ಸಂದರ್ಭಗಳಲ್ಲಿಯೂ, ಎಂದರೆ ಈ ಘಟನಾ ಸಮಿತಿ ‘ ಜಯಶಾಲಿ ’ಯಾದರೂ ಇಲ್ಲವೆ ಹೋರಾಡಿ ಸೋತರೂ, ಸ್ವಾತಂತ್ರ್ಯ ಸಂಗ್ರಾಮವೇನೂ ತಪ್ಪಿದ್ದಲ್ಲ. ದೇಶದ ಈಗಿನ ಪರಿಸ್ಥಿತಿಯ ಸರಿಯಾದ ಜ್ಞಾನವುಳ್ಳ ಪ್ರತಿಯೊಬ್ಬನಿಗೂ ಇದು ಸ್ಪಷ್ಟವಾಗಿ ಕಾಣುವ ಮಾತು. ‘ ಪರಿಸ್ಥಿತಿಯ ನೆವ ’ದಿಂದ ಬ್ರಿಟಿಷ್ ಸಾಮ್ರಾಜ್ಯವಾದ ಈಗಲೂ ನಮಗೆ ಎದುರಾಳಿಯಾಗಬಲ್ಲುದು. ಈ ಒತ್ತಾಯದ ಪರಿಸ್ಥಿತಿಯನ್ನು ಕ್ರಾಂತಿಕಾರಕ ಚಟುವಟಿಕೆಗಳಿಂದ ನಾಶಗೊಳಿಸದಿದ್ದರೆ ಸ್ವಾತಂತ್ರ್ಯವೆಂಬುದು ಕಣ್ಣುಕಟ್ಟೇ ಸರಿ. ಇದಲ್ಲದೆ ಈಗಿನ ಪರಿಸ್ಥಿತಿಯನ್ನು ವಾದವಿವಾದದಿಂದ, ಸವಿಮಾತುಗಳಿಂದ ಇಲ್ಲವೆ ರಾಜತಂತ್ರದಿಂದ ಹೋಗಲಾಡಿಸುವುದೂ ಅಸಾಧ್ಯ.

ಒಟ್ಟಿನಲ್ಲಿ, ಈ ಬ್ರಿಟಿಷ್ ಪ್ರೇರಿತ ಯೋಜನೆಯ ಸ್ವೀಕಾರದಿಂದ ಸ್ವಾತಂತ್ರ್ಯಸಮರವೇನೂ ನಿಲ್ಲಬಾರದು. ಹೋರಾಟವು ಸಾಗಲೇಬೇಕು. ಈ ಹೋರಾಟದ ರೀತಿ ಸ್ವಭಾವಗಳು ಮಾತ್ರ ಆಳವೂ ವಿಶಾಲವೂ ಆಗುವವು. ಸ್ವಾತಂತ್ರ್ಯ ಹೋರಾಟವನ್ನು ಹೊಟ್ಟೆಯ ಹೋರಾಟವೂ ರಾಷ್ಟ್ರೀಯ ಐಕ್ಯದ ಹೋರಾಟವೂ ಕೂಡಿಕೊಳ್ಳುವವು.

## ಸಾರ್ವತ್ರಿಕ ಹೋರಾಟ

ಬ್ರಿಟಿಷ್ ಯೋಜನೆಯ ಸ್ವೀಕಾರದಿಂದ ದೇಶದಲ್ಲಿ ಒಡಕನ್ನು ಹೆಚ್ಚಿಸುವ ಅನೇಕ ಶಕ್ತಿಗಳಿಗ ಎಡೆದೊರೆಯುತ್ತದೆ. ಬ್ರಿಟಿಷರು ಭಾರತೀಯ ರಾಜ್ಯಪದ್ಧತಿಯಲ್ಲಿ ಮಾಡಿದ ಮಹಾಕಾರ್ಯವೆಂದರೆ ದೇಶವನ್ನು ಒಂದು ಗೂಡಿಸಿದ್ದು ಎಂಬ ಸಾಮಾನ್ಯವಾದ ಭಾವನೆ ಇದೆ; ಮತ್ತು ಇಂದು ಅವರು ಇಂಥ ಉದಾತ್ತ ಕಾರ್ಯದ ಫಲವನ್ನು ಹಾಳುಮಾಡುತ್ತಿದ್ದಾರೆಂಬ ಅಸಮಾಧಾನವೂ ಇದೆ. ಇದಕ್ಕಿಂತ ಹೆಚ್ಚು ತಿಳಿಗೇಡಿತನದ ಭಾವನೆ ಮತ್ತೊಂದಿಲ್ಲ. ಐಕ್ಯವನ್ನುಂಟುಮಾಡುವುದಿರಲಿ, ಬ್ರಿಟಿಷರು ಎಂದಿನಿಂದಲೂ ನಮ್ಮನಮ್ಮಲ್ಲಿ ವಿಭಾಗಿಸಲು ಕೈಲಾದಷ್ಟು ಪ್ರಯತ್ನಿಸುತ್ತಲಿದ್ದಾರೆ. ಹಿಂದೂ ಮುಸಲ್ಮಾನರಲ್ಲಿ ವಿಭಾಗ, ಹಿಂದೂಗಳಿಂದ ಅಸ್ಪೃಶ್ಯವನ್ನು ಬೇರ್ಪಡಿಸುವ ಯೋಜನೆ, ಸಿಕ್ ಅಲ್ಪಸಂಖ್ಯಾಕರ ನಿರ್ಮಾಣ, ವಿಶಾಲವಾದ ಈ ದೇಶದಿಂದ ಹಿಂದೀ ಸಂಸ್ಥಾನಗಳನ್ನು ಪ್ರತ್ಯೇಕಿಸಿದ್ದು, ಸಂಸ್ಥಾನದ ರಾಜ ಪ್ರಜರುಗಳಲ್ಲಿ ಭಿನ್ನತೆ ತಂದದ್ದು, ಜಮೀನುದಾರರನ್ನು ಬ್ರಿಟಿಷ ಪ್ರಭುತ್ವದ ಆಧಾರಸ್ಥಂಭರನ್ನಾಗಿಸಿದ್ದು, ಬಂಡವಲುಗಾರರಿಗೂ ಮಧ್ಯಮ ವರ್ಗಕ್ಕೂ ದೇಶದ ಹಗೆಗಳಾಗುವಂತೆ ಪ್ರೋತ್ಸಾಹ. ಎಂದರೆ, ಬ್ರಿಟಿಷ್ ಆಡಳಿತ ಸಡಿಲಾದರೆ ದೇಶದಲ್ಲಿ ಕೋಲಾಹಲವೂ ಅರಾಜಕತೆಯೂ ಉಂಟಾಗುವ ಪರಿಸ್ಥಿತಿಯನ್ನು ನಿರ್ಮಿಸಲು ಅವರು ತಮ್ಮ ಈ ನೂರು ವರುಷಗಳ ಆಳಿಕೆಯಲ್ಲಿ ಎಲ್ಲರೀತಿಯಿಂದಲೂ ಯತ್ನಿಸಿದ್ದಾರೆ. ಬ್ರಿಟಿಷ್ ಆಳಿಕೆಯಲ್ಲಿ ಸುಗಮವಾಗಿ ಬೆಳೆದ ಐಕ್ಯವೆಂದರೆ ಜನತೆಯ ಐಕ್ಯವೂ ಅಲ್ಲ, ರಾಷ್ಟ್ರದ ಐಕ್ಯವೂ ಅಲ್ಲ, ಸರ್ವಾಧಿಕಾರೀ ಪ್ರಭುತ್ವ ದ ಐಕ್ಯ ಮಾತ್ರ. ಅಂತಹ ವಾಸ್ತವ ಐಕ್ಯವನ್ನು ಸಾಧಿಸಿದ್ದು ಕಾಂಗ್ರೆಸ್ಸು. ಆದರೆ ಇಂದು ಈ ಐಕ್ಯ ಮೂಲಕ್ಕೇ ಅಪಾಯ ತಟ್ಟುತ್ತಲಿದೆ. ಆದುದರಿಂದ ಬ್ರಿಟಿಷ್ ಯೋಜನೆಯ

ಸ್ವೀಕಾರವು ರಾಷ್ಟ್ರೀಯಒಕ್ಕಟ್ಟಿಗಾಗಿ ಹೋರಾಡುವ ಸಂದರ್ಭವೊಂದನ್ನು ತರುವುದು ಅನಿವಾರ್ಯ.

ಅಲ್ಲದೆ, ಇಷ್ಟರಲ್ಲಿ ಬರಲಿರುವ ಈ ಘಟನಾತ್ಮಕ ಬದಲಾವಣೆಗಳಿಂದ ಆರ್ಥಿಕ ಸಮಸ್ಯೆಗಳೂ ವರ್ಗಸಮಸ್ಯೆಗಳೂ ಉದ್ಭೂತವಾಗುತ್ತವೆ. ಇಂಥ ಸ್ವರಾಜ್ಯವು, 'ಸ್ವರಾಜ್ಯವು ಯಾರಿಗೆ?' ಎಂಬ ಪ್ರಶ್ನೆಗೆ ಪಾಂಡಿತ್ಯಪೂರ್ಣ ಉತ್ತರವಾದೀತೇ ಹೊರತು ವ್ಯಾವಹಾರಿಕ ಉತ್ತರವಾಗಲಾರದು. ಎಂದರೆ, ಸ್ವಾತಂತ್ರ್ಯ ಸಂಗ್ರಾಮದ ಅತಿ ಮುಖ್ಯಭಾಗವಾದ ಹೊಟ್ಟೆಯ ಹೋರಾಟವು ಎಲ್ಲ ಸಮಸ್ಯೆಗಳನ್ನೂ ಹಿಂದೆ ತಳ್ಳಿ ವಿರಾಟ್‌ಸ್ವರೂಪದಿಂದ ಮುಂದೆ ಬರುತ್ತದೆ.

ಇವೆಲ್ಲ ಬೇರೆ ಬೇರೆ ಹೋರಾಟಗಳಲ್ಲ—ಒಂದೇ ಹೋರಾಟದ ಬೇರೆ ಬೇರೆ ಸ್ವರೂಪಗಳು. ಒಂದೊಂದು ಸ್ವರೂಪಕ್ಕೆ ಒಂದೊಂದು ಸಂದರ್ಭದಲ್ಲಿ ಮಹತ್ವ ಹೆಚ್ಚುವುದೂ ಉಂಟು, ಕಡಿಮೆಯಾಗುವುದೂ ಉಂಟು. ಆದರೆ ಈಗಿನ ಘಟನಾತ್ಮಕ ಯೋಜನೆ ಕಾರ್ಯಗತವಾದಂತೆಲ್ಲ ಈ ಎಲ್ಲ ಸ್ವರೂಪಗಳಿಗೂ ಸರಿಯಾದ ಮಹತ್ವ ಬರಬಹುದು.

ಇಂದಿನ ಪರಿಸ್ಥಿತಿಗನುಸರಿಸಿ ಜನರ ಸಾರ್ವತ್ರಿಕ ಹೋರಾಟವನ್ನು ಬಹುಶಃ ಘಟನಾ ಸಮಿತಿ ಮತ್ತು ನಡುಗಾಲ ಸರಕಾರದ ಮುಖಾಂತರ ಆ ಬಳಿಕ ಒಕ್ಕೂಟ ಸರಕಾರ ಇಲ್ಲವೇ ಪ್ರಾಂತಿಕ ಸರಕಾರಗಳ ಮುಖಾಂತರ ಸಾಗಿಸಬೇಕಾಗುವುದು.

ನಮ್ಮ ಕಾಂಗ್ರೆಸ್ಸು ಈ ಎಲ್ಲ ಸ್ಥಿತ್ಯಂತರಗಳೊಡನೆ ಸಂಬಂಧವನ್ನಿಟ್ಟು ಕೊಳ್ಳುವಂತೆ ತೋರುತ್ತದೆ. ಆದುದರಿಂದ ಕಾಂಗ್ರೆಸ್ಸು ಹೂಡಬಹುದಾದ ಸ್ವಾತಂತ್ರ್ಯದ, ಐಕ್ಯದ, ಮತ್ತು ರೊಟ್ಟಿಯ ಹೋರಾಟವು ಘಟನಾತ್ಮಕ ಸರಕಾರದ ಮುಖಾಂತರ ಸಾಗುವುದು ಖಂಡಿತವೆಂದು ತೋರುತ್ತದೆ. ಕಾಂಗ್ರೆಸ್ಸು ಈಗಾಗಲೇ ಘಟನಾತ್ಮಕ ಕಾರ್ಯ ಪದ್ಧತಿಯ ಒಂದು ಪಕ್ಷವಾಗಿದೆ. ಈ ಪದ್ಧತಿ ಹೀಗೆಯೇ ಸಾಗಿದರೆ ಕಾಂಗ್ರೆಸ್ಸು ಈ ಮುಪ್ಪುರಿಯ ಹೋರಾಟದಲ್ಲಿ ಏನನ್ನೂ ಸಾಧಿಸಲಾರದೆಂಬುದರಲ್ಲಿ ಸಂದೇಹವೇನು? ಘಟನಾತ್ಮಕ ಯಂತ್ರವಾಗಲಿ ಆಡಳಿತ ಸಭೆಯಾಗಲಿ ಕೆಲವೊಂದು ಸಂದರ್ಭದಲ್ಲಿ ಮಾತ್ರ ಬಹಳ ಉಪಯುಕ್ತವಾಗಬಹುದು ಆದರೆ ಇಂದಿನ ಪರಿಸ್ಥಿತಿಯಲ್ಲಿ ಜನತೆಯ

ಹೋರಾಟವು ಮುಖ್ಯವಾಗಿ ಕಾಯಿದೆಮಂದಿರಗಳ ಹೊರಗೂ ಆಡಳಿತ ಯಂತ್ರದ ಹೊರಗೂ ನಡೆಯಬೇಕು.

ಈ ಹೋರಾಟವನ್ನು ಮುಂದೆ ಸಾಗಿಸುವುದು ನಮ್ಮ ಇಂದಿನ ಕರ್ತವ್ಯ-ಸ್ವಾತಂತ್ರ್ಯಕ್ಕಾಗಿ ಹೋರಾಡುವ ಎಲ್ಲ ವೀರರ ಕರ್ತವ್ಯ.

೨

## 'ಜನತೆಯ ಅನುಮತಿ'

ಈ ಹೋರಾಟವನ್ನು ಪ್ರಾರಂಭಿಸುವುದೆಂತು ?-ಬೆದರಿಕೆಯ ಮೂಲಕವೆ ? ಹಿಂಸೆಯ ಮೂಲಕವೆ ? ಕೊಲೆ, ಕೊಳ್ಳೆ, ಸುಲಿಗೆಯ ಮೂಲಕವೆ ? ಖಂಡಿತವಾಗಿಯೂ ಅಲ್ಲ. ಈ ಹೋರಾಟವನ್ನು ಮೊದಲಿಸುವ ಒಂದೇ ಒಂದು ದಾರಿಯೆಂದರೆ 'ಜನತೆಯ ಅನುಮತಿ'ಯಿಂದ. ಈ ಅನುಮತಿಯನ್ನು ಪಡೆಯುವುದಕ್ಕಾಗಿ ನಾವು ಮಾಡಬೇಕಾದ ಮೊದಲನೆಯ ಕೆಲಸ, ಹೋರಾಟಕ್ಕಾಗಿ ಜನತೆಯ ಮಾನಸಿಕ ಸಿದ್ಧತೆಯನ್ನು ಉಂಟುಮಾಡುವುದು; ಎರಡನೆಯ ಕೆಲಸ-ಜನ ಸಮುದಾಯದ ಶಕ್ತಿ ವಿವೇಕ ಜಾಗ್ರತಿಗಳು ಬೆಳೆಯುವಂತೆ ಒಕ್ಕಲಿಗರ ಮತ್ತು ಕೂಲಿಕಾರರ ಸಂಘ, ಸ್ವಯಂಸೇವಕದಲ, ವಿದ್ಯಾರ್ಥಿ ಮತ್ತು ತರುಣರ ಸಂಘ ಮತ್ತು ಗ್ರಾಮ ಪ್ರಭುತ್ವಗಳನ್ನೂ ನೇಕಾರರ ಸಹಕಾರಿ ಸಂಘಗಳನ್ನೂ ಇದೇ ಬಗೆಯ ಇನ್ನಿತರ ಸಂಘಗಳನ್ನೂ ನಿರ್ಮಿಸುವುದು ಇದೆಲ್ಲಕ್ಕೂ ಆಧಾರಭೂತವಾಗಿ ಕಾಂಗ್ರೆಸ್ಸಿನಲ್ಲಿ ಹೊಸ ಜೀವಕಳೆಯನ್ನು ತುಂಬಿ ಅದು ಸಾಮಾನ್ಯ ಜನತೆಯೊಡನೆ ನಿಕಟ ಸಂಬಂಧವನ್ನು ಬೆಳೆಸಿಕೊಳ್ಳುವಂತೆ ಪ್ರಯತ್ನಿಸಬೇಕು.

ರಾಷ್ಟ್ರೀಯ ಒಕ್ಕಟ್ಟಿಗೆ ಮತ್ತು ಜನಸಾಮಾನ್ಯರ ಅನುಮತಿಗೆ ಇರು[illegible] ಸಂಬಂಧವನ್ನೂ ಇಲ್ಲಿ ವಿವರಿಸುತ್ತೇನೆ. ರಾಷ್ಟ್ರೀಯ ಒಕ್ಕಟ್ಟು ಬರಿಯ ತೋ[illegible]ಕೆಯ ಒಕ್ಕಟ್ಟಾಗಬಾರದು—ತಳದಿಂದ, ಮೂಲದಿಂದ ಬಂದ ಒಕ್ಕಟ್ಟಾ[illegible]ಬೇಕು. ಇಂಥ ಒಕ್ಕಟ್ಟನ್ನು ಮುಸಲ್ಮಾನ ಜನತೆಯಲ್ಲಿ ಸ್ಥಿರವಾದ ರಾ[illegible]ಕೀಯ ಜಾಗ್ರತಿಯ ಮೂಲಕ ಸಂಪಾದಿಸಬಹುದು. ಆರ್ಥಿಕ ಇಲ್ಲ[illegible] ಬೇರೆಬೇರೆ ವರ್ಗಗಳ ಸಂಘಟನೆಯ ಮೂಲಕ ಕೂಲಿಕಾರರ ಸಂಘಟನೆ, ಒ

ಲಿಗರ ಸಂಘ, ನೇಕಾರರ ಸಹಕಾರೀ ಸಂಘ, ಹಿಂದುಗಳಲ್ಲಿ ಸಾಮಾಜಿಕ ಸುಧಾರಣೆ ಮತ್ತು ಸಾಂಸ್ಕೃತಿಕ ಮನರಂಜಕ ಕಾರ್ಯಕ್ರಮ ಮುಂತಾದವುಗಳ ಮೂಲಕ–ಪರಸ್ಪರರಲ್ಲಿ ಐಕ್ಯವಾಗುವ ಸಹಜವಾದ ಅನೇಕ ಸಂದರ್ಭಗಳನ್ನು ತಂದುಕೊಳ್ಳಬಹುದು. ದೇಶದ ಭದ್ರವಾದ ಮೇರೆಯ ನಿರ್ಮಾಣ, ಎಲ್ಲರಿಗೂ ಸಂಬಂಧಿಸಿದ ಆರ್ಥಿಕ ವಿಕಾಸದ ಆವಶ್ಯಕತೆ, ಸಾಮಾನ್ಯವಾದ ಆರ್ಥಿಕ ಪದ್ಧತಿಯ ಆವಶ್ಯಕತೆ, ವಿಚಾರ ವಿನಿಮಯಕ್ಕಾಗಿ ಏಕಭಾಷೆಯ ಆವಶ್ಯಕತೆ–ಬೇಕಾದರೆ ಇನ್ನೂ ಹಲವು ಸಮಸ್ಯೆಗಳನ್ನು ತೋರಿಸಬಹುದು. ಈ ಬಗೆಯ ಒಕ್ಕಟ್ಟಿಗೆ ಮೊಟ್ಟಮೊದಲು ಅವಶ್ಯವಾದುದೆಂದರೆ ಪ್ರತಿಯೊಬ್ಬ ಸ್ವಾತಂತ್ರ್ಯ ಯೋಧನೂ ಜಾತೀಯತೆಯ ಸೋಂಕಿನಿಂದ ದೂರವಿದ್ದು ಸಕಲ ಮಾನವರೂ ಸರಿ-ಸಮಾನರೆಂಬ ಭಾವನೆಯನ್ನು ಮೈಗೂಡಿಸಿಕೊಳ್ಳುವುದು.

ರಾಷ್ಟ್ರದ ಒಕ್ಕಟ್ಟಿಗೆ ಜನತೆಯ ತಕ್ಕಷ್ಟು ಬೆಂಬಲವಿಲ್ಲ. ಇಂಥ ಬೆಂಬಲವನ್ನು ಹೆಚ್ಚಿಸುವುದೇ ನಾವು ಕೈಕೊಳ್ಳಬೇಕೆಂದಿರುವ ಕಾರ್ಯಕ್ರಮದ ಮುಖ್ಯ ಗುರಿ.

ಇದಕ್ಕಾಗಿ ನಾವು ಮಾಡಬೇಕಾದ ಪ್ರಯತ್ನವನ್ನು ವಿಭಾಗಿಸಿ ನಿರ್ದಿಷ್ಟ ಕ್ಷೇತ್ರಗಳಲ್ಲಿ ನಿರ್ದಿಷ್ಟ ಕಾರ್ಯಕ್ರಮವನ್ನೇ ಕೈಕೊಳ್ಳುವುದು ಸಾಧ್ಯವಿಲ್ಲ. ರಾಜಕೀಯ, ಆರ್ಥಿಕ, ಸಾಮಾಜಿಕ ಕ್ಷೇತ್ರಗಳಲ್ಲಿ ಮಾಡಬೇಕಾದ ಪ್ರಯತ್ನಗಳು ಒಂದರಲ್ಲೊಂದು ಸೇರಿಕೊಂಡಿವೆ, ಪರಸ್ಪರ ಸಹಾಯಕಾರಿಯಾಗಿವೆ, ಜನಸಾಮಾನ್ಯರ ಹೋರಾಟದ ವಿಭಾಗಗಳಾಗಿವೆ.

೩

## ಸಂಘಟನೆಯ ಸಮಸ್ಯೆ

ನಮ್ಮ ಮುಂದಿರುವ ಕಾರ್ಯಕ್ರಮವನ್ನು ವಿವರಿಸುವ ಮೊದಲು, ಸ್ವಾತಂತ್ರ್ಯಯೋಧರು ಕೈಕೊಳ್ಳಬೇಕಾದ ಕಾರ್ಯಕ್ರಮದ ರೀತಿಯ ವಿಷಯವಾಗಿ ನನ್ನ ಮತ್ತು ನನ್ನ ಗೆಳೆಯರ ವಿಚಾರವೇನೆಂಬುದನ್ನು ಹೇಳುತ್ತೇನೆ. ಆಗಸ್ಟ್ ಕ್ರಾಂತಿಯಲ್ಲಿ ನಾವೆಲ್ಲರೂ ಕಾಂಗ್ರೆಸ್ಸಿನ ಹೆಸರಿನಿಂದ ಕೆಲಸ ಮಾಡಿ

ದೆವು. ಹಾಗೆ ಮಾಡಿದ್ದು ಯೋಗ್ಯವೇ ಆಯಿತು. ಏಕೆಂದರೆ ಹೋರಾಡು ವುದೇ ಆಗ ಕಾಂಗ್ರೆಸ್ಸಿನ ಧೋರಣೆಯಾಗಿತ್ತು. ಕಾಂಗ್ರೆಸ್ಸಿಗರು ಹೋರಾಟ ದಿಂದ ದೂರ ಉಳಿದು, ಹೋರಾಟವನ್ನು ಪ್ರತಿಭಟಿಸಿ, ಕಾಂಗ್ರೆಸ್ಸನ್ನು ವಿರೋ ಧಿಸಿದಂತಾಯಿತು, ದ್ರೋಹ ಬಗೆದಂತಾಯಿತು. ಆದರೆ ಇಂದಿನ ಪರಿಸ್ಥಿತಿ ಬೇರೆಯಾಗಿದೆ. ಕಾಂಗ್ರೆಸ್ಸಿನ ಈಗಿನ ಅಧಿಕೃತ ಧೋರಣೆ ಹೋರಾಟದ ಧೋರಣೆಯೂ ಅಲ್ಲ, ಹೋರಾಟದ ಸಿದ್ಧತೆಯ ಧೋರಣೆಯೂ ಅಲ್ಲ. ಇದಕ್ಕೆ ಸಂಧಾನ ಧೋರಣೆ, ಇಲ್ಲವೆ ಶಾಸನಬದ್ಧ ಕಾರ್ಯಕ್ರಮದ ಧೋರಣೆ ಎನ್ನಬಹುದು ಆದುದರಿಂದ ಹೋರಾಟದ ಮತ್ತು ಕ್ರಾಂತಿಕಾರಕ ಚಟುವಟಿ ಕೆಗಳ ಧೋರಣೆಯನ್ನು ಹಿಡಿಯಬೇಕೆನ್ನುವ ನಮಗೆ ಕಾಂಗ್ರೆಸ್ಸಿನ ಹೆಸರಿನಿಂದ ಕೆಲಸ ಮಾಡುವುದು ಸಾಧ್ಯವಿಲ್ಲ.

ಆದರೆ ನಾವು ಕಾಂಗ್ರೆಸ್ಸಿನಿಂದ ದೂರ ಸರಿದು ಅದಕ್ಕೆ ವಿರುದ್ಧವಾಗಿ ಜನತೆಯ ಬೇರೊಂದು ಕ್ರಾಂತಿಕಾರಕ ಸಂಘಟನೆಯನ್ನು ನಿರ್ಮಿಸಿದರೆ ಅದ ರಿಂದ ಸ್ವಾತಂತ್ರ್ಯ ಸಮರಕ್ಕೆ ಬಹಳ ದೊಡ್ಡ ಪೆಟ್ಟು ಬೀಳುತ್ತದೆ. ನಮ್ಮ ಕಾರ್ಯಕ್ರಮಕ್ಕೂ ಈಗಿನ ಕಾಂಗ್ರೆಸ್ ಮುಂದಾಳುಗಳ ಕಾರ್ಯಕ್ರಮಕ್ಕೂ ನಿಕಟ ಭೇದವಿದೆ ಎಂಬುದು ಸ್ಪಷ್ಟ. ಸಂಸ್ಥೆಯೂ ಮುಂದಾಳುಗಳೂ ಒಂದೇ ಎಂದು ನಾವು ಭಾವಿಸಬಾರದು ಈಗಿನ ಕಾಂಗ್ರೆಸ್ಸು ಎಷ್ಟರ ಮಟ್ಟಿಗೆ ನಿಮ್ಮ ಪರಿಶ್ರಮ ಸ್ವಾರ್ಥತ್ಯಾಗಗಳ ಫಲವೋ ಅಷ್ಟೇ ಮಟ್ಟಿಗೆ ಅದನ್ನು ಸೇರಿದ ಉಳಿದ ಗುಂಪುಗಳ ಪರಿಶ್ರಮ ಸ್ವಾರ್ಥತ್ಯಾಗದ ಫಲವೂ ಅಹುದು ಉಳಿದ ಯಾರಂತೆ ನಿಮಗೂ ಕಾಂಗ್ರೆಸ್ಸಿನ ಹೆಸರಿನಲ್ಲಿ ಮಾತನಾಡಲು ಅಧಿಕಾರವಿದೆ. ಕಾಂಗ್ರೆಸ್ಸು ಅತಿ ದೊಡ್ಡ ಸುಸಂಘಟಿತ ರಾಷ್ಟ್ರೀಯ ಸಾಮಾಜಿಕ ಶಕ್ತಿ. ಜನ ಸಾಮಾನ್ಯರ ಮೇಲೆ ಅದಕ್ಕೆ ಅಸದೃಶವಾದ ಪ್ರಭಾವವಿದೆ. ಆದುದರಿಂದ ಜನಸಾಮಾನ್ಯರ ಹೋರಾಟಕ್ಕೆ ಕಾಂಗ್ರೆಸ್ಸು ಅತ್ಯುತ್ತಮ ಸಾಧನ. ಈ ಸಾಧ ನವನ್ನು ಒಂದು ಕ್ರಾಂತಿಕಾರಕ ಧ್ಯೇಯಕ್ಕಾಗಿ ಉಪಯೋಗಿಸಿಕೊಳ್ಳುವುದು ಸಾಧ್ಯವಿರುವ ವರೆಗೆ ಇದನ್ನು ಬಿಟ್ಟುಬಿಡುವುದು ದಡ್ಡತನ. ಈ ಸಾಧ್ಯತೆ ಇಂದಿಗೂಇದೆ ಎಂದು ನನ್ನ ಭಾವನೆ. ಆದುದರಿಂದ ನಾವು ಕಾಂಗ್ರೆಸ್ಸಿನೊಳಗೇ ಕೆಲಸ ಮಾಡುತ್ತ ಅದರ ಶಕ್ತಿಯನ್ನು ಬೆಳೆಸಬೇಕು ನಮ್ಮ ಕಾರ್ಯಶಕ್ತಿಯಿಂದ, ಜನಸೇವೆಯಿಂದ, ಅದನ್ನು ನಮ್ಮ ಧೋರಣೆಗೆ ಪರಿವರ್ತಿಸಿಕೊಳ್ಳಬೇಕು.

ಈಗಿನ ಕಾಂಗ್ರೆಸ್ ಮುಂದಾಳುತನ ಕಾಂಗ್ರೆಸ್ಸನ್ನು ರಚನಾತ್ಮಕ ಕಾರ್ಯಕ್ರಮವೇನೂ ಇಲ್ಲದ ಬರಿಯ ಘಟನಾತ್ಮಕ ಕಾರ್ಯವಾಹಕ ಸಂಸ್ಥೆಯನ್ನಾಗಿ ಮಾಡಲು ಪಟ್ಟಾಡಿದರೆ, ಕಾಂಗ್ರೆಸ್ಸಿನ ದೊಡ್ಡ ದೊಡ್ಡ ಅಧಿಕಾರಗಳನ್ನು ಕೆಲವರಿಗೆ ದಾನಮಾಡುತ್ತ, ದಿನದಿನಕ್ಕೂ ಆಡಳಿತಾಸಕ್ತವಾಗುತ್ತ, ಜನರ ಸೇವೆಗಾಗಲಿ ಅವರನ್ನು ಅಂಕೆಯಲ್ಲಿಡುವುದಕ್ಕಾಗಲಿ ಸರಕಾರಯಂತ್ರವನ್ನು ಅವಲಂಬಿಸಿದರೆ ನಾವು ನಿರುಪಾಯರಾಗಿ ಅವರೊಡನೆ ಹೋರಾಡಬೇಕಾಗುತ್ತದೆ. ಆದರೆ ನಮ್ಮ ಕೆಲಸವನ್ನು ಶ್ರದ್ಧೆಯಿಂದ, ಹುಮ್ಮಸ್ಸಿನಿಂದ ಸಾಗಿಸಿದರೆ ಕಾಂಗ್ರೆಸ್ಸಿನ ಜನಸಾಮಾನ್ಯರನ್ನು ನಮ್ಮ ಕಡೆಗೆ ಎಳೆದುಕೊಂಡು ಕಾಂಗ್ರೆಸ್ಸು ಬರಿಯ ಒಂದು ಘಟನಾಬದ್ಧ ಧೋರಣೆಯ ಸಂಸ್ಥೆಯಾಗಿ ಕೊಳೆಯದಂತೆ ಮಾಡಬಹುದು.

ಎಂದರೆ ನಾವು ಎರಡು ತೀರ್ಮಾನಗಳನ್ನು ಕೈಕೊಂಡಂತಾಗುತ್ತದೆ— ಆಗಸ್ಟ್ ಕ್ರಾಂತಿಯ ಕಾಲದಲ್ಲಿ ಕಾಂಗ್ರೆಸ್ಸಿನ ಹೆಸರಿನಿಂದ ಕೆಲಸ ಮಾಡಿದಂತೆ ಈಗ ಮಾಡಲು ಸಾಧ್ಯವಿಲ್ಲ, ಮತ್ತು ನಾವು ಕಾಂಗ್ರೆಸ್ಸಿನಲ್ಲಿ ಇದ್ದೇ ಕೆಲಸ ಮಾಡಬೇಕು. ಹಾಗಾದರೆ ಸ್ವಾತಂತ್ರ್ಯಕ್ಕಾಗಿ ಹೋರಾಡುವವರಿಗೆಲ್ಲ ಒಂದು ಸ್ಪಷ್ಟ ಗುರಿಯನ್ನು ತೋರಿಸಿಕೊಟ್ಟು ಅವರು ಸುಸಂಘಟಿತರಾಗಿ ಕೆಲಸ ಮಾಡುವಂತೆ ಅವರನ್ನು ಪ್ರಚೋದಿಸುವುದು ಹೇಗೆ? ನಮ್ಮ ಕೆಲಸವಿರುವುದು ಕಾಂಗ್ರೆಸ್ ಸಂಸ್ಥೆಯಲ್ಲಿ ಮಾತ್ರವಲ್ಲ ಎಂಬುದನ್ನು ಗಮನಿಸಿದರೆ ಈ ಪ್ರಶ್ನೆಗೆ ಇನ್ನೂ ಹೆಚ್ಚಿನ ಮಹತ್ವ ಬರುತ್ತದೆ. ಕಾಂಗ್ರೆಸ್ ಸಂಪರ್ಕವಿಲ್ಲದ ವ್ಯಾಪಾರೀ ಸಂಘ, ಒಕ್ಕಲಿಗರ ಸಂಘ ಮತ್ತು ಇನ್ನೂ ಅನೇಕ ಸಂಸ್ಥೆಗಳಲ್ಲಿ ಕೆಲಸ ಮಾಡಬೇಕು. ನಾವು ಮಾಡಬೇಕಾದ ಕೆಲಸ ಕಾಂಗ್ರೆಸ್ಸಿನಲ್ಲಿ ಮಾತ್ರವೇ ಇದ್ದಿದ್ದರೆ ಅಸಂಘಟಿತರಾಗಿದ್ದರೂ ಸಾಕಾಗುತಿದ್ದಿತು. ಆದರೆ ಮೇಲಿನ ನಮ್ಮ ಕರ್ತವ್ಯವನ್ನು ಒಳ್ಳೇ ಸಮರ್ಥವಾಗಿ ಪೂರೈಸಬೇಕಾಗಿದ್ದರೆ ನಮ್ಮಲ್ಲಿ ಭದ್ರವಾದ ಸಂಘಟನೆ ಅತ್ಯವಶ್ಯ.

ನಾನು ಈ ವಿಷಯದಲ್ಲಿ ಚೆನ್ನಾಗಿ ಯೋಚಿಸಿ, ಸಹೋದ್ಯೋಗಿಗಳೊಡನೆ ಚರ್ಚಿಸಿ, ಈ ಕೆಲಸವನ್ನು ಮಾಡಲು ಕಾಂಗ್ರೆಸ್ ಸಾಮ್ಯವಾದೀ ಪಕ್ಷವೇ ಯೋಗ್ಯವೆಂದು ನಿರ್ಧರಿಸಿದ್ದೇನೆ. ಸಾಮ್ಯವಾದೀ ಪಕ್ಷವನ್ನು ಸುವ್ಯವಸ್ಥಿತವಾಗಿ ಸಂಘಟಿಸಿಕೊಂಡರೆ ಅದು ನಮ್ಮ ಧ್ಯೇಯಸಾಧನೆಗೆ ಅತ್ಯುತ್ತಮ

ರೀತಿಯಿಂದ ನೆರವಾಗಬಲ್ಲುದು. ಕಾಂಗ್ರೆಸ್ ಸಾಮ್ಯವಾದೀ ಪಕ್ಷವು ರಾಜಕೀಯದಲ್ಲಿ ಅತ್ಯುತ್ತಮ ಕೆಲಸ ಮಾಡಿದ ಪ್ರತೀತಿ ಇದೆ. ಮೊನ್ನೆಯ ಆಗಸ್ಟ್ ಕ್ರಾಂತಿಯಲ್ಲಿ ಅದು ಬಹು ಜಾಗ್ರತೆಯಿಂದ, ಜಾಣತನದಿಂದ ಕೆಲಸ ಮಾಡಿತೆಂದು ಅದರ ಶತ್ರುಗಳೂ ಒಪ್ಪಿಕೊಳ್ಳುತ್ತಾರೆ. ನಮ್ಮ ಪಕ್ಷದಲ್ಲಿ ಈ ವರೆಗೆ ಹಲವು ದೋಷಗಳಿದ್ದುವು. ನಾವು ಸಾಮ್ಯವಾದೀ ಮತ್ತು ಎಡ ಪಕ್ಷಗಳ ಐಕ್ಯದ ಪ್ರಯತ್ನದಲ್ಲಿ ತೊಡಗಿದ್ದಾಗ ನುಸುಳಿದ ದೋಷಗಳಿವು. ಇವುಗಳನ್ನು ನಾವು ನಿವಾರಿಸಿಕೊಳ್ಳಬಹುದು. ಕಳೆದ ಕೆಲವು ದಿನಗಳಿಂದ ನನಗೆ ಬಹಳ ಜನ ಆಗಸ್ಟ್ ವೀರರ ಸಂಪರ್ಕವುಂಟಾಗಿದೆ. ಅವರಲ್ಲಿ ಅನೇಕರು, ಸಾಮ್ಯವಾದೀ ಪಕ್ಷವು ತಮಗೆ ಮಾರ್ಗದರ್ಶಿಯಾಗಬೇಕೆಂದೂ ಇನ್ನು ಮುಂದೆ ಕೈಕೊಳ್ಳಬೇಕಾದ ಕಾರ್ಯವನ್ನು ಅದು ನಿಶ್ಚಯಿಸಬೇಕೆಂದೂ ಕೋರುತ್ತಿದ್ದಾರೆ. ಆದುದರಿಂದ ಸಾಮ್ಯವಾದೀ ಪಕ್ಷವು ಎಲ್ಲ ಸ್ವಾತಂತ್ರ್ಯಯೋಧರಿಗೂ ಮಾರ್ಗದರ್ಶಿಯಾದ ಸಂಸ್ಥೆಯಾಗಬೇಕೆಂಬ ನಿರ್ಧಾರಕ್ಕೆ ನಾನು ಬಂದಿದ್ದೇನೆ.

ಈ ನಿರ್ಧಾರಕ್ಕೆ ಇನ್ನೂ ಒಂದು ಕಾರಣವಿದೆ. ಸಾಮ್ಯವಾದೀ ಪಕ್ಷವು ತನ್ನ ಧ್ಯೇಯದ ಕಾರ್ಯಕ್ರಮದಲ್ಲಿ ಸಾಮ್ಯವಾದವನ್ನಲ್ಲದೆ ರಾಷ್ಟ್ರದ ಸ್ವಾತಂತ್ರ್ಯವನ್ನೂ ಸೇರಿಸಿಕೊಂಡಿದೆ. ಸ್ವಾತಂತ್ರ್ಯಯೋಧರಲ್ಲಿ ನೂರಕ್ಕೆ ತೊಂಬತ್ತೈದು ಜನರು ಸಾಮ್ಯವಾದವನ್ನು ಬಯಸುತ್ತಾರೆಂದು ನನ್ನ ಭಾವನೆ. ಸಾಮ್ಯವಾದವಿಲ್ಲದ ಸ್ವಾತಂತ್ರ್ಯದಿಂದ ಅವರಿಗೆ ಎಂದಿಗೂ ಸಮಾಧಾನವಾಗದು. ಆದುದರಿಂದಲೇ ಕಾಂಗ್ರೆಸ್ ಸಾಮ್ಯವಾದೀ ಪಕ್ಷವು ಅವರ ಅತ್ಯಂತ ಆದರಕ್ಕೆ ಪಾತ್ರವಾಗಿದೆ.

## ಎಡಪಕ್ಷದ ಐಕ್ಯ

ಎಡಪಕ್ಷದ ಒಕ್ಕಟ್ಟುಕೂಡ ಸಂಘಟನೆಯ ಸಮಸ್ಯೆಗೇ ಸೇರಿದ್ದು. ಇದನ್ನು ಕುರಿತು ಅನೇಕರಲ್ಲಿ ಒಂದು ಬಗೆಯ ವಿಚಾರಗೊಂದಲವಿದ್ದಂತೆ ತೋರುತ್ತದೆ ಎಡಪಕ್ಷದ ಒಕ್ಕಟ್ಟು ಜಗತ್ತಿನಲ್ಲೆಲ್ಲ ಬಹು ತೊಡಕಿನ ಪ್ರಶ್ನೆಯಾಗಿದೆ. ಈ ಪ್ರಶ್ನೆ ಉದ್ಭೂತವಾದ ರೀತಿಯನ್ನು ನೋಡಿದರೆ ಈಗ ಇದರ ಪರಿಹಾರ ಅಸಂಭವನೀಯವೆಂದು ತೋರುತ್ತದೆ .ಎಲ್ಲ ಎಡ ಪಕ್ಷಗಳ ನಿಜವಾದ

ಒಕ್ಕಟ್ಟು ಅಶಕ್ಯವೇ ಸರಿ. ಇಂತಹ ಒಕ್ಕಟ್ಟಿನ ಆವಶ್ಯಕತೆಯನ್ನು ಪ್ರತಿಪಾದಿಸುವವರು, ಎಡಪಕ್ಷಗಳಲ್ಲಿ ಆರಂಭದಲ್ಲಿಯೇ ಅನೈಕ್ಯವಿರುವುದೇಕೆ ಎಂಬುದನ್ನು ಮೊದಲು ಯೋಚಿಸಿಕೊಳ್ಳಬೇಕು—ಎಂದರೆ ಬೇರೆ ಬೇರೆ ಎಡಪಕ್ಷಗಳು ಏಕೆ ಹುಟ್ಟಿದುವು ಎಂಬುದನ್ನು ತಿಳಿದುಕೊಳ್ಳಲು ಯತ್ನಿಸಬೇಕು. ಈ ಪ್ರಶ್ನೆಯ ಉತ್ತರವನ್ನು ನಾವು ಚೆನ್ನಾಗಿ ಯೋಚಿಸಿದರೆ ಈ ಬಗೆಯ ಉಪಪಕ್ಷಗಳ ಹುಟ್ಟಿಗೆ ಕಾರಣವಾದ ಸಂದರ್ಭವೇ ಅವುಗಳೊಳಗಿನ ಒಕ್ಕಟ್ಟಿಗೂ ವಿಘ್ನ ತರುತ್ತದೆಂಬುದು ಸ್ಪಷ್ಟವಾಗಿ ಕಂಡುಬರುತ್ತದೆ.

ಈ ಎಡಪಕ್ಷಗಳಲ್ಲಿ ಪೂರ್ಣವಾದ ಒಕ್ಕಟ್ಟು ಸಾಧ್ಯವಿಲ್ಲ. ಅವು ಕೆಲವೊಂದು ಸಂದರ್ಭಗಳಲ್ಲಿ ಮಾತ್ರ ತಾತ್ಪೂರ್ತಿಕವಾಗಿ ಒಟ್ಟಾಗಬಹುದು ಎಂಬುದು ಜಗತ್ತಿನ ಎಡಪಕ್ಷಗಳ ಚಟುವಟಿಕೆಗಳಿಂದ ಕಂಡುಬರುತ್ತದೆ. ಈ ಐತಿಹಾಸಿಕ ಸಾಕ್ಷ್ಯದಿಂದ ನಾವು ಕಲಿತುಕೊಳ್ಳಬಹುದಾದ ಒಂದು ಪಾಠವಿದೆ.

ನಮ್ಮ ದೇಶದ ಅನುಭವವೂ ಇದಕ್ಕೆ ಬೇರೆಯಾಗಿಲ್ಲ. ಎಡಪಕ್ಷದ ಒಕ್ಕಟ್ಟಿಗಾಗಿ ನಾವು ಎರಡು ಸಲ ಪ್ರಯತ್ನಪಟ್ಟೆವು. ಆ ಪ್ರಯತ್ನಗಳು ವಿಫಲವಾದುದು ಮಾತ್ರವಲ್ಲದೆ ಅದರಿಂದ ಕಾರ್ಯವು ಮುಂದೆ ಸಾಗಲು ಈಗಲೂ ಅಡೆತಡೆಗಳು ಬರುತ್ತಿವೆ. ಕಾಂಗ್ರೆಸ್ ಸಾಮ್ಯವಾದಿ ಪಕ್ಷದಲ್ಲಿ ಸೇರಲು ಎಲ್ಲ ಎಡಪಕ್ಷಗಳಿಗೂ ಮುಕ್ತದ್ವಾರವಿದ್ದಿತು. ಆದರೆ ಬೇರೆ ಬೇರೆ ಪಂಗಡಗಳು ಈ ಸಂದರ್ಭವನ್ನು ದುರುಪಯೋಗಿಸಿ ತಮ್ಮ ತಮ್ಮ ಪಕ್ಷಗಳನ್ನು ಬಲಪಡಿಸಿಕೊಳ್ಳುವದಕ್ಕಾಗಿ ಸಾಮ್ಯವಾದಿ ಪಕ್ಷದಲ್ಲಿ ಸೇರಿ ಅದನ್ನು ಒಳಗಿನಿಂದಲೇ ಸದೆಬಡೆಯಬೇಕೆಂಬ ಕುಚೋದ್ಯವನ್ನು ಪ್ರಾರಂಭಿಸಿದುವು.

ಆದುದರಿಂದ ಎಡಪಕ್ಷದ ಒಕ್ಕಟ್ಟು ಸಾಧ್ಯವೆಂಬುದನ್ನು ನಾನು ನಂಬುವುದಿಲ್ಲ. ಇದಕ್ಕಾಗಿ ಪ್ರಯತ್ನಿಸುವುದೂ ನನಗೆ ಸರಿಯೆನಿಸುವುದಿಲ್ಲ. ಎಲ್ಲ ಎಡಪಕ್ಷಗಳೂ ತಮ್ಮ ತಮ್ಮ ಸಂಕುಚಿತ ಬುದ್ಧಿಯನ್ನು ಬಿಟ್ಟು, ಶುಷ್ಕ ತಾತ್ವಿಕ ವಾದಗಳನ್ನು ಬದಿಗಿರಿಸಿ, ರಾಷ್ಟ್ರೀಯತ್ವ ಮತ್ತು ಸಾಮ್ಯವಾದದ ತಳಹದಿಯಮೇಲೆ ಒಂದೇ ಪಕ್ಷವನ್ನು ಕಟ್ಟುವುದು ಒಳಿತು. ಇಂದಿನ ಇಂತಹ ಪಕ್ಷವೆಂದರೆ ಕಾಂಗ್ರೆಸ್ ಸಾಮ್ಯವಾದೀ ಪಕ್ಷವೊಂದೇ. ಈ ಪಕ್ಷದ ಕುಂದುಕೊರತೆಗಳನ್ನು ತೋರಿಸುತ್ತ ಪರರು ಇದನ್ನು ಟೀಕಿಸಬಹುದು. ಹಾಗೆ

ಟೀಕಿಸುವುದಕ್ಕಿಂತ ಅದರಲ್ಲಿ ಸೇರಿ, ಅದರ ಕುಂದುಕೊರತೆಗಳನ್ನು ಹೋಗಲಾಡಿಸಿ, ಅದರ ತಾತ್ವಿಕ ಧೋರಣೆಯನ್ನು ಸರಿಪಡಿಸಿ, ರಾಷ್ಟ್ರೀಯ ಸ್ವಾತಂತ್ರ್ಯಕ್ಕಾಗಿ ಹೋರಾಡುವ ಒಂದು ಬಲವಾದ ಪಕ್ಷವಾಗುವಂತೆ ಕಟ್ಟಲು ಪ್ರಯತ್ನಿಸಿದರೆ ಒಂದು ಉಪಯುಕ್ತ ಕೆಲಸವಾದಂತಾಗುವುದು. ಹಿಂದುಸ್ಥಾನದಲ್ಲಿ ಸಾಮ್ಯವಾದೀ ಆಂದೋಲನವು ಬಲಗೊಳ್ಳುವುದು ಬಲವಾದ ಒಂದೇ ಒಂದು ಪಕ್ಷದ ಬೆಳವಣಿಗೆಯಿಂದ ಮಾತ್ರ ಸಾಧ್ಯ. ಹಲವು ಪಕ್ಷಗಳು ತೋರಿಕೆಗೆ ಒಂದಾಗುವುದರಲ್ಲಿ ಏನೂ ಹುರುಳಿಲ್ಲ. ಈ ಕಾರ್ಯವನ್ನು ಸಾಧಿಸಬಲ್ಲ ಪಕ್ಷವೆಂದರೆ ಕಾಂಗ್ರೆಸ್ ಸಾಮ್ಯವಾದೀ ಪಕ್ಷವೊಂದೇ. ಆದುದರಿಂದ ಈ ಪಕ್ಷವನ್ನು ತಮ್ಮದೆಂದು ತಿಳಿದುಕೊಳ್ಳಬೇಕೆಂದು ಎಲ್ಲ ಯೋಧರಿಗೂ ನಾನು ಕೇಳಿಕೊಳ್ಳುತ್ತೇನೆ. ಈಗಾಗಲೇ ಎಷ್ಟೋ ಜನರು ಹಾಗೆ ತಿಳಿದುಕೊಂಡಿದ್ದಾರೆ. ಉಳಿದವರೂ ಅಂತೆಯೇ ನಡೆಯಬೇಕೆಂದು ಅರಿಕೆ.

ಕೆಲವೊಂದು ಗೆಳೆಯರಿಗೆ ಸ್ಥಾನಿಕ ತೊಂದರೆಗಳು, ವೈಯಕ್ತಿಕ ಕಷ್ಟಗಳು, ಹಿಂದಿನ ತಪ್ಪು ಭಾವನೆಗಳು ಅಡ್ಡ ಬರಬಹುದು. ಈ ಎಲ್ಲ ಕಷ್ಟಗಳನ್ನು ನೀಗಿಸಲು ನಾವು ಕೈಲಾದಷ್ಟು ಯತ್ನಿಸುತ್ತೇವೆ. ಇವುಗಳ ನಿವಾರಣೆಯಾದ ಬಳಿಕ ಅವರೆಲ್ಲರೂ ಒಟ್ಟಾಗಿ ಒಂದು ಬಲವಾದ ಸಂಘಟನೆಯನ್ನು ನಿರ್ಮಿಸಲು ಹವಣಿಸಬೇಕೆಂಬುದೇ ನನ್ನ ಬಯಕೆ.

## ನಮ್ಮ ಸದ್ಯದ ಕಾರ್ಯಕ್ರಮ

ಇಲ್ಲಿ ನಾನು ವಿಸ್ತಾರವಾದ ರಾಜಕೀಯ ಕಾರ್ಯಕ್ರಮವನ್ನು ವಿವರಿಸಬಯಸುವುದಿಲ್ಲ. ಅಂತಹ ಸಂದರ್ಭ ಇನ್ನು ಮುಂದೆ ಬಹುಶಃ ನಮ್ಮ ಪಕ್ಷದ ಧೋರಣೆಯನ್ನು ವಿವರಿಸುವಾಗ ಒದಗಬಹುದು. ಇಲ್ಲಿ ನಾನು ಸೂಚಿಸುವುದು ನಾವು ಕೂಡಲೇ ಕೈಕೊಳ್ಳಬೇಕಾದ ಕೆಲಸದ ಸಾಮಾನ್ಯ ರೂಪರೇಷೆಗಳನ್ನು ಮಾತ್ರ.

ಭಾವೀ ಹೋರಾಟದ ಸ್ಪಷ್ಟ ಚಿತ್ರ ನಮ್ಮ ಕಣ್ಣೆದುರಿಗಿದ್ದರೆ ನಾವು ಈಗ ಮಾಡಬೇಕಾದ ಕಾರ್ಯದ ಸ್ವರೂಪವು ನಿಚ್ಚಳವಾಗುವುದು. ನನಗೆ ಕಾಣುತ್ತಿರುವ ಆ ಚಿತ್ರ ಹೀಗಿದೆ: ಮೊದಲನೆಯದು, ಅತಿ ಸಮರ್ಥವಾದ ವಿಧಾನಗಳಿಂದ ಸಾಮ್ರಾಜ್ಯವಾದವನ್ನು ಬುಡಮೇಲು ಮಾಡುವುದು. ಎರಡನೆಯದು,

ಅದರ ಜೊತೆಯಲ್ಲಿಯೇ ಹಳ್ಳಿಪಟ್ಟಣಗಳಲ್ಲಿ ಸ್ವತಂತ್ರ ಸರಕಾರಗಳನ್ನು ನಿರ್ಮಿಸಿ ಅವುಗಳ ಮೇಲೆ ದಾಳಿಯಾಗದಂತೆ ನೋಡಿಕೊಳ್ಳುವುದು. ಈ ಸ್ಥಾನಿಕ ಮತ್ತು ಪ್ರಾದೇಶಿಕ ಸ್ವರಾಜ್ಯ ಸರಕಾರಗಳು ಕೊನೆಗೆ ಒಂದುಗೂಡಿ ಸ್ವತಂತ್ರ ಪ್ರಜಾಪ್ರಭುತ್ವವಾದಿ ಭಾರತವನ್ನು ನಿರ್ಮಿಸುವುದು. ಇದನ್ನು ಸಾಧಿಸಲು ಬ್ರಿಟಿಷರೊಡನೆ ಎಂತಹ ಅಸಹಕಾರವನ್ನೂ ಹೂಡಬಹುದು. ಉದಾಹರಣೆ—ಕಾಂಗ್ರೆಸ್ ಮಂತ್ರಿಮಂಡಲಗಳು ಅಧಿಕಾರ ವಹಿಸಿಕೊಂಡು ಆ ಸ್ಥಾನದಿಂದಲೇ ಈ ಧೋರಣೆಗೆ ನೆರವಾಗಬಹುದು. ಕೆಲಸಗಾರರು ಸಾರ್ವತ್ರಿಕ ಔದ್ಯೋಗಿಕ ಮುಷ್ಕರವನ್ನು ಹೂಡಬಹುದು. ಒಕ್ಕಲಿಗರು ಜಮೀನುದಾರರ ಹೊಲಗದ್ದೆಗಳನ್ನೆಲ್ಲ ಸೆಳೆದುಕೊಳ್ಳಬಹುದು. ಸಂಸ್ಥಾನದ ಪ್ರಜೆಗಳು ರಾಜರ ದಬ್ಬಾಳಿಕೆಯ ವಿರುದ್ಧ ಹೋರಾಟ ಹೂಡಬಹುದು. ಈ ಆಂದೋಲನಕ್ಕೂ ಹಿಂದಿನ ಆಂದೋಲನಗಳಿಗೂ, ೧೯೪೨ರ ಬಂಡಾಯ ಸಹಿತವಾಗಿ, ಇರುವ ಹೆಚ್ಚುಕಡಿಮೆಯೆಂದರೆ—ಸ್ಥಾನಿಕ ಮತ್ತು ಪ್ರಾದೇಶಿಕ ಹೊಣೆಗಾರ ಅಧಿಕಾರಿಗಳು ಈ ಆಂದೋಲನದಲ್ಲಿ ಸೇರಿಕೊಂಡು ಮುಂದಿನ ಎಲ್ಲ ಹೊಣೆಯನ್ನು ತಾವೇ ಸಾಗಿಸಿಕೊಂಡು ಹೋಗುವರು. ಇದೆಲ್ಲ ಬರಿಯ ಸ್ಥೂಲವಾದ ರೂಪರೇಷೆ. ಹೆಚ್ಚಿನ ವಿವರಗಳನ್ನು ಬೇಕಾದಾಗ ಸೇರಿಸಿಕೊಳ್ಳಬಹುದು.

ನಮ್ಮ ಪ್ರಸ್ತುತ ಕಾರ್ಯಕ್ರಮವನ್ನು ಈ ಚಿತ್ರದ ಹಿನ್ನೆಲೆಯಲ್ಲಿ ವಿವರಿಸಲು ಹವಣಿಸುತ್ತೇನೆ.

## ಕಾರ್ಯಕರ್ತ

ಕೆಲಸದ ವಿವೇಚನೆಗಿಂತ ಮೊದಲು ಕೆಲಸ ಮಾಡುವವನ ಬಗೆಗೆ ಒಂದೆರಡು ಮಾತು. ಈಗಿನ ಪರಿಸ್ಥಿತಿಯಲ್ಲಿ ನಮ್ಮ ಕೆಲಸವೇನೆಂದು ಕೇಳಿದರೆ ನಾನು ಹೇಳುವ ಉತ್ತರ—ಕಾರ್ಯಕರ್ತನ ಆಯ್ಕೆ ಮತ್ತು ಶಿಕ್ಷಣ. ಬರಿಯ ಆಂದೋಲನದ ಹೋರಾಟ ಯಾವಾಗಲೋ ಮುಗಿದುಹೋಗಿದೆ. ಈಗ ನಾವು ಇರುವುದು ಕ್ರಾಂತಿಯ ಅವಸ್ಥೆಯಲ್ಲಿ. ಅದರ ಮುಖ್ಯ ಕಾರ್ಯ, ಅಧಿಕಾರವನ್ನು ಸೆಳೆದುಕೊಳ್ಳುವುದು. ಈಗ ನಮಗೆ ಬೇಕಾಗಿರುವುದು ಯುದ್ಧಪೂರ್ವದ ಕಾಂಗ್ರೆಸ್ಸಿಗರಲ್ಲ, ಯುದ್ಧಪೂರ್ವದ ಪಕ್ಷನಿಷ್ಠರಲ್ಲ; ಬೇರೆ ಮಾದ

ರಿಯ ಕೆಲಸಗಾರರು. ಇಂದಿನ ಕ್ರಾಂತಿಕಾರನು ಆಂದೋಲನಾತ್ಮಕ ಕಾರ್ಯದಲ್ಲಿ ಮಾತ್ರವಲ್ಲ, ಸಂಘಟನೆಯ ಕಾರ್ಯದಲ್ಲಿಯೂ ನುರಿತವನಾಗಿರಬೇಕು. ರಚನಾತ್ಮಕ ಕಾರ್ಯವನ್ನೂ ಉಳಿದ ಕಾರ್ಯಗಳನ್ನೂ ಬಲ್ಲವನಾಗಿರಬೇಕು. ಅವನು ಕ್ರಾಂತಿಕಾರಕ ಸಂಘಟನೆಯನ್ನೂ ತಾನು ವ್ಯವಹರಿಸುತ್ತಿರುವ ಜನರನ್ನೂ ಕೂಡಿಸುವ ಸೇತುವೆಯಂತಿರಬೇಕು; ಎಂದರೆ ಜನರಲ್ಲಿ ಕ್ರಾಂತಿಕಾರಕ ಸ್ಫೂರ್ತಿಯನ್ನು ತುಂಬುವ, ಕ್ರಾಂತಿಯಲ್ಲಿ ಅವರ ಸ್ಥಾನಮಾನಗಳನ್ನೂ ಅವರು ಮಾಡಬೇಕಾದ ಕಾರ್ಯವನ್ನೂ ತಿಳಿಸಿಕೊಡುವ ಶಕ್ತಿ ಅವನಲ್ಲಿರಬೇಕು. ಅವನು ಪ್ರಾಮಾಣಿಕನು, ನಿರ್ಭಯನು, ಅಚ್ಚುಕಟ್ಟಿನವನು ಮತ್ತು ಮೈ ಮುರಿದು ದುಡಿಯುವವನಾಗಿರಬೇಕು. ಇದೇ ಕೆಲಸಗಾರನು ಪ್ರತಿಯೊಂದು ಕೆಲಸಕ್ಕೂ ಪ್ರಯೋಜನವಿಲ್ಲ. ಪ್ರತಿಯೊಬ್ಬನಿಗೂ ಎಲ್ಲ ಕೆಲಸದ ಸಾಮಾನ್ಯ ಜ್ಞಾನವಲ್ಲದೆ ಅವನವನ ಬುದ್ಧಿಸಾಮರ್ಥ್ಯ, ಮನಸ್ಸಿನ ಒಲವುಗಳನ್ನು ಅನುಸರಿಸಿ ಬೇರೆ ಬೇರೆ ವಿಶಿಷ್ಟ ಶಿಕ್ಷಣ ಕೊಡಬೇಕು. ವ್ಯಾಪಾರೀ ಸಂಘಗಳಿಗೆ ಸಂಬಂಧಿಸಿದ ಕೆಲಸದಲ್ಲಿ ಕೆಲವರು, ಹಳ್ಳಿಯ ಕೆಲಸದಲ್ಲಿ ಕೆಲವರು, ವೃತ್ತ-ಪತ್ರ ಪ್ರಚಾರಕಾರ್ಯದಲ್ಲಿ ಕೆಲವರು, ನಿರೀಕ್ಷಣೆಯ ಕೆಲಸದಲ್ಲಿ ಕೆಲವರು ನುರಿತವರಾಗಬೇಕು

ನಮ್ಮದು ಬಹಳ ದೊಡ್ಡ ರಾಷ್ಟ್ರ. ದೇಶದ ಬೇರೆ ಬೇರೆ ಭಾಗಗಳಲ್ಲಿ ಕೆಲಸ ಮಾಡುವ ಕ್ರಾಂತಿಕಾರಕ ಕೆಲಸಗಾರರಿಗೆ ಮಾರ್ಗದರ್ಶನ ಮಾಡಲು ಒಮ್ಮೊಮ್ಮೆ ಸಾಧ್ಯವಾಗಲಿಕ್ಕಿಲ್ಲ. ಆದುದರಿಂದ ದೇಶದ ಬಿಕ್ಕಟ್ಟಿನ ಸಂದರ್ಭಗಳಲ್ಲಿ ಸರಿಯಾದ ಮಾರ್ಗಕ್ರಮಣ ಮಾಡಬಹುದಾದ ಸ್ಥಾನಿಕ ಮುಂದಾಳುಗಳನ್ನು ಸಿದ್ಧಗೊಳಿಸಬೇಕು.

ಇಂಥ ಶಿಕ್ಷಣವನ್ನು ಕೆಲಸದ ಮುಖಾಂತರ, ಅಭ್ಯಾಸ ವಿವೇಚನೆಯ ಮುಖಾಂತರ ಕೊಡುವುದಾದರೆ, ಅಂಥ ತಾತ್ಪೂರ್ತಿಕ ಅಥವಾ ಸ್ಥಾಯೀ ಅಭ್ಯಾಸ ವರ್ಗಗಳನ್ನೂ ಶಾಲೆಗಳನ್ನೂ ತೆರೆಯಬೇಕು. ಇದಕ್ಕೆಲ್ಲ ತಕ್ಕ ವಾಙ್ಮಯವೂ ಶಿಕ್ಷಣವೂ ಬೇಕು.

## 'ವಿಶಿಷ್ಟ' ಕೆಲಸ

ಇನ್ನು ಕೆಲಸ ಮಾಡುವ ರೀತಿಯನ್ನು ಕುರಿತು ವಿವೇಚಿಸುವಾ. ಇಲ್ಲಿ ವಿವೇಚಿಸಬಹುದಾದ ಕೆಲಸವನ್ನು ಎರಡು ವಿಧವಾಗಿ ವಿಭಾಗಿಸಬಹುದು—

ಸಾಮಾನ್ಯ ಮತ್ತು ವಿಶಿಷ್ಟವೆಂದು. ವಿಶಿಷ್ಟವೆಂದರೆ ವ್ಯಾಪಾರಿ ಸಂಘ, ಒಕ್ಕಲಿಗರ ಸಂಘ, ವಿದ್ಯಾರ್ಥಿ ಮತ್ತು ಸ್ವಯಂಸೇವಕರ ಸಂಘಟನೆ, ನೇಕಾರರು ಮತ್ತು ಕಬ್ಬು ಬೆಳೆಸುವವರ ಪರಸ್ಪರ ಸಹಕಾರೀ ಸಂಘ, ಒಕ್ಕಲುತನದ ಸಹಕಾರೀ ಸಂಘ ಮುಂತಾದುವು. ಈ ಬಗೆಯ ವಿಶಿಷ್ಟ ಕೆಲಸವು ಸರ್ವಸಾಧಾರಣವಾಗಿ ನಮಗೆ ಗೊತ್ತಿದೆ. ಆದರೆ ಈ ಕೆಲಸವನ್ನು ಪದ್ಧತಿಗನುಸಾರವಾಗಿ, ಹೊಸ ಹೊಸ ಕಾರ್ಯಕ್ಷೇತ್ರಗಳಿಗೆ ಅನ್ವಯಿಸುವಂತೆ ಮಾಡಬೇಕಾಗಿದೆ. ಇವುಗಳ ಬಗೆಗೆ ಯೋಗ್ಯ ಶಿಕ್ಷಣ ಮತ್ತು ಅಭ್ಯಾಸಕ್ರಮಗಳನ್ನು ಬಳಕೆಗೆ ತರಬೇಕಾಗಿದೆ. ನಮ್ಮ ಕ್ರಾಂತಿಕಾರಕ ಉದ್ದೇಶವೂ ಸಾಮಾಜಿಕ ಹಿತವೂ ಇದರ ಮುಖ್ಯ ಅಂಗವಾಗಿರಬೇಕು. ಬೇರೆ ಬೇರೆ ಗುಂಪುಗಳು ತಮ್ಮ ತಮ್ಮಲ್ಲಿ ಸಂಘಟಿಸಿಕೊಂಡು ಉಳಿದ ಗುಂಪುಗಳನ್ನು ದ್ವೇಷಿಸದಂತೆ ನೋಡಿಕೊಳ್ಳಬೇಕು. ಈ ಸಂಘಗಳನ್ನು ತಾತ್ಪೂರ್ತಿಕ ಆರ್ಥಿಕ ಅಭಿವೃದ್ಧಿಗಾಗಲಿ ಬರಿಯ ಶಕ್ತಿ ಪ್ರದರ್ಶನಕ್ಕಾಗಲಿ ಉಪಯೋಗಿಸಿಕೊಳ್ಳಕೂಡದು. ಸಹಕಾರಿ ಸಂಘಗಳು, ವ್ಯಾಪಾರಿ ಸಂಘಗಳು ಅಥವಾ ಒಕ್ಕಲಿಗರ ಸಂಘಗಳು ಬರಿಯ ಆರ್ಥಿಕ ಸಮಸ್ಯೆಗಳನ್ನು ಬಿಡಿಸುವ ಸಂಘಗಳಾಗಿ ಪರಿಣಮಿಸುವ ಸಂಭವವಿರುತ್ತದೆ. ಹೀಗಾಗದಂತೆ ಎಚ್ಚರಪಡಬೇಕು. ಇನ್ನು ಸ್ವಯಂಸೇವಕದಲ ಅಥವಾ ವಿದ್ಯಾರ್ಥಿ ಆಂದೋಲನದ ವಿಷಯ. ಸ್ವಯಂಸೇವಕ ದಲವು ಬರಿಯ ಕವಾಯತಿನ, ವ್ಯಾಯಾಮ ಶಿಕ್ಷಣದ, ಜನಸ್ತೋಮ ನಿಯಂತ್ರಣ (Crowd Controlling)ದ ಸಂಸ್ಥೆಯಾದರೆ ಸಾಲದು. ಪ್ರತಿಯೊಬ್ಬ ಸ್ವಯಂ ಸೇವಕನೂ ಸಮಾಜಸೇವೆಯ ಕೆಲವೊಂದು ರೀತಿಗಳನ್ನು ಬಲ್ಲವನಾಗಿರ ಬೇಕು. ಮತ್ತು ದಲದ ಮುಖ್ಯಸ್ಥನು ಕೂಡ, ಜನರು ಸ್ವಾತಂತ್ರ್ಯ ಸಮರದಲ್ಲಿ ಸಲ್ಲಿಸಬೇಕಾದ ನಿಶ್ಚಿತ ಕೆಲಸವಾವುದೆಂಬುದನ್ನು ಕನಿಷ್ಟ ಪಕ್ಷಕ್ಕೆ ಬಲ್ಲವನಾಗಿರ ಬೇಕು. ವಿದ್ಯಾರ್ಥಿ ಸಂಘಗಳು ಬರಿಯ ಬೊಬ್ಬಾಟ ಮಾಡುವ ಸಂಘವಾಗಿವೆ. ಇದು ಕೂಡದು. ಕಾಂಗ್ರೆಸ್ಸು ವಿದ್ಯಾರ್ಥಿಗಳಲ್ಲಿಯೂ ಅವರ ಸುತ್ತುಮುತ್ತಲಿನ ಸಮಾಜದಲ್ಲೂ ರಚನಾತ್ಮಕ ಚಟುವಟಿಕೆಗಳನ್ನು ಕೈಕೊಳ್ಳಬೇಕು. ಉದಾಹರಣೆಗೆ ಶೈಕ್ಷಣಿಕ ಕೆಲಸ (ಬಡ ಮಕ್ಕಳಿಗೆ ಶಿಕ್ಷಣ, ಪ್ರೌಢಶಿಕ್ಷಣ, ಹಿಂದುಸ್ಥಾನಿ ಪ್ರಚಾರ, ಸಾಂಸ್ಕೃತಿಕ ಕೆಲಸ—ಚರ್ಚಾಕೂಟ, ವಿನೋದಾವಳಿ, ಕಲಾಪ್ರದರ್ಶನ), ಆರೋಗ್ಯ ಶಿಬಿರಗಳ ನಿರೀಕ್ಷಣ (Survey), ವ್ಯಾಪಾರಿ

ಸಂಘ ಇಲ್ಲವೇ ಅಂತಹ ಬೇರೆ ಬೇರೆ ಸಂಘಗಳಿಗೆ ನೆರವಾಗುವುದು, ವಿಹಾರ, ಪ್ರವಾಸ, ಗ್ರಾಮಸುಧಾರಣೆ ಮುಂತಾದ್ದು.

## ಟ್ರೇಡ್ ಯೂನಿಯನ್ ಕಾಂಗ್ರೆಸ್

ಈ ದೇಶದ ಟ್ರೇಡ್ ಯೂನಿಯನ್ ಕಾಂಗ್ರೆಸ್ಸು ರಾಜಕೀಯ ದೃಷ್ಟಿಯಿಂದ ಹಿಂದುಳಿದ ಸಂಸ್ಥೆ. ಯುದ್ಧಕಾಲದಲ್ಲಿ ಈ ಸಂಸ್ಥೆ ಭಾರತದ ಕೆಲಸಗಾರರಿಗೆ ಯಾವ ರಾಜಕೀಯ ಸಹಾಯ ನೀಡುವುದಕ್ಕೂ ಸಮರ್ಥವಾಗದಿದ್ದುದು ಸ್ಪಷ್ಟ. ಇದು ಅದರ ಮಂದಗತಿಯ ಕುರುಹು. ಇಡಿಯ ದೇಶವೇ ಕ್ರಾಂತಿಕಾರಕ ಚಟುವಟಿಕೆಗಳಿಂದ ಅಲ್ಲೋಲಕಲ್ಲೋಲವಾದಾಗ, ಕೂಲಿಕಾರ ವರ್ಗದ ಬಹು ಜನರು ಅವರಲ್ಲಿ ಸೇರಿಕೊಂಡಾಗ, ತನ್ನ ಬೆಂಬಲವಿರುವುದು ಕ್ರಾಂತಿಕಾರಕ ಪಕ್ಷಕ್ಕೋ ಸಾಮ್ರಾಜ್ಯವಾದಿ ಶಕ್ತಿಗೋ ಎಂಬುದನ್ನು ಹೇಳಲಾರದೆ ಟ್ರೇಡ್ ಯೂನಿಯನ್ ಕಾಂಗ್ರೆಸ್ಸು ಬೆಪ್ಪಾಗಿದ್ದಿತು. ಇದೆಲ್ಲವೂ ಭಾರತದ ಕಮ್ಯೂನಿಸ್ಟ್ ಪಕ್ಷದ ಮೋಸಗಾರಿಕೆಯ ಪರಿಣಾಮ. ಈ ಟ್ರೇಡ್ ಯೂನಿಯನ್ನು ಚೇತನಾಮಯವಾಗುವಂತೆ ಯತ್ನಿಸಬೇಕು. ಕ್ರಾಂತಿಯ ಹೋರಾಟನಲ್ಲಿ ಕೂಲಿಕಾರರೂ ಯೋಗ್ಯ ಪಾಲುಗೊಳ್ಳುವಂತೆ ಯತ್ನಿಸಬೇಕು.

ಒಕ್ಕಲಿಗರ ಆಂದೋಲನವೂ ಅಷ್ಟೇ—ಕಮ್ಯೂನಿಸ್ಟರ ಕುಂಟುಚೇಷ್ಟೆಯ ಪರಿಣಾಮದಿಂದ ಕಾಲು ಮುರಿದುಕೊಂಡು ಮೂಲೆಗುಂಪಾಗಿದೆ. ರಾಷ್ಟ್ರೀಯ ಕಾರ್ಯರಂಗದಲ್ಲಿ ದುಡಿಯುವ ಒಕ್ಕಲಿಗ ಸಂಘದ ವಿಭಾಗವು ಹೆಚ್ಚು ಒಕ್ಕಟ್ಟಿನಿಂದ ಕಾರ್ಯವನ್ನು ಪ್ರಾರಂಭಿಸಬೇಕು.

ಉತ್ಪಾದಕರ ಸಹಕಾರಿ ಸಂಘಗಳನ್ನೂ ಒಕ್ಕಲುತನದ ಸಹಕಾರಿ ಸಂಘಗಳನ್ನೂ ಹೊಸದಾಗಿ ನಿರ್ಮಿಸಬೇಕೆಂದು ನನ್ನ ಸೂಚನೆ. ಇಂತಹ ಸಂಘಗಳು ಅಲ್ಲಲ್ಲಿ ಈಗಾಗಲೇ ಸ್ಥಾಪಿತವಾಗಿರಬಹುದು. ಆದರೂ ಒಟ್ಟಿನಲ್ಲಿ ಇದು ನಮಗೆ ಹೊಸಬಗೆಯ ಕೆಲಸ. ಇಂಬು ದೊರೆತಲ್ಲೆಲ್ಲ ಈ ಬಗೆಯ ಕೆಲಸವನ್ನು ಮೊದಲಿಸಬೇಕು.

ನಾವು ಕೈಕೊಳ್ಳಬೇಕಾದ ವಿಶಿಷ್ಟ ಮಾದರಿಯ ಕೆಲಸಗಳನ್ನು ಇಲ್ಲಿ ಸಂಪೂರ್ಣವಾಗಿ ವಿವರಿಸಿಲ್ಲ. ಮೇಲಿನ ಹೆಸರುಗಳು ಉದಾಹರಣೆಗಾಗಿ

ಹೇಳಿದವು ಮಾತ್ರ ಇದಲ್ಲದೆ ಸ್ತ್ರೀ ಸಮಾಜದಲ್ಲಿ ಮಾಡಬೇಕಾದ ಇನ್ನೊಂದು ಮಹತ್ವದ ವಿಶಿಷ್ಟ ಕೆಲಸವಿದೆ. ಇದರ ಬಗೆಗೆ ಅಧಿಕಾರವಾಣಿಯಿಂದ ಹೇಳ ಬಲ್ಲ ಯೋಗ್ಯರು ಆ ಮೇಲೆ ಸರಿಯಾಗಿ ತಿಳಿಸಿ ಹೇಳಬಹುದು. ಇದಲ್ಲದೆ ಗಾಂಧೀಜಿಯವರ ವಿಧಾಯಕ ಕಾರ್ಯಕ್ರಮವಿದೆ. ಅದರಲ್ಲಿ ಯೋಗ್ಯವೆಂದು ಕಂಡ ಅಸ್ಪೃಶ್ಯತಾ ನಿವಾರಣೆ, ಪಾನನಿರೋಧ, ಹಳ್ಳಿಗರ ಆರೋಗ್ಯ, ಮೂಲ ಶಿಕ್ಷಣ ಮುಂತಾದುವುಗಳನ್ನು ನಮ್ಮ ಕಾರ್ಯಕ್ರಮದಲ್ಲಿ ಸೇರಿಸಿಕೊಳ್ಳಬೇಕು ಸಂಕ್ಷೇಪವಾಗಿ ಹೇಳುವುದಾದರೆ ಕೆಲಸವೇನೂ ಕಡಿಮೆ ಇಲ್ಲ. ಜನರ ಸೇವೆಗೆ, ಶಿಕ್ಷಣಕ್ಕೆ, ಸಂಘಟನೆಗೆ ಮತ್ತು ಜನರಲ್ಲಿ ಹೋರಾಟದ ಶಕ್ತಿ ಸಾಮರ್ಥ್ಯ ಗಳನ್ನು ತುಂಬಲು ಅಗತ್ಯವಿರುವ ಸಾಧನಗಳಿಗೆ ಕೊರತೆ ಏನೂ ಇಲ್ಲ. ಕೊರತೆ ಇರುವುದು ಕೆಲಸಗಾರರದು—ವ್ಯವಸ್ಥಿತವಾಗಿ, ಚೆನ್ನಾಗಿ ಕೆಲಸ ಮಾಡುವ ಕೆಲಸಗಾರರದು.

## ' ಸಾಮಾನ್ಯ ' ಕಾರ್ಯಕ್ರಮ

ಈಗ ಸಾಮಾನ್ಯ ಕಾರ್ಯಕ್ರಮದ ಕಡೆಗೆ ಗಮನ ಕೊಡುವಾ. ಇದರಲ್ಲಿ ಮುಖ್ಯವಾದ ಕೆಲಸವೆಂದರೆ ಕಾಂಗ್ರೆಸ್ಸಿನ ಕೆಲಸ—ಕಾಂಗ್ರೆಸ್ ಸಂಸ್ಥೆಯನ್ನು ಬಲಪಡಿಸಿ ಅದು ಹೆಚ್ಚು ಜನಪ್ರಿಯವಾಗುವಂತೆ ಮಾಡುವುದು. ಈಗ ಜನತೆಯ ಮೇಲೆ ಕಾಂಗ್ರೆಸ್ಸಿನ ಪ್ರಭಾವ ಹಿಂದೆ ಎಂದೂ ಇಲ್ಲದಷ್ಟಿದೆ. ಆದರೆ ಕಾಂಗ್ರೆಸ್ ಸಂಸ್ಥೆಯಾದರೋ ಇಂದು ಮೃತಾವಸ್ಥೆಯಲ್ಲಿದೆ, ಶಾಸನಬದ್ಧ ಚಟುವಟಿಕೆಗಳ ಕಾರ್ಯಕ್ರಮದಿಂದ ಅದಕ್ಕೆ ತುಕ್ಕು ಹಿಡಿದಿದೆ. ಕಾಂಗ್ರೆಸ್ ಸಮಿತಿಗಳನ್ನು ಕೂಡಲೇ ಕಾರ್ಯೋನ್ಮುಖವಾಗುವಂತೆ ಮಾಡಿ, ಜನತೆಯ ಸೇವೆಗಾಗಿ ಅವು ಒಳ್ಳೇ ಶಕ್ತಿಯಿಂದ ಹೋರಾಡುವಂತೆ ಸಂಘಟಿಸಬೇಕು. ಕಾಂಗ್ರೆಸ್ಸಿನಲ್ಲಿ ಕೊಳೆ ಸೇರಿಕೊಳ್ಳದಂತೆ ಜಾಗರೂಕರಾಗಿರಬೇಕು.

' ಕಾಂಗ್ರೆಸ್ ಸಮಿತಿಗಳನ್ನು ಕಾರ್ಯೋನ್ಮುಖವಾಗಿ ಮಾಡಬೇಕೆ 'ಂಬ ಮಾತು ಬಹಳ ಹಳೆಯ ಮಾತು. ಆದುದರಿಂದ ಅದಕ್ಕೆ ನನ್ನ ಅರ್ಥ ವೇನೆಂಬುದನ್ನು ಹೇಳುತ್ತೇನೆ. ಕಾಂಗ್ರೆಸ್ ಸಮಿತಿಗಳು ಕಾರ್ಯೋನ್ಮುಖ ವಾಗಬೇಕಾದರೆ ಅಖಿಲ ಭಾರತ ಕಾಂಗ್ರೆಸ್ ಸಮಿತಿಯೂ ಪ್ರಾಂತಿಕ ಸಮಿತಿ ಗಳೂ ಮಾರ್ಗದರ್ಶಿಯಾಗಬೇಕು. ಈ ಸಮಿತಿಗಳು ಮೇಲಿಂದ ಮೇಲೆ

ಕೆಲವೊಂದು ವಿಧಾಯಕ ಕಾರ್ಯವನ್ನು ಸೂಚಿಸಿ ಆ ಕೆಲಸ ನಿಯಮಿತ ವೇಳೆಯಲ್ಲಿ ಆಗಲೇಬೇಕೆಂಬ ಕಟ್ಟು ಹಾಕಬೇಕು. ಅಸ್ಪೃಶ್ಯತಾ ನಿವಾರಣೆ, ಜಾತೀಯ ಐಕ್ಯ, ಪ್ರೌಢ ಶಿಕ್ಷಣ, ಕಾಳಿನ ಸಂಗ್ರಹ, ಹಳ್ಳಿಗಳಲ್ಲಿ ಸ್ವಯಂ ಸೇವಕ ದಲ, ಮುಂತಾದ ಕೆಲಸಗಳನ್ನು ಕಾಂಗ್ರೆಸ್ ಸಮಿತಿಗಳು ಕೈಕೊಳ್ಳಬೇಕು. ಮೇಲ್‌ಸಮಿತಿಗಳು ಇಂಥ ಕೆಲಸಕ್ಕೆ ಬೇಕಾಗುವ ವಾಙ್ಮಯವನ್ನು ಕಾಲ ಕಾಲಕ್ಕೆ ಒದಗಿಸಿ ಭಾಷಣಗಳನ್ನು ಸಿದ್ಧಪಡಿಸಿ ಕೆಲಸಗಾರರಿಗೆ ಸಮಸ್ಯೆಗಳ ಪರಿಚಯು ಮಾಡಿಕೊಡಬೇಕು; ಸಂಶೋಧನ ಕೆಲಸವನ್ನೂ ರಾಜಕೀಯ ಯೋಜನೆಗಳನ್ನೂ ಕೈಕೊಳ್ಳಬೇಕು. ಮೇಲಿನ ಈ ಎಲ್ಲ ಕೆಲಸಗಳನ್ನೂ ಕೆಳಗೆ ನಾನು ವಿವರಿಸಬಹುದಾದ ಕೆಲಸಗಳನ್ನೂ ಕಾಂಗ್ರೆಸ್ಸು ಸ್ವತಃ ಯಾಕೆ ಕೈಕೊಳ್ಳಬಾರದೆಂಬುದು ನನಗೆ ತಿಳಿಯಲೊಲ್ಲದು. ಇದಲ್ಲದೆ ಈ ಕಾಂಗ್ರೆಸ್ ಸಮಿತಿಗಳು ಮೇಲೆ ನಾನು ವಿವರಿಸಿದ ಕಾರ್ಯಕ್ರಮಗಳನ್ನು ಕೈಕೊಳ್ಳುವವೋ ಇಲ್ಲವೋ, ಕೈಕೊಳ್ಳುವುದಾದರೆ ಯಾವಾಗ, ಎಂಬುದನ್ನು ಹೇಳಲಾರೆ. ನಮ್ಮ ಮಟ್ಟಿಗೆ, ಅನುಕೂಲವಿದ್ದ ಕಾಂಗ್ರೆಸ್ ಸಮಿತಿಗಳ ಮುಖಾಂತರ ಈ ಇಡೀ ಕಾರ್ಯಕ್ರಮವನ್ನು ಬಳಕೆಗೆ ತರುವಂತೆ ಮಾಡಬೇಕು. ಈ ಅನುಕೂಲತೆ ಇಲ್ಲದಿದ್ದ ಕಡೆಗಳಲ್ಲಿ ನಮ್ಮ ಪಕ್ಷದ ಮುಖಾಂತರ ಈ ಕಾರ್ಯಕ್ರಮವನ್ನು ಸಾಗಿಸಲಿಕ್ಕೂ ಬೇರೆ ಸ್ವಾತಂತ್ರ್ಯಯೋಧರೊಂದಿಗೆ ಸಂಪರ್ಕ ಬೆಳೆಸುವುದಕ್ಕೂ ಯತ್ನಿಸಬೇಕು.

ಇನ್ನು ಸಾಮಾನ್ಯ ಕಾರ್ಯಕ್ರಮದೊಳಗಿನ ಉಳಿದ ಕೆಲಸವನ್ನು ನೋಡೋಣ. ನಮ್ಮ ವಿಶಿಷ್ಟವಾದ ಕೆಲಸವಿರುವುದು ಬೇರೆ ಬೇರೆ ವರ್ಗಗಳಲ್ಲಿ ಎಂಬುದನ್ನು ನೀವು ಬಲ್ಲಿರಿ. ಯಾವುದೊಂದು ಪಟ್ಟಣವನ್ನು, ಹಳ್ಳಿಯನ್ನು ಅಥವಾ ಪಟ್ಟಣದ ವಿಭಾಗವನ್ನು ಆಯ್ದುಕೊಂಡು ಅಲ್ಲಿ ಕೆಲಸ ಮಾಡಬೇಕೆಂದು ಯೋಚಿಸಿದರೆ ಅದಕ್ಕೆ ಸಾಮಾನ್ಯ ಕೆಲಸವೆಂದು ನಾನು ಹೆಸರಿಟ್ಟಿದ್ದೇನೆ. ಉದಾಹರಣೆಗೆ ಒಂದು ಹಳ್ಳಿಯಲ್ಲಿ ಒಕ್ಕಲಿಗರ ಸಂಘವನ್ನಾಗಲಿ ಪಟ್ಟಣದಲ್ಲಿ ಕೂಲಿಕಾರ ಸಂಘವನ್ನಾಗಲಿ ಮೊದಲಿಸಿದರೆ ಅದೆಲ್ಲ ವಿಶಿಷ್ಟವಾದ ಕಾರ್ಯಕ್ರಮ. ಆದರೆ ಇಡಿಯ ಪಟ್ಟಣವನ್ನು ಇಲ್ಲವೆ ಇಡಿಯ ಹಳ್ಳಿಯನ್ನು ನಮ್ಮ ಕಾರ್ಯಕ್ಷೇತ್ರವೆಂದು ಆಯ್ದುಕೊಳ್ಳುವುದಾದರೆ ಅದು ಸಾಮಾನ್ಯವಾದ ಕಾರ್ಯಕ್ರಮ.

## ಹಳ್ಳಿಗಳಲ್ಲಿ ಕೆಲಸ

ಮೊದಲು ಹಳ್ಳಿಯ ಕಾರ್ಯಕ್ರಮದ ವಿಷಯ. ಆರು ತಿಂಗಳಲ್ಲಿ ಅಲ್ಲಿ ಗ್ರಾಮರಾಜ್ಯವನ್ನು ಸ್ಥಾಪಿಸುವುದು ನಮ್ಮ ಅಂತಿಮ ಧ್ಯೇಯವೆಂದು ಭಾವಿಸುವಾ. ಗ್ರಾಮರಾಜ್ಯವೆಂದರೆ ಹಳ್ಳಿಯ ಸ್ವರಾಜ್ಯ, ಹಳ್ಳಿಯ ಪ್ರಜಾಪ್ರಭುತ್ವ; ಬರಿಯ ಗ್ರಾಮಪಂಚಾಯತಲ್ಲ. ಇಂಥ ಗ್ರಾಮರಾಜ್ಯಗಳು ಹಳ್ಳಿಗರ ಸ್ವಯಂಸ್ಫೂರ್ತಿಯಿಂದಲೇ ನಿರ್ಮಿತವಾಗಬೇಕು, ಸರಕಾರದ ಸಹಾಯದಿಂದ ಅಲ್ಲ. ನನ್ನ ತಿಳಿವಳಿಕೆ ಇಂಥ ಗ್ರಾಮರಾಜ್ಯಗಳು ಹೊರಗಿನವರ ಆಡಳಿತವನ್ನು ಅನಾವಶ್ಯಕಗೊಳಿಸಬಲ್ಲವೆಂಬುದು; ಕ್ರಾಂತಿಕಾಲದಲ್ಲಿ ಹೋರಾಟದ, ಪ್ರತಿಭಟನೆಯ ಕೇಂದ್ರಗಳಾಗಬಲ್ಲವೆಂಬುದು. ಇವುಗಳಿಗೆ ಸ್ವತಂತ್ರ ಪ್ರಜಾಪ್ರಭುತ್ವವಾದೀ ಭಾರತದ ಕಟ್ಟಡದ ಇಟ್ಟಿಗೆಗಳೆನ್ನಬಹುದು.

ಹಳ್ಳಿಯಲ್ಲಿ ಗ್ರಾಮರಾಜ್ಯಗಳನ್ನು ಸ್ಥಾಪಿಸುವ ಮೊದಲು ಎಷ್ಟೋ ರಚನಾತ್ಮಕ ಕಾರ್ಯವನ್ನು ಮಾಡಬೇಕಾಗುವುದು. ಇದಕ್ಕೆ ಈ ಕೆಳಗಿನ ಕಾರ್ಯಗಳನ್ನು ನಾನು ಸೂಚಿಸಬಲ್ಲೆ.

೧) ಕಾಂಗ್ರೆಸ್ ಸದಸ್ಯರನ್ನು ಮಾಡುವುದು. ಪ್ರತಿಯೊಬ್ಬ ಪ್ರೌಢ ಹಳ್ಳಿಗನೂ ಸದಸ್ಯನಾಗುವಂತೆ ಯತ್ನಿಸಬೇಕು. ಇಂಥ ಸದಸ್ಯರ ಸಭೆಗಳು ಸೇರಬೇಕು. ಧ್ವಜವಂದನೆಯ ಕಾರ್ಯಕ್ರಮ.

೨) ಸಾಂಸ್ಕೃತಿಕ ಕೇಂದ್ರದ ನಿರ್ಮಾಣ. ಅಲ್ಲಿ ವೃತ್ತಪತ್ರಗಳು, ಪ್ರೌಢ ಶಿಕ್ಷಣ ವರ್ಗಗಳು, ಜಾನಪದ ಹಾಡುಗಳು, ಅಭ್ಯಾಸ ಮಂಡಲ, ವಾಚನಾಲಯ, ಒಕ್ಕಲುತನದ ಬಗೆಗೆ ಚರ್ಚೆ ಮುಂತಾದ ಕಾರ್ಯಕ್ರಮವನ್ನು ನಡೆಸಬೇಕು.

೩) ಸೇವಾದಲ ಮತ್ತು ಪಂದ್ಯಾಟಗಳ ಏರ್ಪಾಡು.

೪) ಸ್ವಚ್ಛತೆ, ಮಾರ್ಗಸೌಕರ್ಯ, ಒಡ್ಡಿನ ಕೆಲಸ ಮಂತಾದುವುಗಳನ್ನು ವ್ಯಾವಹಾರಿಕವಾಗಿ ಕೈಕೊಳ್ಳುವುದು. ಸಾರ್ವಜನಿಕ ಕಾರ್ಯಕ್ಕೆ ಸಂಯುಕ್ತ ಪರಿಶ್ರಮದ ಏರ್ಪಾಡು.

೫) ಅಸ್ಪೃಶ್ಯತಾ ನಿವಾರಣೆ.

೬) ಜಾತೀಯ ಸೌಹಾರ್ದ.

೭) ಪಾನನಿರೋಧ.
೮) ಪರಿಸ್ಥಿತಿಯ ನಿರೀಕ್ಷಣೆ.
೯) ಸಂಕಷ್ಟಗಳ ಪರಿಹಾರ
೧೦) ಕಾಳಿನ ಸಂಗ್ರಹಗಳ ನಿರ್ಮಾಣ.
೧೧) ಅಕ್ಕಪಕ್ಕದ ಹಳ್ಳಿಗಳಲ್ಲಿ ಪ್ರಚಾರಕಾರ್ಯ.
೧೨) ಸಹಕಾರೀ ವ್ಯಾಪಾರ.
೧೩) ಸ್ತ್ರೀಯರಲ್ಲಿ, ಚಿಕ್ಕಮಕ್ಕಳಲ್ಲಿ ಜಾಗ್ರತೆಯನ್ನುಂಟುಮಾಡು ವುದು.

ಈ ಬಗೆಯ ಕೆಲಸವನ್ನು ಹಳ್ಳಿಗರ ಸಹಕಾರದಿಂದ ಪ್ರಾಮಾಣಿಕ ಕೆಲಸಗಾರರು ಮಾಡಿದರೆ ಹಳ್ಳಿಗಳಲ್ಲಿ ಕೆಲವೇ ತಿಂಗಳಲ್ಲಿ ಗ್ರಾಮರಾಜ್ಯದ ಸ್ಥಾಪನೆ ಸಾಧ್ಯ. ಆ ಮೇಲೆ ಇಂಥ ಹಳ್ಳಿಗಳಲ್ಲಿ ಸಹಕಾರದ ಒಕ್ಕಲುತನ ವನ್ನೂ ಇನ್ನುಳಿದ ಪರಸ್ಪರ ಸಹಕಾರಿ ಉದ್ಯೋಗಗಳನ್ನೂ ಸಹಜವಾಗಿ ಮೊದಲಿಸಬಹುದು.

ಇಂಥ ಕೆಲಸಕ್ಕೆ ಚೆನ್ನಾಗಿ ಪಳಗಿದ ಅನೇಕ ಕೆಲಸಗಾರರ ಆವಶ್ಯಕತೆ ಇದೆ. ಹಿಂದೀ ಆರ್ಥಿಕ, ರಾಜಕೀಯ, ಸಾಮಾಜಿಕ ಸಮಸ್ಯೆಗಳನ್ನು ಬಿಡಿ ಸುವುದು ಇಂಥ ಕೆಲಸದಿಂದಲೇ ಸಾಧ್ಯ. ಇದರಲ್ಲಿ ಕ್ರಾಂತಿಕಾರಕ ಮತ್ತು ವಿಧಾಯಕ ಕಾರ್ಯಕ್ರಮಕ್ಕೂ ಬೇಕಾದಷ್ಟು ಇಂಬಿದೆ.

ಪಟ್ಟಣಗಳಲ್ಲಿ ಮಾಡಬೇಕಾದ ಕೆಲಸದ ಇಂಥದೇ ಒಂದು ಚಿತ್ರವು ನನ್ನ ಕಣ್ಣೆದುರಿಗಿದೆ. ನಗರಗಳಲ್ಲಾಗಲಿ ಪಟ್ಟಣಗಳಲ್ಲಾಗಲಿ ಹೋಬಳಿ-ವಿಭಾಗಗಳೇ ನಮ್ಮ ಕಾರ್ಯಕ್ರಮದ ಕೇಂದ್ರಗಳಾಗಬೇಕು. ಹಳ್ಳಿಗಳಿಗಾಗಿ ಸೂಚಿಸಿದ ಕಾರ್ಯಕ್ರಮವನ್ನೇ ಪಟ್ಟಣಗಳಲ್ಲಿ—ಆವಶ್ಯಕವಾದ ಕೆಲವೊಂದು ಮಾರ್ಪಾಡುಗಳೊಂದಿಗೆ-ಬೇರೆ ಬೇರೆ ವಿಭಾಗಗಳಲ್ಲಿ ಮೊದಲಿಸಬೇಕು. ಬಡವ ರೊಡನೆ ಹೆಚ್ಚು ಸಂಬಂಧ ಬೆಳೆಸುವಂತೆ ನೋಡಿಕೊಳ್ಳುವುದು ಈ ಕೆಲಸದ ಮಹತ್ವದ ವಿಭಾಗ. ಅವರಿಗೆ ಒಪ್ಪುವ ಕಾರ್ಯಕ್ರಮ, ಶಿಕ್ಷಣ ಪ್ರಚಾರ, ಸಂಘಟನೆ ಮುಂತಾದ್ದನ್ನು ಸಿದ್ಧಪಡಿಸಿಕೊಳ್ಳಬೇಕು. ಈ ಕೆಲಸದಲ್ಲಿ ಸೇರಿ ಕೊಳ್ಳಲು ವಿದ್ಯಾರ್ಥಿ ಸಂಘದ ಹುರುಪಿನ ಕಾರ್ಯಕರ್ತರನ್ನು ಕೇಳಿಕೊಳ್ಳ ಬೇಕು.

ಈ ಕಾರ್ಯಕ್ರಮವನ್ನು ಇನ್ನೂ ಬೆಳಸಬಹುದು. ಆದರೆ ಮಾದರಿಯ ಸೂಚನೆಗೆ ಇಷ್ಟೇ ಸಾಕು. ಸ್ಥಾನಿಕ ಅನುಭವದಿಂದ ಇದರಲ್ಲಿ ಹೆಚ್ಚುಕಡಿಮೆ ಮಾಡಿಕೊಳ್ಳಬಹುದು. ನಿಮ್ಮೆದುರಿಗಿರುವ ಈ ಕಾರ್ಯಕ್ರಮ ನಿಮಗೆ ಉಪಯುಕ್ತವಾಗಬಹುದೆಂದು ನನ್ನ ನಿರೀಕ್ಷೆ.

ಮುಕ್ತಾಯಕ್ಕಿಂತ ಮೊದಲು ನಿಮ್ಮ ಗಮನವನ್ನು ಮುಖ್ಯವಾದ ಕ್ರಾಂತಿಕಾರಕ ಗುರಿಯ ಕಡೆಗೆ ಇನ್ನೊವ್ಮೆ ಎಳೆಯಬಯಸುತ್ತೇನೆ. ಒಂದೇ ಕೆಲಸವನ್ನು ಬೇರೆ ಬೇರೆ ವಿಧದಿಂದಲೂ ಬೇರೆ ಬೇರೆ ಉದ್ದೇಶದಿಂದಲೂ ಮಾಡಬಹುದೆಂಬುದನ್ನು ಮರೆಯದಿರಿ. ನಮ್ಮ ಮುಖ್ಯ ಉದ್ದೇಶವೇ ನಮ್ಮ ಕಾರ್ಯದ ರೂಪರೇಷೆಗಳನ್ನು ನಿರ್ಧರಿಸಬೇಕು, ಕ್ರಾಂತಿಕಾರಕ ಚಟುವಟಿಕೆಗಳಿಗೆ ಸಹಾಯಕಾರಿಯಾಗಬೇಕು.

ನಿಮ್ಮ ಸೋದರ—

**ಜಯಪ್ರಕಾಶ**

# ಪರಿಶಿಷ್ಟ

[ಈ ಬರಹವು ಕಾಂಗ್ರೆಸ್ ಸಾಮ್ಯವಾದೀ ಪಕ್ಷದ ಕಾರ್ಯದರ್ಶಿ ಶ್ರೀ ಜಯಪ್ರಕಾಶ ನಾರಾಯಣರು ರಾಮಗಡ ಕಾಂಗ್ರೆಸ್ಸಿನಲ್ಲಿ ಮಂಡಿಸುವುದಕ್ಕಾಗಿ ಕಾಂಗ್ರೆಸ್ ಕಾರ್ಯಕಾರೀ ಸಮಿತಿಗೆ ಕಳಿಸಿದ ಗೊತ್ತುವಳಿಯನ್ನು ಒಳಗೊಂಡಿದೆ. ಇದನ್ನು ಗಾಂಧೀಜಿ 'ಜಯಪ್ರಕಾಶರು ಚಿತ್ರಿಸಿದ ಚಿತ್ರ' ವೆಂಬ ತಲೆಬರಹದಿಂದ ೧೯೪೦ನೇ ಎಪ್ರಿಲ್ ೨೦ರ 'ಹರಿಜನ' ಸಂಚಿಕೆಯಲ್ಲಿ ಮೊದಲು ಪ್ರಕಟಿಸಿದ್ದರು.]

ಕಾಂಗ್ರೆಸ್ಸೂ ಭಾರತವೂ ಬರಲಿರುವ ಮಹತ್ವದ ರಾಷ್ಟ್ರೀಯ ಹೋರಾಟಕ್ಕೆ ಅಣಿಯಾಗುತ್ತಲಿವೆ. ಸ್ವಾತಂತ್ರ್ಯದ ಕೊನೆಯ ಹೋರಾಟ ಬೇಗನೆ ನಡೆಯಲಿದೆ. ಈ ಸಂಗ್ರಾಮ ನಡೆಯಬಹುದಾದುದು ವಿಶ್ವವೆಲ್ಲ ಅದ್ಭುತ ಬದಲಾವಣೆಗಳಿಂದ ನಡುಗುತ್ತಿರುವ ಕಾಲದಲ್ಲಿ. ಯೂರಪ್ ಯುದ್ಧದ ದುರಂತದಿಂದ ಜಗತ್ತಿನ ವಿಚಾರವಂತರೆಲ್ಲ ರಾಷ್ಟ್ರಗಳ ಮತ್ತು ನಾಗರಿಕರ ಪರಸ್ಪರ ಸಹಾನುಭೂತಿಯ ಅಡಿಗಲ್ಲಿನ ಮೇಲೆ ಹೊಸ ಜಗತ್ತನ್ನು ಕಟ್ಟಲು ಕಂಕಣಬದ್ಧರಾಗಿದ್ದಾರೆ. ಇಂತಹ ಸನ್ನಿವೇಶದಲ್ಲಿ ತನ್ನ ಸ್ವರಾಜ್ಯದ ಗೊತ್ತುಗುರಿಗಳೇನು, ಕೊನೆಮೊದಲಿಲ್ಲದ ಕಷ್ಟಸಹನೆಗೆ ತಾನು ಜನತೆಯನ್ನು ಆಹ್ವಾನಿಸುತ್ತಿರುವುದು ಎಂತಹ ಸ್ವರಾಜ್ಯ ಸಂಪಾದನೆಗೆ, ಎಂಬುದನ್ನು ಸ್ಪಷ್ಟವಾಗಿ ವಿವರಿಸುವುದು ತನ್ನ ಕರ್ತವ್ಯವೆಂದು ಕಾಂಗ್ರೆಸ್ಸು ಭಾವಿಸುತ್ತಲಿದೆ

ಸ್ವತಂತ್ರ ಭಾರತವು ದೇಶದೇಶಗಳಲ್ಲಿ ಶಾಂತತೆಯನ್ನು ಪ್ರಸ್ಥಾಪಿಸಲಿಕ್ಕೆ, ಶಸ್ತ್ರ ಪರಿತ್ಯಾಗಕ್ಕೆ ಮತ್ತು ರಾಷ್ಟ್ರ ರಾಷ್ಟ್ರಗಳಲ್ಲಿ ಉಂಟಾಗಬಹುದಾದ ವಿರೋಧವನ್ನು ಕೊನೆಗೊಳಿಸಲಿಕ್ಕೆ ಅಂತರ್‌ರಾಷ್ಟ್ರೀಯ ಸಂಸ್ಥೆಯ ಮೂಲಕವಾಗಿ ಯತ್ನಿಸುತ್ತದೆ. ನೆರೆಹೊರೆಯ ರಾಷ್ಟ್ರಗಳೊಡನೆ—ಅವು ಸಣ್ಣವಿರಲಿ ದೊಡ್ಡವಿರಲಿ – ಅತ್ಯಂತ ಸ್ನೇಹದಿಂದ ವರ್ತಿಸಲು ಹವಣಿಸುತ್ತದೆ. ಅದಕ್ಕೆ ಪರರಾಷ್ಟ್ರಗಳನ್ನು ಆಕ್ರಮಿಸುವ ದುರಾಸೆ ಇಲ್ಲ.

ರಾಷ್ಟ್ರದ ಕಾಯಿದೆಗಳು ಜನತೆಯ ಸ್ಪಷ್ಟ ಅಭಿಪ್ರಾಯದ ಮೇರೆಗೆ ರಚಿತವಾಗುವವು. ರಾಜ್ಯದ ಸುವ್ಯವಸ್ಥೆಗೆ ಜನತೆಯ ನಿರ್ಣಯ ಒಪ್ಪಿಗೆಗಳೇ ಆಧಾರವಾಗುವವು.

ಸ್ವತಂತ್ರ ಭಾರತದ ಆಡಳಿತೆಯು ಪ್ರತಿಯೊಬ್ಬನಿಗೆ ವೈಯಕ್ತಿಕ, ನಾಗರಿಕ, ಸಾಂಸ್ಕೃತಿಕ ಮತ್ತು ಧಾರ್ಮಿಕ ಸ್ವಾತಂತ್ರ್ಯದ ಆಶ್ವಾಸನ ಕೊಡಬಲ್ಲುದು. ಆದರೆ ಭಾರತದ ಜನತೆಯು ಘಟನಾ ಸಮಿತಿಯ ಮೂಲಕವಾಗಿ ರಚಿಸಿದ ರಾಜ್ಯ ಘಟನೆಯನ್ನು ಹಿಂಸೆಯಿಂದ ಬುಡಮೇಲು ಮಾಡುವ ಪ್ರಯತ್ನವನ್ನು ಮಾತ್ರ ಸಹಿಸಲಾರದು.

ಸರಕಾರವು ದೇಶದ ನಾಗರಿಕರಲ್ಲಿ ಯಾವುದೇ ಬಗೆಯ ಭೇದಭಾವವನ್ನು ಎಣಿಸಲಾರದು. ಪ್ರತಿಯೊಬ್ಬ ನಾಗರಿಕನೂ ಹಕ್ಕು ಬಾಧ್ಯತೆಗಳಲ್ಲಿ ಸಮಾನನಾಗಿದ್ದಾನೆ. ಜಾತಿಭೇದಗಳನ್ನೂ ವಿಶಿಷ್ಟ ಹಕ್ಕುಗಳನ್ನೂ ಸಮೂಲ ನಾಶ ಮಾಡಲಾಗುವುದು. ಯಾರಿಗೂ ಆನುವಂಶಿಕ ಸಾಮಾಜಿಕ ಗೌರವದ ಬಿರುದುಗಳಾಗಲಿ ಸರಕಾರದ ಬಿರುದುಗಳಾಗಲಿ ದೊರೆಯಲಾರವು.

## ಆರ್ಥಿಕ ವ್ಯವಸ್ಥೆ

ರಾಷ್ಟ್ರದ ಆರ್ಥಿಕ, ಸಾಮಾಜಿಕ ವ್ಯವಸ್ಥೆಯು ಆರ್ಥಿಕ ಸ್ವಾತಂತ್ರ್ಯದ ಮತ್ತು ಸಾಮಾಜಿಕ ಸಮತೆಯ ತಳಹದಿಯನ್ನೇ ಹೊಂದಿಕೊಂಡಿದೆ. ಇದು ಮುಖ್ಯವಾಗಿ ಸಮಾಜದ ಪ್ರತಿಯೊಬ್ಬ ವ್ಯಕ್ತಿಯ ರಾಷ್ಟ್ರೀಯ ಆವಶ್ಯಕತೆಗಳ ಕಡೆಗೆ ಹೆಚ್ಚು ಮಹತ್ವ ಕೊಡುವುದೇ ಹೊರತು ಇವರಲ್ಲಿ ವೈಯಕ್ತಿಕ ಸ್ವಾರ್ಥಕ್ಕೆ ಇಂಬಿಲ್ಲ. ಸರಕಾರದ ಗುರಿ ಪ್ರತಿಯೊಬ್ಬನ ನೆಮ್ಮದಿಯಾದ ಬಾಳುವೆ, ನೈತಿಕ ಬೌದ್ಧಿಕ ಉನ್ನತಿ. ಸಾಮಾಜಿಕ ಸಮತೆಯ ಈ ಧ್ಯೇಯ ಸಾಧನೆಗಾಗಿ ಸರಕಾರವು ವೈಯಕ್ತಿಕ ಅಥವಾ ಸಹಕಾರಿ ಪದ್ಧತಿಯ ಚಿಕ್ಕ ಚಿಕ್ಕ ಕೈಗಾರಿಕೆಗಳನ್ನು ಪ್ರೋತ್ಸಾಹಿಸಿ, ಅವಕ್ಕೆ ಸಂಬಂಧಪಟ್ಟ ಎಲ್ಲರಿಗೂ ಸರಿಯಾದ ಲಾಭ ದೊರೆಯುವಂತೆ ಏರ್ಪಡಿಸುವುದು. ಪ್ರಮುಖ ಉದ್ಯಮಗಳ ನ್ನೆಲ್ಲ ಕೊನೆಯಲ್ಲಿ ಸಾಂಘಿಕ ಆಡಳಿತಕ್ಕೂ ಸಾಂಘಿಕ ನಿಯಂತ್ರಣಕ್ಕೂ ಒಳಪಡಿ ಸಲು ಯತ್ನಿಸುವುದು. ಇದಕ್ಕಾಗಿ ಸರಕಾರವು ವಾಹನ, ಜಲಮಾರ್ಗ, ಗಣಿ ಮತ್ತು ಇನ್ನಿತರ ಪ್ರಮುಖ ಉದ್ಯೋಗಗಳನ್ನು ರಾಷ್ಟ್ರೀಕರಣ ಮಾಡುವುದು. ಭೂಮಿಯ ಉದ್ಯೋಗವನ್ನು ತ್ವರಿತದಲ್ಲಿಯೇ ವಿಕೇಂದ್ರೀಕರಿಸಲಾಗುವುದು.

ಹಳ್ಳಿಯ ಜೀವನವನ್ನು ಪುನರ್ವ್ಯವಸ್ಥಿತಗೊಳಿಸಿ ಹಳ್ಳಿಗಳು ಸ್ವಯಂ ಪ್ರಭುತ್ವವನ್ನು ಪಡೆಯುವಂತೆ, ಹೆಚ್ಚು ಹೆಚ್ಚು ಸ್ವಯಂಪೂರ್ಣವಾಗುವಂತೆ ಮಾಡಲಾಗುವುದು. ಸಾಗುವಳಿದಾರನೇ ಹೊಲದ ಒಡೆಯನಾಗುವಂತೆ, ಮತ್ತು ತನ್ನ ಕುಟುಂಬದ ಸುಖಜೀವನಕ್ಕೆ ಬೇಕಾದುದಕ್ಕಿಂತ ಹೆಚ್ಚಿನ ಭೂಮಿ ಒಡೆಯನ ಕೈಸೇರದಂತೆ ಭೂ-ಸುಧಾರಣೆಯ ಕಟ್ಟಳೆಯಲ್ಲಿ ಏರ್ಪಾಡು ಮಾಡಲಾಗುವುದು. ಇದರಿಂದ ತರತರದ ಜಮೀನುದಾರೀ ಪದ್ಧತಿಯ ನಿರ್ಮೂಲನವಾಗಿ ಒಕ್ಕಲಿಗರ ದಾಸ್ಯ ವಿಮೋಚನೆಯಾಗುವುದು.

ಸರಕಾರವು ವರ್ಗಗಳ ಹಿತಸಂರಕ್ಷಣೆ ಮಾಡುವುದು. ಆದರೆ ಮೇಲ್ವರ್ಗವು ಬಡವರ, ದಲಿತರ ಹಕ್ಕು ಬಾಧ್ಯತೆಗಳನ್ನು ಕಡೆಗಣಿಸತೊಡಗಿದಾಗ ಸರಕಾರವು ದುರ್ಬಲರ ಪಕ್ಷವನ್ನು ವಹಿಸಿ ಸಾಮಾಜಿಕ ಸಮತೆಯನ್ನು ಕಾಯ್ದುಕೊಳ್ಳುವುದು.

## ರಾಷ್ಟ್ರದ ಉದ್ಯಮಗಳು

ಸರಕಾರದ ಒಡೆತನಕ್ಕೆ, ಆಡಳಿತಕ್ಕೆ ಒಳಪಟ್ಟ ವ್ಯವಹಾರೋದ್ಯಮಗಳಲ್ಲಿ ಕೆಲಸಗಾರರಿಗೆ ತಾವೇ ಆಯ್ದ ಪ್ರತಿನಿಧಿಗಳ ಮೂಲಕ ಪ್ರಾತಿನಿಧ್ಯವು ದೊರೆಯುವುದು; ಮತ್ತು ಸರಕಾರಕ್ಕಿರುವಷ್ಟೇ ಹಕ್ಕು ಬಾಧ್ಯತೆಗಳು ಅವರಿಗೂ ಇರುವವು.

ದೇಶೀಯ ಸಂಸ್ಥಾನಗಳಲ್ಲಿ ಸಂಪೂರ್ಣ ಪ್ರಜಾಪ್ರಭುತ್ವವನ್ನು ಸ್ಥಾಪಿಸಲಾಗುವುದು. ಸಾಮಾಜಿಕ ವೈಷಮ್ಯವನ್ನು ಕೊನೆಗೊಳಿಸಿ ನಾಗರಿಕರಲ್ಲಿ ಸಮತೆಯನ್ನು ಕಾಪಾಡುವುದಕ್ಕಾಗಿ ನಾಮಧಾರೀ ರಾಜಮಹಾರಾಜರ, ನವಾಬರ ಅಸ್ತಿತ್ವಕ್ಕೆ ಎಡೆ ದೊರಯಲಾರದು.

ಕಾಂಗ್ರೆಸ್ಸು ಬಯಸುತ್ತಿರುವ ಆಡಳಿತವ್ಯವಸ್ಥೆ ಇದೇ. ಇದರ ಸಾಧನೆಗಾಗಿ ಅದು ಹಗಲಿರುಳೂ ದುಡಿಯುವುದು. ದೇಶದ ಎಲ್ಲ ಪಂಥದ-ಧರ್ಮದ ಜನರಿಗೆ ಸೌಖ್ಯ, ಸೌಭಾಗ್ಯ, ಸ್ವಾತಂತ್ರ್ಯಗಳು ಈ ರಾಜ್ಯಪದ್ಧತಿಯಿಂದಲೇ ದೊರೆಯುವವೆಂದೂ ಉನ್ನತ, ಉದಾತ್ತ, ನೂತನ ಭಾರತದ ನಿರ್ಮಾಣವು ಇದರಿಂದಲೇ ಆಗಬಲ್ಲುದೆಂದೂ ಕಾಂಗ್ರೆಸ್ಸು ದೃಢವಾಗಿ ನಂಬಿದೆ.

ಜಯಪ್ರಕಾಶರ ಈ ವಿಚಾರ ನನಗೆ ಒಪ್ಪಿಗೆಯಾಯಿತು. ನಾನು ಅವರ ಪತ್ರವನ್ನೂ ಕಾಂಗ್ರೆಸ್ ಕಾರ್ಯಕಾರೀ ಸಮಿತಿಗೆ ಕಳಿಸಿದ ಗೊತ್ತುವಳಿಯ ಕರಡನ್ನೂ ಓದಿದೆ. ಕಾಂಗ್ರೆಸ್ ಕಾರ್ಯಕಾರೀ ಸಮಿತಿ ಪಾಟ್ನಾದಲ್ಲಿ ತೀರ್ಮಾನವಾದ ಒಂದೇ ಒಂದು ಗೊತ್ತುವಳಿಯನ್ನು ರಾಮಗಡ ಅಧಿವೇಶನದಲ್ಲಿ ಏನೊಂದೂ ಬದಲಾವಣೆ ಇಲ್ಲದೆ ಮಂಡಿಸಬೇಕೆಂದು ನಿರ್ಧರಿಸಿದ್ದುದರಿಂದ ಜಯಪ್ರಕಾಶರ ಈ ಕರಡಿನ ಗುಣದೋಷದ ಯಾವ ಚರ್ಚೆಯೂ ನಡೆಯಲಿಲ್ಲ. ಕಾರ್ಯಕಾರೀ ಸಮಿತಿಯ ಈ ನಿರ್ಧಾರದಲ್ಲಿ ದೋಷವೇನೂ ಇರಲಿಲ್ಲ. ಜಯಪ್ರಕಾಶರ ಈ ಕರಡು ಗೊತ್ತುವಳಿಯ ಬಗೆಗೆ ನಾನು ಮಾಡಿದ ಪ್ರಯತ್ನವನ್ನು ಅವರಿಗೆ ತಿಳಿಸಿದೆ. ಹಾಗಾದರೆ, ನಾನು ಅದರ ಪೂರ್ಣ ಘಟನೆಗಳೊಂದಿಗೆ ಅವನ್ನು ಪತ್ರಿಕೆಗಳಲ್ಲಿ ಪ್ರಕಟಿಸಿದರೆ ತನಗೆ ತೃಪ್ತಿಯಾಗುವುದೆಂದು ಶ್ರೀ. ಜಯಪ್ರಕಾಶರು ನನಗೆ ಮರಳಿ ಬರೆದರು.

ಜಯಪ್ರಕಾಶರ ಈ ಬಯಕೆಯನ್ನು ಈಡೇರಿಸುವುದರಲ್ಲಿ ನನಗೆ ತೊಂದರೆ ಏನೂ ಇರಲಿಲ್ಲ. ಭಾರತವು ಸ್ವತಂತ್ರವಾದ ಬಳಿಕ ಆಚರಣೆಗೆ ತರಬೇಕೆಂದು ಶ್ರೀ. ಜಯಪ್ರಕಾಶರು ಸೂಚಿಸಿದ ಯೋಜನೆಗಳಲ್ಲಿ ಒಂದರ ಹೊರತಾಗಿ ಎಲ್ಲವನ್ನೂ ಸರ್ವಸಾಮಾನ್ಯವಾಗಿ ನಾನು ಒಪ್ಪುತ್ತೇನೆ.

## ಸಾಮಾಜಿಕ ನ್ಯಾಯ

ಹಿಂದುಸ್ಥಾನದ ನನಗೆ ಗೊತ್ತಿದ್ದ ಯಾವ ಸಾಮ್ಯವಾದಿಗಿಂತಲೂ ನಾನು ಪ್ರಾಚೀನ ಸಾಮ್ಯವಾದಿಯೆಂದು ನನ್ನ ತಿಳುವಳಿಕೆ. ಆದರೆ ನನ್ನ ಸಾಮ್ಯವಾದ ಯಾವ ಪುಸ್ತಕದಿಂದಲೂ ಕಂಡುಕೊಂಡದ್ದಲ್ಲ, ನನ್ನ ಮನಸ್ಸಿನಲ್ಲಿಯೇ ಹುಟ್ಟಿದ್ದು. ಅದು ನೇರವಾಗಿ ಬಂದದ್ದು ಅಹಿಂಸೆಯಲ್ಲಿರುವ ನನ್ನ ಅಚಲವಾದ ಶ್ರದ್ಧೆಯಿಂದ. ಸಾಮಾಜಿಕ ಅನ್ಯಾಯಕ್ಕೆ ಒಳಗಾದ ಯಾವ ಮನುಷ್ಯನೂ ಎಲ್ಲಿಯೂ ಏಳಿಗೆ ಹೊಂದಲಾರ—ಸಂಪೂರ್ಣ ಅಹಿಂಸಾವಾದಿಯೂ ಆಗಲಾರ. ಆದರೆ ಸಾಮ್ಯವಾದೀ ತತ್ವಗಳ ಪ್ರಚಾರಕ್ಕೆ ಹಿಂಸೆಯೇ ಯೋಗ್ಯ ಮಾರ್ಗವೆಂದು ಪಾಶ್ಚಿಮಾತ್ಯ ಸಾಮ್ಯವಾದಿಗಳು ಭಾವಿಸಿದುದು ಮಾತ್ರ ದುರ್ದೈವದ ಸಂಗತಿ.

ಎಂತಹ ದೀನನೂ ದಲಿತನೂ ಬಲಪ್ರಯೋಗದಿಂದ ಸಾಮಾಜಿಕ ಸಮತೆಯನ್ನು ದೊರಕಿಸುವುದು ಸಾಧ್ಯವೆಂದು ನನಗೆ ತೋರುವುದಿಲ್ಲ. ಆದರೆ ಅವರು ಅನುಭವಿಸುತ್ತಿರುವ ಅನ್ಯಾಯಗಳನ್ನು ಯೋಗ್ಯ ಶಿಕ್ಷಣದಿಂದ ಹಿಂಗಿಸುವುದು ಸಾಧ್ಯವೆಂದು ನಾನು ತಿಳಿದಿದ್ದೇನೆ. ಯೋಗ್ಯ ಶಿಕ್ಷಣವೆಂದರೆ ಅಹಿಂಸಾತ್ಮಕ ಅಸಹಕಾರ. ಕೆಲವು ಸಂದರ್ಭಗಳಲ್ಲಿ ಸಹಕಾರದಂತೆ ಅಸಹಕಾರವೂ ನಮ್ಮ ಕರ್ತವ್ಯವಾಗುತ್ತದೆ. ತನ್ನ ನಾಶನಕ್ಕೆ ಇಲ್ಲವೆ ತನ್ನ ದಾಸ್ಯಕ್ಕೆ ಯಾರೂ ಬೆಂಬಲ ಕೊಡಬೇಕೆಂಬ ನಿಯಮವಿಲ್ಲ. ಹೆರವರ ನೆರವಿನಿಂದ ದೊರೆತ ಸ್ವಾತಂತ್ರ್ಯವು ಎಷ್ಟೇ ಸೌಜನ್ಯಯುಕ್ತವಾಗಿದ್ದರೂ, ಅದನ್ನು ಅಂತಹ ನೆರವಿನ ಬೆಂಬಲವಿಲ್ಲದಿದ್ದಾಗ ಉಳಿಸಿಕೊಳ್ಳುವುದು ಸಾಧ್ಯವಿಲ್ಲ. ಇದನ್ನು ಇನ್ನೊಂದು ರೀತಿಯಿಂದ ಹೇಳುವುದಾದರೆ ಅಂತಹ ಸ್ವಾತಂತ್ರ್ಯ ಸ್ವಾತಂತ್ರ್ಯವೇ ಅಲ್ಲ. ದುರ್ಬಲನು ತನ್ನ ಸ್ವಾತಂತ್ರ್ಯವನ್ನು ಅಹಿಂಸಾತ್ಮಕ ಅಸಹಕಾರದಿಂದ ಪಡೆಯುವ ಕಲೆಯನ್ನು ಕಲಿತಾಗ ಮಾತ್ರ ಅವನಿಗೆ ಅದರ ಮಹತ್ವವು ಗೊತ್ತಾಗುವುದು.

ಹೀಗೆ, ತಮ್ಮ ಯೋಜನೆಯನ್ನು ಕಾರ್ಯರೂಪಕ್ಕೆ ತರಲು ಶ್ರೀ. ಜಯಪ್ರಕಾಶರು ಅಹಿಂಸೆಯನ್ನು ಸಾಧನವನ್ನಾಗಿ ಮಾಡಿಕೊಂಡಿರುವುದರಿಂದ ನನಗೆ ಅತೀವ ಆನಂದವಾಗಿದೆ. ಹಿಂಸೆಯಿಂದ ಎಂದೆಂದಿಗೂ ಸಾಧ್ಯವಾಗದುದನ್ನು ಅಹಿಂಸಾತ್ಮಕ ಅಸಹಕಾರವು—ಅನ್ಯಾಯಗಾರರ ಮನಸ್ಸನ್ನು ಸಂಪೂರ್ಣವಾಗಿ ಪರಿವರ್ತಿಸುವುದರ ಮೂಲಕ ಸಾಧಿಸುವುದರಲ್ಲಿ ನನಗೆ ಎಳ್ಳಷ್ಟೂ ಸಂದೇಹವಿಲ್ಲ. ಭಾರತೀಯರಾದ ನಾವು ಇಂತಹ ಅಹಿಂಸೆಗೆ ಈ ವರೆಗೂ ಅವಕಾಶ ಕೊಡಲಿಲ್ಲ. ಆದರೂ ನಮ್ಮ ಅರೆಬರೆಕೆಯ ಅಹಿಂಸೆಯಿಂದಲೇ ಇಷ್ಟೆಲ್ಲವನ್ನೂ ಸಾಧಿಸಿದ್ದು ಚಿಕ್ಕಪುಟ್ಟ ಮಾತಲ್ಲ.

## ಬೆದರುವ ಕಾರಣವಿಲ್ಲ

ಜಮೀನು ವಿಷಯದಲ್ಲಿ ಜಯಪ್ರಕಾಶರ ಸೂಚನೆ ಭಯಾನಕವೆಂದು ತೋರಬಹುದು. ನಿಜವಾಗಿಯೂ ಅದು ಹಾಗಿಲ್ಲ. ಗೌರವದ ಬದುಕಿಗೆ ಬೇಕಾದುದಕ್ಕಿಂತ ಹೆಚ್ಚು ಭೂಮಿ ಒಬ್ಬನ ಅಧೀನದಲ್ಲಿರಕೂಡದು. ಜನಸಾಮಾನ್ಯರಿಗೆ ತಮ್ಮದೆನ್ನುವ ಭೂಮಿ ಇಲ್ಲದಿರುವುದೇ ಅವರ ಉಗ್ರ ಬಡತನಕ್ಕೆ ಕಾರಣವೆಂಬ ಸಂಗತಿಯನ್ನು ಅಲ್ಲಗಳೆಯುವರು ಯಾರು?

ಆದರೆ ಸುಧಾರಣೆಯ ವಿಷಯದಲ್ಲಿ ದುಡುಕಿ ಪ್ರಯೋಜನವಿಲ್ಲ. ಇದನ್ನು ಅಹಿಂಸೆಯಿಂದ ಸಾಧಿಸಬೇಕಾದರೆ ಧನವಂತ ದರಿದ್ರರಿಬ್ಬರಿಗೂ ಶಿಕ್ಷಣ ಕೊಡಬೇಕು. ಧನವಂತರಿಗೆ, ತಮ್ಮ ಮೇಲೆ ಎಂದಿಗೂ ಒತ್ತಾಯವಾಗಲಿಕ್ಕಿಲ್ಲವೆಂಬ ಆಶ್ವಾಸನ ಕೊಡಬೇಕು. ದರಿದ್ರರಿಗೆ, ತಮ್ಮ ಮನಸ್ಸಿನ ವಿರುದ್ಧವಾಗಿ ನಡೆಯಲು ತಮ್ಮನ್ನು ಯಾರೂ ಒತ್ತಾಯ ಮಾಡಲಾರರೆಂಬ ಆತ್ಮವಿಶ್ವಾಸವೂ, ಅಹಿಂಸೆಯಿಂದ ಅರ್ಥಾತ್ ಆತ್ಮಶೋಷಣೆಯಿಂದ ಸ್ವಾತಂತ್ರ್ಯವನ್ನು ದೊರಕಿಸಬಲ್ಲೆವೆಂಬ ನಿರ್ಧಾರವೂ ಬರುವಂತೆ ಶಿಕ್ಷಣ ಕೊಡಬೇಕು. ಈ ಅಂತಿಮ ಧ್ಯೇಯ ಸಾಧನೆಯು ನಮ್ಮ ಉದ್ದೇಶವಾದರೆ ನಾನು ಸೂಚಿಸಿದ ಈ ಶಿಕ್ಷಣವನ್ನು ಕೂಡಲೇ ಆರಂಭಿಸಬೇಕು ಇದರ ಮೊದಲ ಹೆಜ್ಜೆಯಾಗಿ ಪರಸ್ಪರ ವಿಶ್ವಾಸದ, ಗೌರವದ, ವಾತಾವರಣವನ್ನು ನಿರ್ಮಿಸಬೇಕು. ಜನತೆಯಲ್ಲಿಯೂ ಧನಿಕರಲ್ಲಿಯೂ ಹಿಂಸಾತ್ಮಕ ವಿರೋಧವು ಆಗ ಮಾತ್ರ ಇಲ್ಲದಂತಾಗುವದು.

ಆದುದರಿಂದ ಜಯಪ್ರಕಾಶರ ಯೋಜನೆಯನ್ನು ಅಹಿಂಸಾರೂಪದಿಂದ ಎತ್ತಿ ಹಿಡಿಯಲು ನನಗೆ ಯಾವ ತೊಂದರೆಯೂ ಇಲ್ಲ; ಆದರೆ ಸಂಸ್ಥಾನಿಕರನ್ನು ಕುರಿತ ಅವರ ಯೋಜನೆಯನ್ನು ಮಾತ್ರ ನಾನು ಒಪ್ಪಲಾರೆ. ಕಟ್ಟಳೆಯ ಮೇರೆಗೆ ಸ್ವಂಸ್ಥಾನಿಕರು ಸ್ವತಂತ್ರರು. ಅವರ ಸ್ವಾತಂತ್ರ್ಯವು ಅವರಿಗಿಂತ ಬಲಿಷ್ಠರನ್ನು ಅವಲಂಬಿಸಿರುವುದರಿಂದ ಆ ಸ್ವಾತಂತ್ರ್ಯಕ್ಕೆ ಹೆಚ್ಚಿನ ಬೆಲೆ ಇಲ್ಲವೆಂಬುದು ನಿಜ. ಆದರೆ ನಮ್ಮ ಮಟ್ಟಿಗಾದರೋ ಅವರು ಸ್ವತಂತ್ರರೆಂಬುದು ಖಂಡಿತ ಜಯ ಪ್ರಕಾಶರ ಯೋಜನೆಯನ್ನು ನಮ್ಮ ಮಟ್ಟಿಗೆ ನಾವು ಅಹಿಂಸಾತ್ಮಕವಾಗಿ ಆಚರಣೆಗೆ ತಂದರೆ ಸಂಸ್ಥಾನಿಕರೆಲ್ಲ ಇಲ್ಲದಂತಾಗುವ ಪರಿಸ್ಥಿತಿ ಬಂದೀತೆಂದು ನಾನು ಭಾವಿಸಲಾರೆ. ಯಾವ ನಿರ್ಧಾರವಾದರೂ ದೇಶವು ಒಮ್ಮನಸ್ಸಿನಿಂದ ಆಚರಿಸಿದರೆ ಮಾತ್ರ ಫಲಿಸಬಲ್ಲುದು. ಆದುದರಿಂದ ದೊಡ್ಡ ದೊಡ್ಡ ಸಂಸ್ಥಾನಿಕರ ಹಕ್ಕುಬಾಧ್ಯತೆಗಳನ್ನು ಉಳಿಸುವ ನಿರ್ಧಾರವೇ ಯೋಗ್ಯವೆಂದು ನನಗೆ ತೋರುತ್ತದೆ. ಒಂದು ರೀತಿಯಿಂದ ಇದು ಇಂದಿನ ಸ್ಥಿತಿಗಿಂತ ಬಹಳ ಲೇಸು ಇನ್ನೊಂದು ರೀತಿಯಿಂದ, ಭಾರತದ ಉಳಿದ ಭಾಗಗಳಂತೆ ಸಂಸ್ಥಾನದ ಪ್ರಜೆಗಳೂ ತಮ್ಮ ಮಟ್ಟಿಗೆ ಸ್ವರಾಜ್ಯವನ್ನನುಭವಿಸುವ ಅನುಕೂಲತೆಯನ್ನೊದಗಿಸಿ ಸಂಸ್ಥಾನಿಕರ ಹಕ್ಕುಬಾಧ್ಯತೆಗಳನ್ನೂ ನಿಯಂತ್ರಿಸುವುದು. ಸಂಸ್ಥಾನದ ಪ್ರಜೆಗಳಿಗೆ ವಾಕ್‌ಸ್ವಾತಂತ್ರ್ಯ, ಮುದ್ರಣ

ಸ್ವಾತಂತ್ರ್ಯ, ಚೊಕ್ಕಟ ನ್ಯಾಯ ದೊರೆಯುವವು. ಬಹುಶಃ ಜಯಪ್ರಕಾಶರಿಗೆ ಸಂಸ್ಥಾನಿಕರು ತಮ್ಮ ನಿರಂಕುಶ ಪ್ರಭುತ್ವವನ್ನು ತಾವಾಗಿಯೇ ತ್ಯಜಿಸುವುದರಲ್ಲಿ ವಿಶ್ವಾಸವಿರಲಾರದು. ಆದರೆ ನನಗೆ ಇದೆ. ಇದಕ್ಕೆ ಮೊದಲನೆಯ ಕಾರಣ ನಮ್ಮಂತೆ ಅವರೂ ಮನುಷ್ಯರು. ಎರಡನೆಯ ಕಾರಣ ಅಹಿಂಸೆಯ ಶಕ್ತಿಯಲ್ಲಿ ನನಗಿರುವ ಅಚಲ ವಿಶ್ವಾಸ. ಆದುದರಿಂದ ನಮ್ಮ ಹೃದಯದಲ್ಲಿ ನಾವು ಸತ್ಯವಂತರಾಗಿ ನಮ್ಮ ಶ್ರದ್ಧೆಯಲ್ಲಿ ದೃಢ ವಿಶ್ವಾಸವನ್ನಿಟ್ಟರೆ, ಸಂಸ್ಥಾನಿಕರೂ ಇತರರೂ ಸತ್ಯವಾದಿಗಳು, ಹೊಣೆಗಾರರು ಆಗುವುದರಲ್ಲಿ ಸಂದೇಹವಿಲ್ಲ. ಈಗ ನಾವು ಅರೆಮನಸ್ಸಿನವರಾಗಿದ್ದೇವೆ. ಅರೆಮನಸ್ಸಿನ ಯತ್ನದಿಂದ ಸ್ವರಾಜ್ಯದ ದಾರಿ ಎಂದಿಗೂ ದೊರೆಯಲಾರದು. ಅಹಿಂಸೆಯ ಆದಿ ಅಂತ್ಯಗಳು ಆತ್ಮ ನಿರೀಕ್ಷಣೆಯಲ್ಲಿಯೇ ಇವೆ.

**ಮುಗಿದುದು**

# ಶ್ರೀ ರಂ. ರಾ. ದಿವಾಕರರ ಗ್ರಂಥಗಳು

| | |
|---|---|
| ಅಂತರಾತ್ಮನಿಗೆ | ೦—೧೨—೦ |
| ಭಕ್ತಿಸೂತ್ರಗಳು | ೦—೬—೦ |
| ವಚನಶಾಸ್ತ್ರ ರಹಸ್ಯ | ೫—೦—೦ |
| ಉಪನಿಷತ್ ರಹಸ್ಯ | ೩—೦—೦ |
| ಉಪನಿಷತ್ ಪ್ರಕಾಶ | ೨—೮—೦ |
| ಉಪನಿಷತ್ ಕಥಾವಲಿ | ೦—೧೨—೦ |
| ಹರಿಭಕ್ತಿಸುಧೆ | ೨—೦—೦ |
| ಕರ್ಮಯೋಗ | ೦—೧೨—೦ |
| ಗೀತೆಯಗುಟ್ಟು | ೨—೮—೦ |
| ಶ್ರೀ ರಾಮಕೃಷ್ಣ ಚರಿತಾಮೃತ | ೩—೦—೦ |
| ಮಹಾತ್ಮರ ಮನೋರಂಗ | ೪—೮—೦ |
| ಬಾಪೂ | ೨—೦—೦ |
| ಸತ್ಯಾಗ್ರಹ | ೩—೮—೦ |
| ಸೆರೆಯ ಮರೆಯಲ್ಲಿ | ೨—೮—೦ |
| ಪ್ರಾಂತಭಾಷೆ-ರಾಷ್ಟ್ರಭಾಷೆ | ೦—೬—೦ |
| ರಾಷ್ಟ್ರೀಯ ಶಿಕ್ಷಣ | ೦—೮—೦ |
| ನಾಗರಿಕ (ಹಿಂದಿಯಲ್ಲಿ) | ೦—೮—೦ |

**ಮಾರಾಟಗಾರರು:**

**ಸಾಹಿತ್ಯ ಭಾಂಡಾರ ಹುಬ್ಬಳ್ಳಿ**

# ತಪ್ಪು—ಒಪ್ಪು

(ಅರ್ಥವಾಗದ ಈ ಕೆಳಗಿನ ತಪ್ಪುಗಳನ್ನು ದಯವಿಟ್ಟು ತಿದ್ದಿಕೊಂಡು ಓದಿರಿ)

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೪ (ಜಯಪ್ರಕಾಶ) | ೧೬ | ಅನುಭವಿಕ | ಅನನುಭವಿಕ |
| [illegible] ,, | ೧೭ | ಗೆಲ್ಲುವವರೆ | ಗೆಲ್ಲುವ ವರೆಗೆ |
| ೫೩ | ೧೦ | ಬೇಡಿಹ | ಬೇಡಿಕೆ |
| ೮೪ | ೧೧ | ಎರಡನ್ನು | ಎಡರನ್ನು |
| ೮೪ | ೧೬ | ನಲೆಗಟ್ಟಿನ | ನೆಲಗಟ್ಟಿನ |
| ೯೦ | ೧೨ | ಸುಲಿಗೆಯಂದ | ಸುಲಿಗೆಯಿಂದ |
| ೯೧ | ೨ | ಮುಂದೆ ಸಾಗಲಾರದು | ಮುಂದೆಸಾಗಲಾರದು |
| ೯೨ | ೧೫ | ವಿಕಾಸ | ವಿಕಾಸದ |
| ೧೨೨ | ೨ | ಉತ್ತವನ್ನೇ | ಉತ್ತರವನ್ನೇ |
| ೧೨೬ | ೫ | ಮಧ್ಯದಲ್ಲಿ | ಮಧ್ಯದಲ್ಲಿ. |
| ೧೨೮ | ೫ | ಸಾಮ್ಯಾನ್ಯವಾಗ ಬೇಕೆಂದಲ್ಲ | ಸಾಮರಸ್ಯವಾಗ ಬೇಕೆಂದಲ್ಲ, |
| ೧೨೯ | ೨ | ಮುಂದೆ ಬರಬಹುದು | ಮುಂದೆಬರಬಹುದು. |
| ೧೩೦ | ೧ | ಮುಂದೆ ಮಾಡಿದ | ಮುಂದೆಮಾಡಿದ |
| ೧೩೫ | ೮ | ಅಂದೊಂದು | ಅದೊಂದು |
| ೧೩೯ | ೨೩ | ಪರಿಸ್ಥಿಯನ್ನು | ಪರಿಸ್ಥಿತಿಯನ್ನು |
| ೧೪೯ | ೫ | ಯೂನ್ನಿನಲ್ಲಿ | ಯೂನಿಯನ್ನಿನಲ್ಲಿ |
| ೧೫೦ | ೨೨ | ಪಾರ್ಕ್ಸ್‌ವಾದವೇ | ಮಾರ್ಕ್ಸ್‌ವಾದವೇ |
| ೧೫೨ | ೧೨ | ತೊಂದರೆ | ತೋಂದರೆ. |
| ೧೫೪ | ೨ | ಕಮ್ಯುನಿಸ್ಟ | ಕಮ್ಯುನಿಸ್ಟ್ |
| ೧೫೪ | ೨೮ | ಸಂದರ್ಥವೆಲ್ಲಿರುತಿದ್ದಿತು? | ಸಂದರ್ಭವೆಲ್ಲಿರುತಿದ್ದಿತು? |
| ೧೬೦ | ೨೬ | ಮಾಡಲು | ತರಲು |
| ೧೬೨ | ೨೩ | ಧೋರಣೆಗೆ | ಧೋರಣೆ |
| ೧೬೪ | ೧೬ | ಐತಿಹಾಸಿಕ ವ | ಐತಿಹಾಸಿಕ |

| | | |
|---|---|---|
| ೨೯ | ಹೇಳಬಲ್ಲದೆ ? | ಹೇಳಬಲ್ಲರೆ ? |
| ೧೭ | ಬೇರೆ | ಬೇರೆ ಯಾವ |
| ೧೪ | ಉಪಧ್ಯಾಪಗಳು | ಉಪದ್ವ್ಯಾಪಗಳು |
| ೬ | ಹೇಳುತ್ತಿರುವುದರಿಂದ | ಪ್ರತಿಯೊಬ್ಬರೂ ಹೇಳುತ್ತಿರುವುದರಿಂದ |
| ೯ | ಮಾತ್ವ | ಮಾತ್ರ |
| ೮ | ಮೊದಲಾದ | ಕೊಡಲಾದ |
| ೨೨ | ದೊರೆ | ದೊರೆತ |
| ೧೬ | ಹಿಂದೆಂದರೆ | ಹಿಂಡೆಂದರೆ |
| ೧೩ | ಸಾಮಾಜಿಕ ಸಮ | ಸಾಮಾಜಿಕ ಸಮಾ |
| ೧೦ | ಮಾಡಿದೆಪೆಂದೇ | ಮಾಗಿದೆಯೆಂದೇ |
| ೨೦ | ಸಹಿಸಲಾರೆ | ಸಹಿಸಲಾರ. |
| ೨ | ಸಿದ್ಧರಾಗುವುದರಲ್ಲಿ | ಸಿದ್ಧವಾಗುವುದರಲ್ಲಿ |
| ೧೬ | ವರ್ತತೆಯುನ್ನು | ವರ್ತನೆಯುನ್ನು |
| ೨೪ | ಅಸಮ್ಮತಿ | ಅಸಮ್ಮತಿ. |
| ೧೦ | ರಾಯರು | ರಾಯರು, |
| ೨ | ನಿಲ್ಲಬಾರದು | ನಿಲ್ಲಲಾರದು |
| ೧೮ | ಬ್ರಿಟಿಷ | ಬ್ರಿಟಿಷ್ |
| ೧೭ | ಸರಕಾಗರಳ | ಸರಕಾರಗಳ |
| ೩ | ಸಂದರ್ಭಗಳ | ಸಂದರ್ಭಗಳ ಮೂಲಕ |
| ೨೬ | ಬೆಳೆಸ ಬೇಕು | ಬೆಳೆಸಬೇಕು; |
| ೧೫ | ಮುಂದೆ ಸಾಗಲು | ಮುಂದೆಸಾಗಲು |
| ೧ | ಮಾತ್ರ | ಮಾತ್ರ. |
| ೨೦ | ವಿಭಾಗಗಳೇ | ವಿಭಾಗ—ಗಳೇ |
| ೨೪ | ವದಾತ್ತ, | ಉದಾತ್ತ, |
| ೨೦ | ಹಟ್ಟಿದ್ದು | ಹುಟ್ಟಿದ್ದು. |
| ೧೭ | ಮೂಲಕ | ಮೂಲಕ— |